# ಶ್ರೀ ಶಾರದಾದೇವಿ ಸಂಭಾಷಣೆ





ಶ್ರೀ ರಾಮಕೃಷ್ಣ ಆಶ್ರಮ
ಮೈಸೂರು.

"ಶ್ರೀ ಶಾರದಾದೇವಿ 'ಸಂಭಾಷಣೆ" ಗ್ರಂಥಕ್ಕೆ ಮೂಲ ವಂಗಭಾಷೆಯ "ಮಾಯೇರ್ ಕಥಾ" ಎಂಬ ಗ್ರಂಥ. ಕೆಲವು ಭಕ್ತರು ಬರೆದಿಟ್ಟ ದಿನಚರಿ ಪುಸ್ತಕದಿಂದ ಇದನ್ನು ಸಂಗ್ರಹಿಸಲಾಗಿದೆ. ಈ ಸಂಭಾಷಣೆಯಲ್ಲಿ ಶ್ರೀಮಾತೆಯವರ ಶೀಲ ಅತಿ ಸುಂದರವಾಗಿ ಚಿತ್ರಿತವಾಗಿದೆ. ಅವರ ಸರಳತೆ, ಪ್ರೀತಿ, ದಯೆ, ಅನುಕಂಪ, ಎಲ್ಲಕ್ಕಿಂತ ಹೆಚ್ಚಾಗಿ ತಾಯೊಲುಮೆಯ ಝರಿ ಎಲ್ಲ ಕಡೆಗಳಿಂದಲೂ ಜಿನುಗಿ ಬಂದು ಸೇರಿ

# ಮುನ್ನುಡಿ

---

ಶ್ರೀರಾಮಕೃಷ್ಣಪರಮಹಂಸರ ದೈವೋನ್ಮಾದವನ್ನು ತಗ್ಗಿಸಲು ಅವರಿಗೆ ಮದುವೆ ಮಾಡಿದ ಹೆಣ್ಣೆ ಶ್ರೀ ಶಾರದಾದೇವಿ. ಆದರೆ ಅವರ ದೈವೋನ್ಮಾದವನ್ನು ತಗ್ಗಿಸುವ ಬದಲು ಶ್ರೀ ಶಾರದಾದೇವಿಯವರಿಗೂ ಇದು ತಾಕಿ ಇವರನ್ನೂ ಪರಮಹಂಸರ ಸಾಕ್ಷಾತ್ಕಾರ ಶಿಖರದೆಡೆಗೆ ಒಯ್ಯಿತು. ಪರಮಹಂಸರು ಯಾವ ಸಂದೇಶವನ್ನು ಸಾರುವುದಕ್ಕೆ ಈ ಜೀವನಕ್ಕೆ ಬಂದರೊ ಅದನ್ನು ಶ್ರೀ ಶಾರದಾದೇವಿ ಅವರು ತಮ್ಮ ಬಾಳ ಉಸಿರಾಗಿಮಾಡಿಕೊಂಡು ಜಗದ ಬವಣೆಗೆ ಸಿಕ್ಕಿ ನೊಂದು ಬಂದ ಜೀವರನ್ನೆಲ್ಲ ಉದ್ಧರಿಸಿದರು.

ಶ್ರೀ ಶಾರದಾದೇವಿ ಅವರ ಜೀವನ ಒಂದು ದೃಷ್ಟಿಯಿಂದ ಪರಮಹಂಸರ ಜೀವನಕ್ಕಿಂತ ಕಷ್ಟವೆನ್ನಬಹುದು. ಪರಮಹಂಸರು ಪ್ರಚಂಡ ಸಾಧನೆ ಮಾಡಿದರು. ಭಗವಂತನನ್ನು ಯಾವ ಯಾವ ಭಾವದಲ್ಲಿ ನೋಡಿ ತಣಿಯಬಹುದೊ ಅದರಲ್ಲೆಲ್ಲಾ ಪಾರಂಗತರಾದರು. ಸಾಕ್ಷಾತ್ಕಾರಾನಂತರ ಅತ್ಯುಚ್ಚಸಾಧನೆಯ ಮಟ್ಟಕ್ಕೆ ಮುಟ್ಟದ ಶಿಷ್ಯಗಣದಿಂದ ಆವೃತರಾಗಿದ್ದರು. ಆದರೆ ಶ್ರೀ ಮಾತೆಯವರ ಬದುಕು ಬೇರೆ ರೂಪನ್ನು ತಾಳಿತು. ಹಲವು ಬಗೆಯ ಕೋಟಲೆಯಿಂದ ತುಂಬಿ ತುಳುಕಾಡುತ್ತಿದ್ದ ಸಂಸಾರ ಪಂಕದಲ್ಲೇ ಅವರು ಇರಬೇಕಾಯಿತು. ಒಂದು ಕಡೆ ಶ್ರೀಮಾತೆ ಎಂದರೆ ಹಣದ ಮರವೆಂದು ಭಾವಿಸಿದ್ದ ನೆಂಟರು, ಇನ್ನೊಂದು ಕಡೆ ಜಗಳಗಂಟರ ತಂಡ, ಮತ್ತೊಂದುಕಡೆ ಹುಚ್ಚರು. ಬಂದ ಶಿಷ್ಯರೆಲ್ಲರೂ ಭಗವತ್ಪ್ರೇರಣೆಯಿಂದ ಮಾತ್ರ ಆಕರ್ಷಿತರಾಗಿ ಬಂದವರಲ್ಲ. ಪ್ರಪಂಚದ ಹಲವಾರು ಆಸೆ ಆಕಾಂಕ್ಷೆಗಳನ್ನು ಬಯಸುತ್ತಿದ್ದವರೂ ಇದ್ದರು. ಕೆಲವು ವೇಳೆ ಇಂತಹ ವಾತಾವರಣದಲ್ಲಿ ಇದ್ದು ಬೇಜಾರಾದಾಗ, “ಅಯ್ಯೋ! ಪರಮಹಂಸರು ನನಗೆ ಒಂದು ಸೇರು ಹಾಲಿಗೆ ನಾಲ್ಕೈದು ಸೇರು ನೀರು ಬೆರಸಿದಂತೆ ಇರುವ ಭಕ್ತರನ್ನೇ ಬಿಟ್ಟು ಹೋಗಿರುವರು. ನೀರನ್ನು ಇಂಗಿಸಲು ಒಲೆ ಊದಿ ಊದಿ ಸಾಕಾಗುವುದು” ಎನ್ನುತ್ತಿದ್ದರು.

ಜೀವನದ ಎಲ್ಲಾ ಕಾರ್ಯಕ್ಷೇತ್ರದಲ್ಲಿಯೂ ತಾಯಿ ಪಾತ್ರ ಧರಿಸಿರುವ ಜೀವಿಯ ಹಣೆಯ ಬರಹವೆ ಇದು. ಸಾಧಾರಣ ಮನೆಯಲ್ಲಿ ತಾಯಿಯಾದರೂ ಒಂದೆ, ಶ್ರೀಮನ್ನಾರಾಯಣನ ಸತಿಯಾದ ಲಕ್ಷ್ಮೀಯಾದರೂ ಒಂದೆ. ಒಂದು ಸಣ್ಣ ತಾಯಿಯ ಪಾತ್ರ, ಮತ್ತೊಂದು ಜಗಜ್ಜನನಿಯ ಪಾತ್ರ; ಒಂದು ಸಣ್ಣ ಸಂಸಾರ, ಮತ್ತೊಂದು ವಿಶ್ವಸಂಸಾರ. ಮಕ್ಕಳು ಆರೋಗ್ಯವಾಗಿ ಉಂಡು ನಲಿಯುತ್ತಿರುವಾಗ ತಂದೆ ಮಕ್ಕಳನ್ನು ಮುದ್ದಿಸಲು ಸ್ವಲ್ಪಕಾಲ ಎತ್ತಿಕೊಳ್ಳುವನು. ಅವು ರೋಗ ರುಜಿನಗಳಿಗೆ ತುತ್ತಾಗಿ ತಂಟೆಮಾಡಿ ಅಳುತ್ತಿರುವಾಗ ಸಮಾಧಾನ ಮಾಡಿ ದಿನವೆಲ್ಲ ದುಡಿದು ಬೆಳೆಸುವ ಜವಾಬ್ದಾರಿ ತಾಯಿಯದು. ಹಾಗೆಯೇ ಶ್ರೀ ಶಾರದಾ ದೇವಿಯವರಿಗೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸಿಕ್ಕಿದ ಮುಕ್ಕಾಲುಪಾಲು ಭಕ್ತಗಣದಲ್ಲಿ ಇನ್ನೂ ದೈವೋನ್ಮಾದ ತೀವ್ರವಲ್ಲದವರು, ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆ ಇದ್ದವರೇ ಹೆಚ್ಚು. ಇಂತಹ ಜನ ಕೊಡುವ ಕೋಟಲೆ ಸಹಿಸಿ, ಪ್ರಾಪಂಚಿಕರ ಮಾತು ಕೇಳಿ ಕೇಳಿ ಹೃದಯ ದಹಿಸುತ್ತಿದ್ದರೂ, ಅವರೆಲ್ಲ ದೇವರೆಡೆಗೆ ತೆರಳಲಿ ಎಂದು ಸದಾ ಆಶೀರ್ವದಿಸಿ, ಮನಸ್ಸನ್ನು ಅನವರತ ಭಗವಂತನಡಿದಾವರೆಯಲ್ಲಿ ಮುಡುಪಾಗಿಡಬೇಕಾದರೆ ಇದೊಂದು ಅಸಾಧಾರಣ ತಪಸ್ಸು. ಶರಾಘಾತದಿಂದ ಜರ್ಝರಿತನಾಗಿ ದೇಹ ನೋವಿನಿಂದ ನರಳುತ್ತಿದ್ದರೂ ಸದಾ ಕೃಷ್ಣ ಚಿತ್ತನಾದ ಭೀಷ್ಮನ ನೆನಪನ್ನು ತರುವುದು ಇವರ ಜೀವನ. ಕೋಟಲೆಯಿಂದ ದೂರವಿರುವುದು ಸುಲಭ. ಹಾಗೆ ಹೋಗುವುದಕ್ಕೆ ಸಾಧ್ಯವಾದರೂ, ಹೋಗದೆ ತಾವೇ ಭವಭಾರವನ್ನು ಹೊತ್ತುಕೊಂಡು ನಮ್ಮೆಡೆಗೆ ಇಳಿದು ಬಂದು ನಮ್ಮನ್ನು ಉದ್ಧರಿಸುವುದಕ್ಕೆ ತವಕ ಪಡವುದೊಂದು ಅಪೂರ್ವ ಚಿತ್ರ !

" ಶ್ರೀ ಶಾರದಾದೇವಿ ಸಂಭಾಷಣೆ " ಗ್ರಂಥಕ್ಕೆ ಮೂಲ ವಂಗ ಭಾಷೆಯ " ಮಾಯೇರ್ ಕಥಾ " ಎಂಬ ಗ್ರಂಥ. ಕೆಲವು ಭಕ್ತರು ಬರೆದಿಟ್ಟ ದಿನಚರಿ ಪುಸ್ತಕದಿಂದ ಇದನ್ನು ಸಂಗ್ರಹಿಸಲಾಗಿದೆ. ಈ ಸಂಭಾಷಣೆಯಲ್ಲಿ ಶ್ರೀ ಮಾತೆಯವರ ಶೀಲ ಅತಿ ಸುಂದರವಾಗಿ ಚಿತ್ರಿತವಾಗಿದೆ. ಅವರ ಸರಳತೆ, ಪ್ರೀತಿ, ದಯೆ, ಅನುಕಂಪ, ಎಲ್ಲಕ್ಕಿಂತ ಹೆಚ್ಚಾಗಿ ತಾಯೊಲುಮೆಯ ಝರಿ ಎಲ್ಲ ಕಡೆಗಳಿಂದಲೂ ಜಿನುಗಿ ಬಂದು ಸೇರಿ ಒಂದಾಗಿ ಮಂದಾಕಿನಿಯಂತೆ ಹರಿಯುತ್ತಿದೆ. ಈ ಸಂಭಾಷಣೆ ಓದು

ವುದೆಂದರೆ ಆ ಪುಣ್ಯ ನದಿಯಲ್ಲಿ ಮಿಂದು ಪುನೀತರಾದಂತೆ.

ಈ ಸಂಭಾಷಣೆ ತಿಳಿದುಕೊಳ್ಳಲು ಬುದ್ಧಿಯ ಕಸರತ್ತು ಬೇಕಾಗಿಲ್ಲ. ಜೀವನದ ಅನುಭವ ಬೇಕು, ಅಷ್ಟೆ. ಇಲ್ಲಿ ಬರುವುದೆಲ್ಲ ಅವರ ಬಾಳಿನ ಅನುಭವದ ಉಸಿರು. ಶ್ರೀಮಾತೆಯವರೇ ಕಷ್ಟ, ದುಃಖ, ನಿಂದೆಯ ಮೂಸೆಯಲ್ಲಿ ಬೆಂದು ನೊಂದರು. ಎಲ್ಲರಿಗೂ ಪರಿತಪಿಸುತ್ತಿದ್ದ ಹೃದಯ ಅವರದು. ಅವರ ಸಂಭಾಷಣೆಯಲ್ಲಿ ನೊಂದ ಜೀವಿಗಳಿಗೆ ಭರವಸೆಯ ಅಮೃತವಿದೆ.

ಶ್ರೀ ಮಾತೆಯವರ ಬದುಕೇ ಸರಳ. ಎಂತಹ ಜಟಿಲ ಪ್ರಶ್ನೆಗೂ ಅವರು ಸರಳರೀತಿ ಉತ್ತರ ಕೊಡುವರು. ಇಲ್ಲಿ ಬರುವ ಹಲವು ಪ್ರಶ್ನೆಗಳು ನಾವೆ ಅವರಿಗೆ ಹಾಕಿದಂತೆ ಇವೆ. ಅವರ ಉತ್ತರದಲ್ಲಿ ಯಾವ ಅನುಮಾನವೂ ಇಲ್ಲ. ಅದರಲ್ಲಿ ಅವರ ಅನುಭವದ ಶಕ್ತಿ ಇದೆ, ಸ್ಪಷ್ಟತೆ ಇದೆ. ಶ್ರೀಮಾತೆ, ಈ ಸಂಭಾಷಣೆ ದೇಗುಲದಲ್ಲಿ ಜೀವಿಸುತ್ತಿರುವರು. ನಮ್ಮಂತಹ ಹಲವು ಮಕ್ಕಳ ತಾಯಿ ಅವರು. ಪಾಪಿ, ಪಟಿಂಗ, ನೀಚ, ಮೂರ್ಖ, ಯಾರೂ ತಾಯೊಲುಮೆಗೆ ಬಾಹಿರರಲ್ಲ. "ಪಾಪಿಗಳಲ್ಲವೆ ಪಾಪವನ್ನು ಕಳೆದುಕೊಳ್ಳಲು ಬರುವವರು ಗಂಗೆಗೆ? ಗಂಗೆಯೆ, 'ನಾನು ಮಡಿ ಮುಟ್ಟಬೇಡಿ,' ಎನ್ನುವಳೆ?" ಎನ್ನುತ್ತಿದ್ದರು. ಎಲ್ಲರನ್ನೂ ಸಹಿಸಿ, ಸಮಾಧಾನ ಮಾಡಿ ಭಗವಂತನ ಸೇವೆಗೆ ಯೋಗ್ಯರನ್ನಾಗಿ ಮಾಡುವ ಮಹಾ ಶಕ್ತಿ, ತಪಸ್ಸು, ಪ್ರೀತಿಯ ಅನುಭವವಾಗುವುದು ಓದುಗರಿಗೆ ಈ ಸಂಭಾಷಣೆಯಲ್ಲಿ.

ಪ್ರಕಾಶಕರು.



ಶ್ರೀ ಮಹಾಮಾತೃಶ್ರೀ ಶಾರದಾ ದೇವಿಯವರು

" ನಮ್ಮ ಮನೋವಾಕ್ಕಾಯಗಳು ಜಗತ್ತಿನ ಹಿತಕ್ಕಾಗಿಯೇ ಆಗಬೇಕು "

# ಪ್ರಥಮ ಖಂಡ

## (ಒಬ್ಬ ಗೃಹಿಣೀ ಭಕ್ತಳ ಸಂಗ್ರಹ)

ಉದ್ಬೋಧನ ಆಫೀಸ್, ಕಲ್ಕತ್ತ.
ಜುಲೈ ೧೯೧೧

ಒಂದು ದಿನ ಶುಕ್ರವಾರ ಬೆಳಗ್ಗೆ ಶ್ರೀಮಾನ್ ಕೆ—ಕಲ್ಕತ್ತೆಯ ಪಾತಾಳ ಡಂಗದಲ್ಲಿರುವ ನಮ್ಮ ಮನೆಗೆ ಬಂದು, "ನಾಳೆ ಮಧ್ಯಾಹ್ನ ಶ್ರೀ ಮಾತೆಯ ದರ್ಶನಕ್ಕೆ ಬಾಗ್ ಬಜಾರಿಗೆ ಹೋಗೋಣ. ಆ ಸಮಯ ದಲ್ಲಿ ನೀವು ಅಣಿಯಾಗಿರಿ" ಎಂದರು. ಅಂತೂ ಕೊನೆಗೆ ಶ್ರೀ ಮಾತೆಯ ಚರಣಕಮಲಕ್ಕೆ ಮಣಿಯುವ ಸೌಭಾಗ್ಯ ನನಗೆ ಪ್ರಾಪ್ತವಾಯಿತೆಂದು ಸಂತೋಷಿಸಿದೆ. ಅಂದು ನನ್ನ ಆನಂದಾತಿಶಯ ಹೇಳತೀರದು. ರಾತ್ರಿ ನಿದ್ರೆಕೂಡ ಮಾಡಲಿಲ್ಲ. ಕಲ್ಕತ್ತೆಯಲ್ಲಿ ಕಳೆದ ಹದಿನಾಲ್ಕು ಹದಿನೈದು ವರುಷದಿಂದ ವಾಸಿಸುತ್ತಿದ್ದೆ. ಇಷ್ಟು ದೀರ್ಘಕಾಲವಾದ ಮೇಲೆ ಶ್ರೀ ಮಾತೆ, ಅವರ ದರ್ಶನ ಪಡೆಯುವ ಭಾಗ್ಯವನ್ನು ಈಗ ಕರುಣಿಸುತ್ತಿ ರುವರು.

ಮಾರನೆಯ ದಿನ ಮಧ್ಯಾಹ್ನ ಒಂದು ಗಾಡಿ ಗೊತ್ತುಮಾಡಿದೆವು. ಸುಮತಿಯನ್ನು ಬ್ರಹ್ಮಸಮಾಜದ ಬಾಲಿಕಾ ಪಾಠಶಾಲೆಯಿಂದ ಕರೆದು ಕೊಂಡು ಬಂದು ಬಾಗ್ ಬಜಾರಿನಲ್ಲಿರುವ ಶ್ರೀಮಾತೆಯವರ ಮನೆ ಕಡೆಗೆ ಹೊರಟೆವು. ಈ ಯಾತ್ರೆಯ ಸಮಯದಲ್ಲಿ ನನ್ನ ಮನಸ್ಸಿನಲ್ಲಾದ ಕುತೂ ಹಲ ಮತ್ತು ಶ್ರದ್ಧೆಯನ್ನು ವಿವರಿಸುವುದು ಅಸದಳ. ಶ್ರೀ ಮಾತೆಯ ವರ ಮನೆಗೆ ತಲುಪಿದೆ. ಆಗತಾನೇ ಶ್ರೀ ಮಾತೆಯವರು ದೇವ ಮಂದಿ ರದ ಮುಂದೆ ನಿಂತಿದ್ದರು. ಹೊಸಲ ಮೇಲೆ ಒಂದು ಕಾಲು, ಆಚೆ ಕಡೆ ಇರುವ ಚಾಪೆಯ ಮೇಲೆ ಒಂದು ಕಾಲನ್ನು ಇಟ್ಟು ನಿಂತಿದ್ದರು. ಅವರ ತಲೆಯ ಮೇಲೆ ಮುಸುಕು ಇರಲಿಲ್ಲ. ಎಡದ ಕೈಯನ್ನು ಮೇಲಕ್ಕೆ ಎತ್ತಿ ಬಾಗಿಲನ್ನು ಹಿಡಿದಿದ್ದರು. ಬಲಗೈ ಹಾಗೆಯೇ ಸಡಿಲವಾಗಿತ್ತು. ದೇಹದ ಮೇಲಿನ ಭಾಗದಲ್ಲಿ ಬಟ್ಟೆ ಇರಲಿಲ್ಲ. ಯಾರನ್ನೋ ನಿರೀಕ್ಷಿಸು ತ್ತಿದ್ದಂತೆ ತೋರಿತು. ನಾನು ಅವರ ಚರಣಗಳಿಗೆ ನಮಿಸಿದೊಡನೆಯೇ

ಸುಮತಿಯನ್ನು ನನ್ನ ವಿಚಾರವಾಗಿ ಕೇಳಿದರು. ಸುಮತಿ, ತನಗೆ ಅಕ್ಕನಾಗಬೇಕೆಂದು ನನ್ನನ್ನು ಪರಿಚಯ ಮಾಡಿಸಿದರು. ಸುಮತಿ ಕೆಲವು ದಿನಗಳಿಂದ ಶ್ರೀಮಾತೆಯ ದರ್ಶನಕ್ಕೆ ಬರುತ್ತಿದ್ದಳು. ಶ್ರೀ ಮಾತೆ ನನ್ನನ್ನು ನೋಡಿ, "ನೋಡು ಮಗು, ಈ ಜನರಿಂದ ನನಗೆಷ್ಟು ಕಷ್ಟವಾಗಿದೆ! ನನ್ನ ಅತ್ತಿಗೆ, ಅವಳ ಮಗಳು ರಾಧೆ ಎಲ್ಲರೂ ಜ್ವರದಿಂದ ನರಳುತ್ತಿರುವರು. ಅವರಿಗೆ ಶುಶ್ರೂಷೆ ಯಾರು ಮಾಡುವರೋ ಗೊತ್ತಿಲ್ಲ. ಸ್ವಲ್ಪ ಹೊತ್ತು ತಾಳುತ್ತೀಯಾ? ನಾನು ಬಟ್ಟೆ ಒಗೆದು ಬರುತ್ತೇನೆ" ಎಂದರು. ನಾವು ಕಾದೆವು; ಸ್ವಲ್ಪ ಹೊತ್ತಾದಮೇಲೆ ಅವರು ಬಂದರು. ಒಂದು ಬೊಗಸೆ ತುಂಬ ನೈವೇದ್ಯಮಾಡಿದ ಮಿಠಾಯಿಯನ್ನು ತಂದು ಕೊಟ್ಟರು. ತಂಗಿಗೂ ಕೊಟ್ಟು ತಿನ್ನು ಎಂದರು. ಸುಮತಿ ಹಿಂದಿರುಗಿ ಸ್ಕೂಲಿಗೆ ಹೋಗಬೇಕಾಗಿತ್ತು. ಅದಕ್ಕಾಗಿ ಹೆಚ್ಚು ಹೊತ್ತು ಅಲ್ಲಿರಲು ಆಗಲಿಲ್ಲ. ನಮಸ್ಕರಿಸಿ ಹಿಂದಿರುಗುವುದಕ್ಕೆ ಅಪ್ಪಣೆಪಡೆದೆವು. ಶ್ರೀ ಮಾತೆ, "ಪುನಃ ಬನ್ನಿ" ಎಂದರು. ಈ ಐದು ನಿಮಿಷಗಳ ಅವರ ದರ್ಶನದಿಂದ ನನ್ನ ಹೃದಯದ ಹಂಬಲ ತೃಪ್ತಿಯಾಗಲಿಲ್ಲ. ಅವರನ್ನು ಮತ್ತೊಮ್ಮೆ ನೋಡಬೇಕೆಂಬ ಹೆಚ್ಚು ಕಾತುರದಿಂದ ಮನೆಗೆ ಹಿಂದಿರುಗಿದೆ.

೧೨ನೆ ಫೆಬ್ರವರಿ ೧೯೧೧.

ನಾನು ಉದ್ಬೋಧನ ಆಫೀಸಿಗೆ ಹೋದ ದಿನ ಶ್ರೀ ಮಾತೆಯವರು ಬಲರಾಮ ಬೋಸರ ಮನೆಗೆ ಹೋಗಿದ್ದರು. ನಾನು ಹೆಚ್ಚು ಹೊತ್ತು ಕಾಯಬೇಕಾಗಿರಲಿಲ್ಲ. ಶ್ರೀ ಮಾತೆಯವರು ಬಂದರು. ನಾನು ಅವರಿಗೆ ನಮಸ್ಕರಿಸಿ ಆದಮೇಲೆ ಹಸನ್ಮುಖದಿಂದ, "ಇಂದು ಯಾರು ನಿನ್ನ ಜೊತೆಗೆ ಬಂದಿರುವರು?" ಎಂದು ಕೇಳಿದರು. "ನನ್ನ ಭಾವ ಮೈದುನನೊಬ್ಬ ಬಂದಿರುವನು" ಎಂದೆ.

ಶ್ರೀಮಾತೆ: ನೀನು ಹೇಗಿರುವೆ? ನಿನ್ನ ತಂಗಿ ಹೇಗಿರುವಳು? ಬಹಳ ದಿನಗಳಿಂದ ನೀನು ಬರಲೇ ಇಲ್ಲ. ನಿನ್ನ ವಿಷಯವಾಗಿ ನಾನು ತುಂಬಾ ಕಾತುರಳಾಗಿದ್ದೆ. ನೀನು ಆರೋಗ್ಯವಾಗಿಲ್ಲವೇನೋ ಎಂದು ಭಾವಿಸಿದ್ದೆ.

ನನಗೆ ಆಶ್ಚರ್ಯವಾಯಿತು. ನಾನು ಅವರನ್ನು ನೋಡಿದ್ದು ಒಮ್ಮೆ ಮಾತ್ರ. ಅದೂ ಐದು ನಿಮಿಷಗಳು. ಆದರೂ ಅವರು ನಮ್ಮನ್ನು ಮರೆತಿರಲಿಲ್ಲ. ನನ್ನ ಕಣ್ಣು ಆನಂದಾಶ್ರುಗಳಿಂದ ತುಂಬಿತು.

ಶ್ರೀಮಾತೆ ತುಂಬಾ ಪ್ರೀತಿಯಿಂದ, "ನೀವು ಇಲ್ಲಿಗೆ ಬಂದಿದ್ದಿರಿ. ಬಲರಾಮನ ಮನೆಯಲ್ಲಿ ನಾನು ಕಳವಳಿಸುತ್ತಿದ್ದೆ" ಎಂದರು.

ನಾನು ಆಶ್ಚರ್ಯದಿಂದ ಭ್ರಾಂತಳಾದೆ. ಶ್ರೀಮಾತೆಯು ಅಣ್ಣನ ಸಣ್ಣ ಮಗುವಿಗೆಂದು ನನ್ನ ತಂಗಿ ಸುಮತಿ ಎರಡು ಉಣ್ಣೆಯ ಕುಲಾವಿಗಳನ್ನು ಕಳುಹಿಸಿದ್ದಳು. ಇಂತಹ ಬೆಲೆ ಬಾಳದ ವಸ್ತುವನ್ನು ನೋಡಿದರೂ ಅವರ ಆನಂದ ವರ್ಣನಾತೀತವಾಗಿತ್ತು. ಹಾಸಿಗೆಯ ಮೇಲೆ ಕುಳಿತು, "ನನ್ನ ಪಕ್ಕದಲ್ಲಿ ಕುಳಿತುಕೊ" ಎಂದರು. ತುಂಬ ವಿಶ್ವಾಸದಿಂದ ಶ್ರೀಮಾತೆ, "ಮಗು, ನಾನು ನಿನ್ನನ್ನು ಎಷ್ಟೋ ವೇಳೆ ನೋಡಿರುವಂತೆ ನಮ್ಮಿಬ್ಬರಿಗೂ ಧೀರ್ಘಕಾಲದ ಸಂಬಂಧವಿರುವಂತೆ ಭಾವಿಸುವೆನು" ಎಂದರು. "ಏನೋ ನನಗೆ ಗೊತ್ತಿಲ್ಲ. ನಾನೆಲ್ಲೋ ಒಂದು ದಿನ ಮಾತ್ರ ಐದು ನಿಮಿಷಗಳು ಇದ್ದೆನು" ಎಂದೆ.

ಶ್ರೀಮಾತೆ ನಕ್ಕರು. ನನ್ನ ಮತ್ತು ನನ್ನ ಸಹೋದರಿಯ ಭಕ್ತಿ ಶ್ರದ್ಧೆಗಳಿಗೆ ಮೆಚ್ಚಿಗೆ ತೋರಿದರು. ಆದರೆ ನಾನು ಅದಕ್ಕೆ ಎಷ್ಟು ಪಾತ್ರಳೋ ತಿಳಿಯೆ. ಕ್ರಮೇಣ ಅನೇಕ ಗೃಹಿಣೀ ಭಕ್ತರು ನೆರೆದರು. ಎಲ್ಲರೂ ಕುತೂಹಲದಿಂದ ಪ್ರೀತಿಯಿಂದ ತುಂಬಿ ತುಳುಕಾಡುತ್ತಿರುವ ಕಣ್ಣಿನಿಂದ, ಮಂದಹಾಸದಿಂದ ಕೂಡಿದ ದಯಾಪೂರಿತ ವಿಗ್ರಹದಂತಿರುವ ಶ್ರೀಮಾತೆಯನ್ನು ನೋಡುತ್ತಿದ್ದರು. ಅಂತಹ ದೃಶ್ಯವನ್ನು ನಾನು ಇದುವರೆಗೂ ನೋಡಿರಲಿಲ್ಲ. ಇಂತಹ ಅಲೌಕಿಕ ಆಧ್ಯಾತ್ಮ ದೃಶ್ಯವನ್ನು ನಾನು ನೋಡಿ ನಲಿಯುತ್ತಿದ್ದೆ. ಆಗ ಯಾರೋ ಹಿಂದಿರುಗಿ ಹೋಗುವುದಕ್ಕೆ ಗಾಡಿ ಅಣಿಯಾಗಿದೆ ಎಂದು ಎಚ್ಚರಿಸಿದರು. ಶ್ರೀಮಾತೆ ಎದ್ದು ನನಗೆ ಸ್ವಲ್ಪ ಪ್ರಸಾದವನ್ನು ಅನುಗ್ರಹಿಸಿದರು. ನನ್ನ ಮುಂದೆ ಅದನ್ನು ಹಿಡಿದು, "ಇದನ್ನು ತಿನ್ನು" ಎಂದರು. ಎಲ್ಲರೆದುರಿಗೆ ಅವರಿಗೆ ಕೊಡದೆ ಶ್ರೀಮಾತೆಯವರ ಸಮ್ಮುಖದಲ್ಲಿ ಅದನ್ನು ತಿನ್ನಲು ನನಗೆ ನಾಚಿಕೆಯಾಯಿತು. ಶ್ರೀಮಾತೆ, "ಸಂಕೋಚವೇಕೆ? ಇದನ್ನು ತೆಗೆದುಕೊ" ಎಂದರು. ಅದನ್ನು ನಾನು ಕೈಗಳಿಂದಲೇ ತೆಗೆದುಕೊಂಡೆ. ಅವರಿಗೆ ನಮಸ್ಕಾರಮಾಡಿ ಹೋಗಲು ಅಪ್ಪಣೆಪಡೆದೆ. ಅವರು, "ಮತ್ತೊಮ್ಮೆ ಬಾ. ನೀನೊಬ್ಬಳೇ ಮಹಡಿ ಇಳಿಯುವೆಯಾ ಅಥವಾ ನಾನೂ ಜೊತೆಯಲ್ಲಿ ಬರಲೆ?" ಎಂದರು. ಮೆಟ್ಟಲಿನವರೆಗೆ ಅವರೂ ಜೊತೆಯಲ್ಲಿ ಬಂದರು. "ನಾನೊಬ್ಬಳೇ ಹೋಗುತ್ತೇನೆ, ತೊಂದರೆ ತೆಗೆದುಕೊಳ್ಳಬೇಡಿ" ಎಂದೆ.

ಆಗಲುವಾಗ ಶ್ರೀಮಾತೆಯುವರು, "ಇನ್ನೊಂದು ದಿನ ಬೆಳಗ್ಗೆ ಬಾ" ಎಂದರು. ಕೃತಾರ್ಥಳಾದೆನೆಂದು ಹಿಂದಿರುಗಿದೆ. ಎಂತಹ ಅದ್ಭುತ ಪ್ರೇಮ ! ಎಂದು ಯೋಚಿಸಿದೆ.

೧೪ ನೇ ಮೇ ೧೯೧೧.

ನಾನು ಶ್ರೀಮಾತೆಗೆ ನಮಿಸಿದೊಡನೆ ಅವರು "ನೀನು ಬಂದುದು ತುಂಬಾ ಸಂತೋಷ. ನಾನು ಇದುವರೆವಿಗೂ ನಿನ್ನನ್ನೇ ಕುರಿತು ಆಲೋಚಿಸುತ್ತಿದ್ದೆ. ನೀನು ಏತಕ್ಕೆ ಇಷ್ಟು ದಿನದವರೆಗೂ ಬರಲಿಲ್ಲ ?" ಎಂದರು.

ಭಕ್ತಳು :– ನಾನು ಕಲ್ಕತ್ತೆಯಲ್ಲಿರಲಿಲ್ಲ. ತಂದೆ ಮನೆಗೆ ಹೋಗಿದ್ದೆ.

ಶ್ರೀಮಾತೆ :– ಸುಮತಿ ಸಮಾಚಾರವೇನು ? ಅವಳೂ ಬಹಳ ದಿನಗಳಿಂದ ಈ ಕಡೆ ಬರಲಿಲ್ಲ. ಏನು ಅವಳು ವ್ಯಾಸಂಗದಲ್ಲಿ ನಿರತಳಾಗಿರುವಳೆ ?

ಭಕ್ತಳು :– ಅವಳ ಗಂಡ ಊರಿನಲ್ಲಿ ಇರಲಿಲ್ಲ.

ಶ್ರೀಮಾತೆ :– ಅವಳು ಸ್ಕೂಲಿಗೇನೋ ಹೋಗುವಳು. ಮನೆ ಕೆಲಸದ ಕಡೆ ಗಮನಕೊಡುವಳೆ ?

ಭಕ್ತಳು :– ತಾಯಿ, ನಮಗೆ ಪ್ರಪಂಚವೆಂದರೇನು, ಅದರಲ್ಲಿ ನಮ್ಮ ಕರ್ತವ್ಯವೇನು ಗೊತ್ತಿಲ್ಲ. ನಿಮಗೆ ಮಾತ್ರ ಅದು ಗೊತ್ತು.

ಶ್ರೀಮಾತೆಯುವರು ಮಂದಹಾಸದಿಂದ, "ಎಷ್ಟು ಶಿಖಿ" ಎಂದು ಹೇಳಿ, ಬೀಸಿಕೊಳ್ಳಲು ಒಂದು ಬೀಸಣಿಗೆಯನ್ನು ಕೊಟ್ಟರು. "ಅಯ್ಯೋ ಮಗು, ಎಷ್ಟು ಅವಸರದಿಂದ ಊಟಮಾಡಿಕೊಂಡು ಇಲ್ಲಿಗೆ ಓಡಿಬಂದೆ ! ಈಗ ನನ್ನ ಪಕ್ಕದಲ್ಲಿ ಮಲಗಿಕೊ" ಎಂದರು.

ನೆಲದಮೇಲೆ ಒಂದು ಚಾಪೆಯನ್ನು ಹಾಸಿದರು. ನಾನು ಅವರ ಹಾಸಿಗೆಯ ಮೇಲೆ ಮಲಗಿಕೊಳ್ಳಲು ಅನುಮಾನಿಸಿದೆ. ಆದರೆ ಅವರು, "ಏಕೆ ಅನುಮಾನಿಸುವೆ ? ನನ್ನ ಮಾತು ಕೇಳು, ಮಲಗಿಕೊ" ಎಂದರು. ನನಗೆ ಬೇರೆ ತೋಚಲೇ ಇಲ್ಲ. ಅಂತೂ ಅವರೊಂದಿಗೆ ಮಲಗಿದೆ. ಶ್ರೀಮಾತೆಗೆ ಹಾಗೆಯೇ ಸ್ವಲ್ಪ ನಿದ್ರೆ ಹತ್ತಿತು. ನಾನು ಹಾಗೆಯೇ ಮಲಗಿದ್ದೆ. ಕೆಲವು ಗೃಹಿಣೀ ಭಕ್ತರು, ಇಬ್ಬರು ಸನ್ಯಾಸಿನಿಯರು ಬಂದರು. ಅವರಲ್ಲಿ ಒಬ್ಬರಿಗೆ ಆಗಲೇ ಮಧ್ಯ ವಯಸ್ಸು. ಮತ್ತೊಬ್ಬಳು ತರುಣಿ. ಶ್ರೀಮಾತೆ ಕಣ್ಣು ಮುಚ್ಚಿಕೊಂಡೇ, "ಬಂದವರು

ಯಾರು? ಗೌರಿದಾಸಿಯೇ?'' ಎಂದು ಕೇಳಿದರು. ತರುಣಿ ಸನ್ಯಾಸಿ, ''ಅದು ನಿಮಗೆ ಹೇಗೆ ಗೊತ್ತಾಯಿತು?'' ಎಂದು ಕೇಳಿದಳು. ಶ್ರೀ ಮಾತೆ, ''ಏನೋ, ಹಾಗೆ ಅನ್ನಿಸಿತು'' ಎಂದರು. ಸ್ವಲ್ಪ ಹೊತ್ತಾದ ಮೇಲೆ ಅವರು ಎದ್ದು ಕುಳಿತರು. ತರುಣಿ ಸನ್ಯಾಸಿ, ''ಇವತ್ತು ಬೇಲೂರು ಮಠಕ್ಕೆ ಹೋಗಿದ್ದೆವು. ಸ್ವಾಮಿ ಪ್ರೇಮಾನಂದರು ಹೊಟ್ಟೆ ತುಂಬಾ ತಿಂಡಿಕೊಟ್ಟರು. ಅವರು ಅಲ್ಲಿರುವಾಗ ಹಾಗೆ ತಿನ್ನದೆ ಬರುವುದೇ ಇಲ್ಲ'' ಎಂದಳು. ಬಂದ ಗುಂಪಿನವರಲ್ಲಿ ಒಬ್ಬ ಹೆಂಗಸಿನ ಹಣೆಯಲ್ಲಿ ಕುಂಕುಮವಿಲ್ಲದಿರಲು, ಅವರಿಗೆ ಸ್ವಲ್ಪ ಬುದ್ಧಿ ಹೇಳಿದರು. ಪ್ರತಿಯೊಬ್ಬ ಸುಮಂಗಲಿಯೂ ಕುಂಕುಮವನ್ನು ಇಟ್ಟು ಕೊಳ್ಳಬೇಕು ಎಂದರು.

ಶ್ರೀಮಾತೆಯ ಮೂಲಕ ಗೌರಿಮಾ ನನ್ನ ವಿಷಯವನ್ನು ತಿಳಿದು ಕೊಂಡು, ಅವರ ಬಾಲಿಕಾ ಪಾಠಶಾಲೆಗೆ ನನ್ನನ್ನು ಬರುವಂತೆ ಹೇಳಿದರು. ಅರವತ್ತು ಜನ ಬಾಲಿಕೆಯರು ಶಾಲೆಗೆ ಹೋಗುತ್ತಿದ್ದರು. ನನಗೆ ನೆಯ್ಗೆಯ ಕೆಲಸ ಬರುವುದೆ ಎಂದು ಕೇಳಿದರು. ನನಗೆ ಎಲ್ಲೋ ಸ್ವಲ್ಪ ಬರುತ್ತದೆ ಎಂದೆ. ಅಷ್ಟನ್ನೇ ಆಶ್ರಮದ ಬಾಲಿಕೆಯರಿಗೆ ಕಲಿಸು ಎಂದು ಕೇಳಿಕೊಂಡರು.

ಶ್ರೀಮಾತೆಯವರ ಅಪ್ಪಣೆಯ ಮೇರೆ ಒಂದು ದಿನ ಗೌರಿಮಾ ಪಾಠಶಾಲೆಗೆ ಹೋದೆ. ಅವರು ನನ್ನನ್ನು ತುಂಬಾ ಪ್ರೀತಿಯಿಂದ ಬರ ಮಾಡಿಕೊಂಡರು. ಪ್ರತಿ ದಿನ ಅವರ ಶಾಲೆಗೆ ಬಂದು ದಿನಕ್ಕೆ ಒಂದು ಗಂಟೆಯೋ ಎರಡು ಗಂಟೆಯೋ ಮಕ್ಕಳಿಗೆ ಪಾಠ ಹೇಳಿಕೊಡುವಂತೆ ಕೇಳಿ ಕೊಂಡರು. ''ನನ್ನಂತಹ ಅಲ್ಪ ವಿದ್ಯಾವಂತರು ಉಪಾಧ್ಯಾಯಿನಿಯಾಗುವುದು ನಗೆಗೇಡು. ನೀವು ಒಪ್ಪಿಕೊಂಡರೆ ಬೇಕಾದರೆ ಮಕ್ಕಳಿಗೆ ಅಕ್ಷರ ಮಾತ್ರ ಹೇಳಿಕೊಡುತ್ತೇನೆ.'' ಎಂದೆ. ಆದರೆ ಗೌರಿಮಾ ಬಿಡಲೊಲ್ಲರು. ಅಂತೂ ನಾನು ಸೋಲಬೇಕಾಯಿತು.

ಒಂದು ದಿನ ಗೌರಿಮಾ ಶಾಲೆ ಮುಗಿದನಂತರ ಶ್ರೀಮಾತೆಯ ದರ್ಶನಕ್ಕೆ ಹೋದೆ. ಆಗ ಬೇಸಿಗೆ ಕಾಲ. ನನಗೆ ಸಾಕಾಗಿಹೋಗಿತ್ತು. ಶ್ರೀಮಾತೆ ಹಲವು ಗೃಹಿಣೀ ಭಕ್ತರ ಸಮೂಹದಲ್ಲಿ ಕುಳಿತಿದ್ದರು. ನಾನು ಅವರಿಗೆ ನಮಸ್ಕಾರಮಾಡಿದೊಡನೆ ಅವರು ನನ್ನನ್ನು ನೋಡಿದರು. ಸೊಳ್ಳೆ ಪರದೆಯ ಮೇಲೆ ಇದ್ದ ಒಂದು ಬೀಸಣಿಗೆ ತೆಗೆದುಕೊಂಡು ಅದ

ರಿಂದ ನನಗೆ ಬೀಸತೊಡಗಿದರು. ಬಹಳ ಕಾತುರದಿಂದ "ಕುಬಸ ಬೇಗ ಬಿಚ್ಚು. ದೇಹ ತಂಪಾಗಲಿ" ಎಂದರು. ಅಬ್ಬ! ಎಂತಹ ಅನನ್ಯಸಾಧಾರಣ ಪ್ರೇಮ! ಅವರು ನೆರೆದ ಭಕ್ತರನೇಕರ ಎದುರಿನಲ್ಲಿ ನನ್ನ ಮೈದಡವಿದರು. ನನಗೆ ನಾಚಿಕೆಯಾಯಿತು.' ಎಲ್ಲರೂ ನನ್ನನ್ನೇ ನೋಡುತ್ತಿದ್ದರು. ಅವರ ಕಾತುರವನ್ನು ನೋಡಿ ನಾನು ಕುಬಸವನ್ನು ಬಿಚ್ಚಬೇಕಾಯಿತು. ಬೀಸಣಿಗೆಯನ್ನು ನನಗೆ ಕೊಡಿ ಎಂದು ನಾನು ಎಷ್ಟು ಕೇಳಿಕೊಂಡರೂ ಕೊಡಲಿಲ್ಲ. ಅಷ್ಟು ಪ್ರೀತಿಯಿಂದ, "ಪರವಾ ಇಲ್ಲ, ಸ್ವಲ್ಪ ಸುಧಾರಿಸಿಕೊ!" ಎಂದರು. ಅವರು ಒಂದು ಲೋಟ ನೀರು, ಸ್ವಲ್ಪ ಮಿಠಾಯಿಯನ್ನು ತಂದರು. ನಾನು ಅದನ್ನು ತೆಗೆದುಕೊಂಡುದನ್ನು ನೋಡಿ ಅವರು ಸಂತೋಷಪಟ್ಟರು. ಶಾಲೆಯಿಂದ ಬಂದ ಗಾಡಿ ನನಗಾಗಿ ಕಾಯುತ್ತಿತ್ತು. ತಕ್ಷಣವೇ ಅವರ ಅಪ್ಪಣೆಪಡೆದು ಹಿಂದಿರುಗಬೇಕಾಯಿತು.

೩ ನೇ ಆಗಸ್ಟ್, ೧೯೧೧

ಬೆಳಗ್ಗೆ ಹೊತ್ತಿಗೆ ಮುಂಚೆಯೇ ಬಾಗ್‌ಬಜಾರಿಗೆ ಹೋದೆ. ಶ್ರೀಮಾತೆಯಿಂದ ಉಪದೇಶಪಡೆಯಬೇಕೆಂದು ಆಶಿಸಿದ್ದೆ. ಅದಕ್ಕಾಗಿ ನನ್ನೊಂದಿಗೆ ಸ್ವಲ್ಪ ಸಾಮಾನನ್ನು ತೆಗೆದುಕೊಂಡು ಬಂದಿದ್ದೆ. ಗೌರಿಮಾ ಏನೇನು ಸಾಮಾನನ್ನು ತೆಗೆದುಕೊಂಡು ಹೋಗಬೇಕೆಂಬುದನ್ನು ಹೇಳಿ ಅವರೂ ಕೂಡ ನನ್ನೊಂದಿಗೆ ಶ್ರೀಮಾತೆಯವರ ಸ್ಥಳಕ್ಕೆ ಬಂದರು. ನಾನು ಬಂದಾಗ ಅವರು ಪೂಜೆಯಲ್ಲಿ ತನ್ಮಯರಾಗಿದ್ದರು. ಸನ್ನೆಮಾಡಿ ಒಂದು ಆಸನದ ಮೇಲೆ ಕುಳಿತುಕೊಳ್ಳುವಂತೆ ಹೇಳಿದರು. ಪೂಜೆಯನಂತರ ಗೌರಿಮಾ ಉಪದೇಶದ ಸಮಾಚಾರವನ್ನು ಎತ್ತಿದರು. ನಾನು ಕೂಡ ಶ್ರೀಮಾತೆಗೆ ಹಿಂದೆ ಒಂದು ದಿನ ಈ ಪ್ರಸ್ತಾಪವನ್ನು ಎತ್ತಿದ್ದೆ. ನಾನು ಕೆಲವು ಒಳ್ಳೆ ಬಾಳೆಹಣ್ಣುಗಳನ್ನು ತಂದಿದ್ದೆ. ಶ್ರೀಮಾತೆಗೆ ಅದನ್ನು ನೋಡಿ ಆನಂದವಾಯಿತು. "ಓ, ನೀನು ಎಷ್ಟೊಂದು ಬಾಳೆಹಣ್ಣು ತಂದಿರುವೆ!" ಎಂದರು. ಅಲ್ಲಿದ್ದ ಸನ್ಯಾಸಿಗಳೂ ಅದನ್ನು ನೋಡಿ ಮೆಚ್ಚಿದರು. "ಆಸನ ತೆಗೆದುಕೊಂಡು ನನ್ನ ಎದುರುಗಡೆ ಕುಳಿತುಕೊ" ಎಂದರು. "ನಾನಿನ್ನೂ ಗಂಗಾನದಿಯಲ್ಲಿ ಮಿಂದಿಲ್ಲ" ಎಂದೆ.

ಶ್ರೀಮಾತೆ:—ಪರವಾ ಇಲ್ಲ. ನಿನ್ನ ಬಟ್ಟೆ ಬದಲಾಯಿಸಿದ್ದರೆ ಸಾಕು.

ನಾನು ಅವರ ಬಳಿ ಕುಳಿತೆ. ನನ್ನ ಎದೆ ಹೊಡೆದುಕೊಳ್ಳುತ್ತಿತ್ತು. ಇತರರಿಗೆ ಕೋಣೆ ಬಿಟ್ಟುಹೋಗುವಂತೆ ಹೇಳಿದರು. "ಸ್ವಪ್ನ

ದಲ್ಲಿ ನಿನಗೆ ಯಾವ ಮಂತ್ರ ಕಾಣಿಸಿತು ಹೇಳು" ಎಂದರು.

ಭಕ್ತಳು :—ನಾನು ಅದನ್ನು ಹೇಳಲೆ ಅಥವಾ ಬರೆಯಲೆ?

ಶ್ರೀಮಾತೆ:—ನೀನು ನನಗೆ ಹೇಳಬಹುದು.

ಉಪದೇಶಕೊಡುವ ಸಮಯದಲ್ಲಿ ಶ್ರೀಮಾತೆ ಸ್ವಪ್ನದಲ್ಲಿ ನನಗೆ ಕಂಡ ಮಂತ್ರದ ಅರ್ಥವನ್ನು ಹೇಳಿದರು. ಮೊದಲು ಅದನ್ನು ಉಚ್ಚರಿಸುವಂತೆ ನನಗೆ ಹೇಳಿ, ನಂತರ ಹೊಸದೊಂದು ಮಂತ್ರವನ್ನು ಅನುಗ್ರಹಿಸಿದರು. ಮೊದಲನೆ ಮಂತ್ರವನ್ನು ಪ್ರತಿ ದಿನ ಕೆಲವು ವೇಳೆ ಉಚ್ಚರಿಸಿ, ಅನಂತರ ಎರಡನೆ ಮಂತ್ರದಿಂದ ಜಪಮಾಡೆಂದರು.

ಮಂತ್ರಾರ್ಥವನ್ನು ನನಗೆ ಹೇಳುವುದಕ್ಕೆ ಮುಂಚೆ ಶ್ರೀಮಾತೆ ಕೆಲವು ಕ್ಷಣ ಧ್ಯಾನದಲ್ಲಿ ತನ್ಮಯರಾಗಿದ್ದರು. ಉಪದೇಶಪಡೆದುಕೊಳ್ಳುವ ಸಮಯದಲ್ಲಿ ನನ್ನ ದೇಹವೆಲ್ಲ ಕಂಪಿಸಿತು. ನಾನು ಅಳಲು ಪ್ರಾರಂಭಿಸಿದೆ. ನನಗೆ ಅದಕ್ಕೆ ಕಾರಣ ಕೊಡಲಾಗಲಿಲ್ಲ. ಶ್ರೀಮಾತೆ ನನ್ನ ಹಣೆಯಮೇಲೆ ಕೆಂಪು ಚಂದನ ಗಂಧದಿಂದ ದೊಡ್ಡ ಬೊಟ್ಟನ್ನು ಇಟ್ಟರು. ಪೂಜೆಗೆಂದು ಕೆಲವು ರೂಪಾಯಿಯನ್ನು ಕೊಟ್ಟೆ. ಶ್ರೀಮಾತೆ ಹಣವನ್ನು ಗುಲಾಬ್‌ಮಾ ಕೈಗೆ ಕೊಟ್ಟರು.

ಶ್ರೀಮಾತೆಯವರು ಉಪದೇಶವನ್ನು ಅನುಗ್ರಹಿಸುವ ಸಮಯದಲ್ಲಿ ತುಂಬಾ ಗಂಭೀರವಾಗಿದ್ದರು. ನಂತರ ಅವರು ಪೂಜೆಮಾಡುತ್ತಿದ್ದ ಸ್ಥಳದಿಂದ ಎದ್ದರು. ಕೆಲವುಕಾಲ ಮಂತ್ರ ಜಪಮಾಡಿ, ಧ್ಯಾನಮಾಡಿ ಪ್ರಾರ್ಥಿಸೆಂದರು. ಅವರು ಹೇಳಿದಂತೆ ನಾನು ಮಾಡಿದೆ. ನಾನು ಅವರ ಪಾದಕ್ಕೆ ನಮಿಸಿದಾಗ, "ಭಗವಂತನಮೇಲೆ ಭಕ್ತಿ ವಿಶ್ವಾಸವಿರಲಿ" ಎಂದು ಹರಸಿದರು. ಈಗಲೂ ಕೂಡ ನಾನು ಅವರ ಮಾತನ್ನು ನೆನಸಿಕೊಂಡು, "ದಯವಿಟ್ಟು ನಿಮ್ಮ ಆಶೀರ್ವಾದವನ್ನು ಮರೆಯಬೇಡಿ. ಅದರ ಫಲ ನನಗೆ ದೊರೆಯುವಂತೆ ಅನುಗ್ರಹಿಸಿ" ಎಂದು ಅವರಿಗೆ ಪ್ರಾರ್ಥಿಸುತ್ತೇನೆ.

ಶ್ರೀಮಾತೆ ಸ್ನಾನಕ್ಕಾಗಿ ಗಂಗಾನದಿಯ ಕಡೆ ಹೋಗುತ್ತಿದ್ದರು. ಗುಲಾಬ್ ಮಾ ಅವರೊಂದಿಗೆ ಹೋದರು. ನಾನೂ ಕೂಡ ಶ್ರೀಮಾತೆಯವರ ವಸ್ತ್ರ ಸೀರೆಯನ್ನು ತೆಗೆದುಕೊಂಡು ಗಂಗಾನದಿಯ ಕಡೆ ಹೊರಟೆ. ಸೋನೆ ಮಳೆ ಹನಿಯುತ್ತಿತ್ತು. ಸ್ನಾನವಾದ ಮೇಲೆ ಸೋಪಾನದ ಮೇಲೆ ಕುಳಿತ ಪೂಜಾರಿಗೆ ದಕ್ಷಿಣೆ ಮತ್ತು ಹಣ್ಣನ್ನು ಕೊಟ್ಟರು.

ಅದನ್ನು ಕೊಡುವಾಗ, "ನಾನು ನಿನಗೆ ಫಲವನ್ನು ಕೊಡುತ್ತಿರುವೆನು. ಆದರೆ ಇದು ನಿನ್ನ ಪುಣ್ಯ ಫಲ" ಎಂದರು. ಈ ದಾನವನ್ನು ಮಾಡಿರುವರಾರೆಂಬುದು ಪೂಜಾರಿಗೆ ಹೊಳೆಯಲೇ ಇಲ್ಲ. ಆತನಿಗೆ ಈ ಮಾತಿನ ಅರ್ಥಕೂಡ ಗೊತ್ತಾಗಲಿಲ್ಲವೆಂದು ತೋರುವುದು. ಲಕ್ಷಾಂತರ ಸ್ವಾರ್ಥ ಆಸೆಗಳಿಂದ ಚೂರು ಚೂರಾಗಿ ಹೋದ ನಮ್ಮಂತಹ ಅಲ್ಪರಿಗೆ ಕೂಡ ಈ ಮಾತಿನ ಅರ್ಥ ಹೊಳೆಯಲಿಲ್ಲ!

ಶ್ರೀಮಾತೆ ಬಟ್ಟೆಯನ್ನು ಬದಲಾಯಿಸಿ, ಒದ್ದೆ ಬಟ್ಟೆಯನ್ನು ನನ್ನ ಕೈಯಲ್ಲಿ ಕೊಟ್ಟರು. ಗುಲಾಬ್ ಮಾ ಮುಂದೆ ಇದ್ದರು. ನಾನು ಹಿಂದೆ ಇದ್ದೆ. ಶ್ರೀಮಾತೆ ಮಧ್ಯದಲ್ಲಿದ್ದರು. ತಮ್ಮ ಕೈಯಲ್ಲಿದ್ದ ಒಂದು ಸಣ್ಣ ಪಾತ್ರೆಯಲ್ಲಿ ಗಂಗಾಜಲವನ್ನು ತರುತ್ತಿದ್ದರು. ದಾರಿಯ ಪಕ್ಕದಲ್ಲಿದ್ದ ವಟವೃಕ್ಷಕ್ಕೆ ಸ್ವಲ್ಪ ಸ್ವಲ್ಪ ನೀರನ್ನು ಹಾಕುತ್ತಾ ಬಂದರು. ಮನೆಯ ಕೆಳಗಡೆ ನಲ್ಲಿಯ ಸಮೀಪದಲ್ಲೇ ಒಂದು ನೀರು ಪಾತ್ರೆ ಇತ್ತು. ಶ್ರೀಮಾತೆ ಅದರಿಂದ ತಮ್ಮ ಕಾಲನ್ನು ತೊಳೆದುಕೊಂಡರು. "ನಿನ್ನ ಕಾಲಿನಲ್ಲೂ ಮಣ್ಣು ಇದೆ. ತೊಳೆದುಕೊ" ಎಂದರು. ನಾನು ನೀರಿಗೆ ಹುಡುಕುತ್ತಿದ್ದಾಗ, "ಆ ಪಾತ್ರೆಯಲ್ಲಿ ನೀರಿದೆ. ನೀನು ಏತಕ್ಕೆ ಅದರಿಂದ ಕಾಲು ತೊಳೆದುಕೊಳ್ಳಬಾರದು?" ಎಂದರು. "ನೀವು ಆ ನೀರನ್ನು ಮುಟ್ಟಿರುವಿರಿ. ನಾನು ಹೇಗೆ ಆ ನೀರನ್ನು ಉಪಯೋಗಿಸಲಿ?" ಎಂದೆ. ಶ್ರೀಮಾತೆ, "ಜಲವನ್ನು ನಿನ್ನ ತಲೆಯ ಮೇಲೆ ಪ್ರೋಕ್ಷಿಸಿಕೊ" ಎಂದರು. ಆದರೆ ನಾನು ಅನುಮಾನಿಸಿ, "ನಾನು ಆ ನೀರನ್ನು ಉಪಯೋಗಿಸಲಾರೆ" ಎಂದೆ. ನಾನು ಬೇರೆ ಪಾತ್ರೆಯಿಂದ ನೀರು ತೆಗೆದುಕೊಂಡು ಕೈಕಾಲನ್ನು ತೊಳೆದುಕೊಂಡೆ. ಶ್ರೀಮಾತೆ ಅಲ್ಲಿಯವರೆಗೂ ಕಾಯುತ್ತಿದ್ದರು. ನಂತರ ಮೇಲಕ್ಕೆ ಹೋದೆವು. ಎರಡು ಎಲೆಗಳಲ್ಲಿ ನೈವೇದ್ಯ ಮಾಡಿದ ಹಣ್ಣು, ಮಿಠಾಯಿ ತೆಗೆದುಕೊಂಡು ತಮ್ಮ ಪಕ್ಕದಲ್ಲಿ ನನ್ನನ್ನು ಕುಳ್ಳಿರಿಸಿಕೊಂಡರು. ತುಂಬಾ ಪ್ರೀತಿಯಿಂದ ಅದನ್ನು ನನಗೆ ಕೊಟ್ಟು ತಾವೂ ಅದನ್ನು ಸ್ವೀಕರಿಸಿದರು.

ಕ್ರಮೇಣ ಹಲವು ಗೃಹಿಣೀ ಭಕ್ತರು ನೆರೆದರು. ನನಗೆ ಅವರ ಪರಿಚಯವಿರಲಿಲ್ಲ. ಅವರು ಶ್ರೀಮಾತೆಯವರ ಆಶ್ರಮದಲ್ಲಿ ಮಧ್ಯಾಹ್ನದ ಸಮಯ ಊಟಮಾಡುವರು. ಪೂಜಾನಂತರ ನಾವೆಲ್ಲಾ ಭೋಜನಕ್ಕೆ ಕುಳಿತೆವು. ಶ್ರೀಮಾತೆಯವರೂ ಕುಳಿತರು. ಅವರು ಮೂರು ತುತ್ತು

ಆಹಾರವನ್ನು ತೆಗೆದುಕೊಂಡು, ನನಗೆ ಸ್ವಲ್ಪ, ಉಳಿದವರಿಗೆ ಸ್ವಲ್ಪ ಕೊಟ್ಟರು. ಶ್ರೀಮಾತೆ ಹಿಂದಿನಂತೆ ಪ್ರಸನ್ನ ಚಿತ್ತರಾದರು. ಉಪದೇಶಾನಂತರ ಅವರು ಬೇರೊಂದು ಭಾವದಲ್ಲಿದ್ದರು. ಗಂಭೀರವಾಗಿ ಅಂತರ್ಮುಖಿಗಳಾಗಿದ್ದರು. ಶಿಷ್ಯರನ್ನು ಅನುಗ್ರಹಿಸುವ, ದುಷ್ಟರನ್ನು ಶಿಕ್ಷಿಸುವ ದೇವಿಯಂತೆ ಇದ್ದರು. ನಾನು ಭಯಚಕಿತಳಾಗಿದ್ದೆ. ಅವರು ಅನೇಕ ಜನರಿಗೆ ಉಪದೇಶಕೊಡುವುದನ್ನು ನಾನು ನಂತರ ನೋಡಿದ್ದೆ. ಆದರೆ ಇಂತಹ ಗಂಭೀರ ಭಾವ ಯಾವತ್ತೂ ಇರಲಿಲ್ಲ. ನಗುತ್ತಾ, ಹಾಸ್ಯಮಾಡುತ್ತಾ ಹಲವರಿಗೆ ಉಪದೇಶಕೊಟ್ಟಿದ್ದರು. ಅವರೂ ತೃಪ್ತರಾಗಿ ಸಂತೋಷಪಡುತ್ತಿದ್ದರು. ಕುತೂಹಲದಿಂದ ಪ್ರೇರಿತಳಾದ ನಾನು ಕೆಲವು ವೇಳೆ ಶ್ರೀಮಾತೆಯವರು ಉಪದೇಶಕೊಡುವಾಗ ಹೇಗೆ ಇರುತ್ತಾರೆ ಎಂದು ಕೇಳಿದೆ. ಒಂದು ದಿನ ಮಧ್ಯವಯಸ್ಸಿನ ವಿಧವೆಯೊಬ್ಬಳು, “ನಾವು ಅವರನ್ನು ಯಾವಾಗಲೂ ನೋಡುವಂತೆಯೇ ಇರುತ್ತಾರೆ. ಮತ್ತೇನೂ ವಿಶೇಷವಿಲ್ಲ. ಕುಲ ಗುರುಗಳು ನನಗೆ ಮೊದಲು ಉಪದೇಶ ಕೊಟ್ಟಿದ್ದರು. ನಂತರ ಶ್ರೀಮಾತೆಯವರ ಹೆಸರು ಕೇಳಿ ಉಪದೇಶಕ್ಕಾಗಿ ಅವರ ಸಮೀಪಕ್ಕೆ ಬಂದೆ. ಮೊದಲು ಕುಲಗುರು ಕೊಟ್ಟ ಮಂತ್ರವನ್ನು ಹತ್ತುವೇಳೆ ಉಚ್ಚರಿಸುವಂತೆ ಹೇಳಿದರು. ಅನಂತರ ಅವರು ನನಗೆ ಉಪದೇಶಕೊಟ್ಟರು. ಶ್ರೀರಾಮಕೃಷ್ಣರು ನನ್ನ ಗುರುಗಳೆಂದೂ, ಮತ್ತೊಂದನ್ನು ನನ್ನ ಇಷ್ಟವೆಂದೂ ಹೇಳಿದರು. ಶ್ರೀರಾಮಕೃಷ್ಣರಿಗೆ ‘ಹೇ ಭಗವಂತ! ಈ ಜನ್ಮದಲ್ಲಿ, ಮತ್ತು ಕಳೆದ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ನನ್ನನ್ನು ಪಾರುಮಾಡು, ಎಂದು ಪ್ರಾರ್ಥಿಸು’ ಎಂದರು. ‘ಈಗ ಏತಕ್ಕೋ ನನ್ನ ಮನಸ್ಸು ಸರಿಯಾಗಿಲ್ಲ. ಮಂತ್ರವನ್ನು ಅರ್ಧ ಗಂಟೆಗಿಂತ ಹೆಚ್ಚು ಉಚ್ಚರಿಸಲಾರೆ. ಯಾರೋ ನನ್ನನ್ನು ಹಿಡಿದೆಬ್ಬಿಸುವಂತೆ ತೋರುವುದು. ನಿನಗೂ ಹೀಗೆ ಆಗುವುದೇ? ನಾನು ಶ್ರೀಮಾತೆಯವರಲ್ಲಿ ಈ ವಿಷಯವನ್ನು ಹೇಳಬೇಕೆಂದು ಹಲವು ಬಾರಿ ಯೋಚಿಸಿರುವೆನು. ಆದರೆ ಹಾಗೆ ಮಾಡಲಾರೆ. ನೀನು ಅವರ ಹತ್ತಿರ ಬಹಳ ಸದರವಾಗಿರುವೆ. ಶ್ರೀಮಾತೆ ನನಗೆ ಮೋಸಮಾಡಿರುವರೆ?” ಎಂದು ಕೇಳಿದರು. ನನಗೆ ಈ ವಿವರಗಳನ್ನೆಲ್ಲಾ ತಿಳಿಯಬೇಕೆಂಬ ಆಸೆ ಇರಲಿಲ್ಲ. ಆ ಸ್ತ್ರೀ ಇದನ್ನೆಲ್ಲಾ ಮುಚ್ಚುಮರೆ ಇಲ್ಲದಂತೆ ಹೇಳಿದಳು. ನಾನು “ಇದನ್ನೆಲ್ಲಾ ಶ್ರೀಮಾತೆಗೆ ಬಿನ್ನವಿಸಿದೆ. ಮೊದಲು ನಿಮಗೆ ಸಂಕೋಚ

ವಾಗಬಹುದು. ಆದರೆ ಕ್ರಮೇಣ ಸುಲಭವಾಗುವುದು. ಮೊದಲು ನಮಗೂ ಅಷ್ಟು ಸದರವಾಗಿರಲು ಆಗಲಿಲ್ಲ. ಈಗಲೂ ಕೆಲವು ವೇಳೆ ಅವರು ಅಷ್ಟೇ ಗಂಭೀರವಾಗಿರುವರು. ಆಗ ಅವರ ಸಮೀಪಕ್ಕೆ ಹೋಗು ವುದಕ್ಕೇ ಅಂಜಿಕೆಯಾಗುವುದು" ಎಂದೆ.

ಸಂಜೆ ಗೃಹಿಣೀ ಭಕ್ತರು ಒಬ್ಬೊಬ್ಬರಾಗಿ ಶ್ರೀಮಾತೆಯವರ ಅಪ್ಪಣೆ ಪಡೆದು ಹೊರಟರು. ತಮ್ಮ ತಮ್ಮ ಮಕ್ಕಳಿಗೆ ಧ್ಯಾನ, ಪ್ರಾರ್ಥನೆ ಮಾಡುವಂತೆ ಹೇಳಿದರು. ಅವರು ತಡಮಾಡಿದರು. ಸ್ವಲ್ಪ ಅಪ್ರಸನ್ನರಾಗಿ, "ಸಂಜೆ ಪ್ರಾರ್ಥಿಸುವ ಬದಲು ಹರಟೆಹೊಡೆಯುತ್ತಿರು ವರು" ಎಂದರು. ಗುಲಾಬ್ ಮಾ, ಯೋಗಿನ್ ಮಾ, ಮುಂತಾದ ವರು ಅವರಿಗೆ ನಮಿಸಿದರು. ಎಲ್ಲರಿಗೂ ಇವರು ಆಶೀರ್ವದಿಸಿದರು. ಕೆಲವರ ತಲೆಯಮೇಲೆ ಕೈಯಿಟ್ಟರು, ಕೆನ್ನೆ ಮುಟ್ಟಿದರು. ಕೆಲವರಿಗೆ ಮುತ್ತು ಕೊಟ್ಟರು. ಶ್ರೀರಾಮಕೃಷ್ಣರ ಭಾವಚಿತ್ರದೆದುರು ನಮಸ್ಕರಿಸಿ ಧ್ಯಾನಕ್ಕೆ ಕುಳಿತರು. ಅವರ ಧ್ಯಾನಾನಂತರ ನಮಿಸಿ ಮನೆಗೆ ನಾನು ಹಿಂದಿರುಗಿದೆ.

ಶಾಲೆ ಕೆಲಸದಿಂದ ಶ್ರೀಮಾತೆಯವರ ದರ್ಶನಪಡೆಯಲು ಕೆಲವು ದಿನದಿಂದ ಸಾಧ್ಯವಾಗಲಿಲ್ಲ. ಇಂದು ನಾನು ಅವರಿಗೆ ನಮಿಸಿದೊಡನೆಯೆ, ಹಲವು ವಿಧದಲ್ಲಿ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸತೊಡಗಿದರು. ಭೂದೇವ ಎಂಬುವನು ಮಹಾಭಾರತವನ್ನು ಓದುತ್ತಿದ್ದನು. ಅವನಿನ್ನೂ ಸಣ್ಣ ಹುಡುಗ. ಸರಾಗವಾಗಿ ಓದಲು ಬರುತ್ತಿರಲಿಲ್ಲ. ಶ್ರೀಮಾತೆಯವರಿಗೆ ಇನ್ನೂ ಹಲವು ಕೆಲಸಗಳಿತ್ತು. ಆಗಲೇ ಸಂಜೆ ಸಮಯವಾಗುತ್ತಿತ್ತು. ಭೂದೇವನಿಗೆ, "ಅವಳಿಗೆ ಪುಸ್ತಕ ಕೊಡು. ಅವಳು ಸರಾಗವಾಗಿ ಓದುವಳು. ಈ ಅಧ್ಯಾಯವನ್ನು ಪೂರೈಸದೆ ನಿಲ್ಲಿಸಲು ಸಾಧ್ಯವಿಲ್ಲ" ಎಂದರು. ಅವರ ಅಪ್ಪಣೆ ಆಯಿತು. ನಾನು ಮಹಾಭಾರತವನ್ನು ಓದಲು ಪ್ರಾರಂಭಿ ಸಿದೆ. ನಾನೆಂದೂ ಅವರ ಸಮ್ಮುಖದಲ್ಲಿ ಪುಸ್ತಕ ಓದಿರಲಿಲ್ಲ. ಮೊದಲು ನನಗೆ ಸ್ವಲ್ಪ ನಾಚಿಕೆಯಾಯಿತು. ಅಂತೂ ನಾನು ಹೇಗೋ ಅಧ್ಯಾಯ ವನ್ನು ಪೂರೈಸಿದೆ. ಶ್ರೀಮಾತೆ ಪುಸ್ತಕಕ್ಕೆ ಕೈಮುಗಿದರು. ಸಂಜೆ ಮಂಗ ಳಾರತಿ ನೋಡಲು ದೇವರ ಮನೆಗೆ ಹೋದೆವು. ಶ್ರೀಮಾತೆ ತಮ್ಮ ಆಸ ನದ ಮೇಲೆ ಕುಳಿತು ಧ್ಯಾನಮಗ್ನರಾದರು.

ಶ್ರೀಮಾತೆ ಮಂತ್ರವನ್ನು ಕೇಳುವಂತೆ ಉಚ್ಚರಿಸುತ್ತಾ ಶ್ರೀರಾಮ

ಕೃಷ್ಣರ ಭಾವಚಿತ್ರಡೆದುರಿಗೆ ನಮಸ್ಕರಿಸಿದರು. ಅನಂತರ ಪ್ರಸಾದವನ್ನು ಎಲ್ಲರಿಗೂ ಹಂಚಿದರು. ಇದಾದಮೇಲೆ, ಸಂಭಾಷಣೆ ನಮ್ಮ ದಿನಚರಿಯ ಕಡೆ ತಿರುಗಿತು. ಶ್ರೀಮಾತೆಯವರು ಜಯರಾಮವಟೆಯಲ್ಲಿ ತಾವು ಕಳೆದ ಅವಿಶ್ರಾಂತ ಕರ್ಮದಿನಗಳನ್ನು ಕುರಿತು, ಯಾವಾಗಲೂ ಯಾವುದಾದರೂ ಒಂದು ಕೆಲಸದಲ್ಲಿ ನಿರತರಾಗಿರುವುದು, ದೇಹ ಮತ್ತು ಮನಸ್ಸಿಗೆ ಒಳ್ಳೆಯದೆಂದು ನಮಗೂ ಬೋಧಿಸಿದರು.

ಶ್ರೀಮಾತೆಯವರ ಮನೆಯ ಮುಂದಿನ ಬಯಲು ಪ್ರದೇಶದಲ್ಲಿ ಬಂಗಾಳ ದೇಶದ ಹೊರಗಡೆಯಿಂದ ಬಂದ ಕೆಲವರು ಇದ್ದರು. ಕಷ್ಟಪಟ್ಟು ಕೆಲಸಮಾಡಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಅವರಲ್ಲಿ ಒಬ್ಬನಿಗೆ ಒಬ್ಬಳು ಉಪಪತ್ನಿ ಇದ್ದಳು. ಅವರಿಬ್ಬರೂ ಒಟ್ಟಿಗೆ ಇದ್ದರು. ಒಮ್ಮೆ ಅವಳಿಗೆ ಬಹಳ ಖಾಯಿಲೆಯಾಯಿತು. ಶ್ರೀಮಾತೆಯವರು ಅವಳ ಖಾಯಿಲೆಯನ್ನು ಕುರಿತು, "ಆತ ಅವಳಿಗೆ ಅಷ್ಟು ಪ್ರೀತಿಯಿಂದ ಶುಶ್ರೂಷೆಮಾಡಿದ! ಇಂತಹ ಅದ್ಭುತ ಪ್ರೇಮವನ್ನು ನಾನು ಇದುವರೆಗೂ ನೋಡಿಲ್ಲ. ನಿಜವಾದ ಸೇವಾಭಾವವನ್ನು ಆತ ತೋರಿರುವನು" ಎಂದರು. ಆ ಮನುಷ್ಯನ ಭಕ್ತಿಯನ್ನು ಕುರಿತು ಅವರು ಶ್ಲಾಘಿಸಿದರು.

ಉಪಪತ್ನಿಯ ಮಾತನ್ನು ಕೇಳಿದೊಡನೆಯೆ ನಮಗೆ ಜಿಗುಪ್ಸೆಯಾಗುವುದು ಸಹಜ. "ಅಯ್ಯೋ! ಎಷ್ಟು ವೇಳೆ ಸಾಮಾಜಿಕ ನಿಯಮಗಳನ್ನು ಉಲ್ಲಂಘಿಸುವ ತೆರೆಯಿಂದ ಆವೃತವಾದ ಪುಣ್ಯವನ್ನು ನೋಡಲು ಮರೆಯುವೆವು!

ಬೀದಿಯ ಎದುರಿಗಿರುವ ಮನೆಯಿಂದ ಉತ್ತರ ಪ್ರಾಂತ್ಯದ ಹೆಂಗಸೊಬ್ಬಳು ತನ್ನ ಖಾಯಿಲೆ ಮಗುವನ್ನು ಎತ್ತಿಕೊಂಡು ಬಂದಳು. ಅವಳ ಕೋರಿಕೆಯನ್ನು ಶ್ರೀಮಾತೆಯವರು ಆಲಿಸಿದರು. ಮಗುವಿನಮೇಲೆ ಕರುಣೆ ತೋರಿ, ಬೇಗ ಹುಷಾರಾಗುವುದೆಂದು ಅದನ್ನು ಹರಸಿದರು. ಎರಡು ದೊಡ್ಡ ದಾಳಿಂಬೆ ಹಣ್ಣು ಮತ್ತು ದ್ರಾಕ್ಷಿಯನ್ನು ಪೂಜಾಮಂದಿರದಲ್ಲಿ ನೈವೇದ್ಯಕ್ಕೆ ಇಟ್ಟಿದ್ದರು. ಆ ಬಡ ಹೆಂಗಸಿಗೆ ಈ ಹಣ್ಣನ್ನೆಲ್ಲಾ ಕೊಟ್ಟು, "ಇದನ್ನು ಮಗುವಿಗೆ ಕೊಡು" ಎಂದರು. ಶ್ರೀಮಾತೆಯ ಔದಾರ್ಯವನ್ನು ನೋಡಿ, ಆ ಹೆಂಗಸಿಗೆ ಪರಮಾನಂದವಾಯಿತು. ಪುನಃ ಪುನಃ ಅವರಿಗೆ ನಮಿಸಿದಳು.

೧೧ ನೇ ಫೆಬ್ರವರಿ ೧೯೧೨.

ಇಂದು ಶ್ರೀಮಾತೆಯ ದರ್ಶನ ಪಡೆದು ಅವರಿಗೆ ನಮಿಸಿದೊಡನೆಯೆ ಅವರು ಬಹಳ ದುಃಖದಿಂದ "ಅಯ್ಯೋ! ಗಿರೀಶ್‌ಬಾಬು ಕಾಲವಾದನು. ಇಂದು ನಾಲ್ಕನೆ ದಿನ. ಅವನ ನೆಂಟರು ಅವರ ಮನೆಗೆ ಬರಬೇಕೆಂದು ನನಗೆ ಹೇಳಲು ಬಂದಿದ್ದರು. ಅಲ್ಲಿಗೆ ಪುನಃ ಹೋಗುವುದಕ್ಕೆ ನನಗೆ ಸಾಧ್ಯವೆ? ಶ್ರೀರಾಮಕೃಷ್ಣರಮೇಲೆ ಗಿರೀಶನಿಗೆ ಎಂತಹ ಶ್ರದ್ಧೆ, ಭಕ್ತಿ? ನೀನು ಈ ಘಟನೆಯನ್ನು ಕೇಳಿರುವೆಯಾ? ಆತ ಒಮ್ಮೆ ರಾಮಕೃಷ್ಣರನ್ನು ತಮ್ಮ ಮಗುವಾಗಿ ಹುಟ್ಟಬೇಕೆಂದು ಪ್ರಾರ್ಥಿಸಿಕೊಂಡನು. ಪರಮಹಂಸರು, 'ನಾನೇಕೆ ನಿನ್ನ ಮನೆಯಲ್ಲಿ ಹುಟ್ಟಬೇಕು?' ಎಂದರು. ಆದರೆ ಮಗು, ಭಗವಂತನ ನಿಗೂಢ ನಿಯಮವನ್ನು ಯಾರು ಬಲ್ಲರು! ಪರಮಹಂಸರ ಕಾಲಾನಂತರ ಒಬ್ಬ ಮಗು ಆವನಿಗೆ ಹುಟ್ಟಿದನು. ಅದೊಂದು ವಿಚಿತ್ರ ಮಗು! ಅದಕ್ಕೆ ನಾಲ್ಕು ವರ್ಷವಾದರೂ ಯಾರ ಹತ್ತಿರವೂ ಮಾತನ್ನೇ ಆಡುತ್ತಿರಲಿಲ್ಲ. ಅದರ ಸನ್ನೆಯಿಂದ ಮಾತ್ರ ಅದರ ಮನಸ್ಸು ಇತರರಿಗೆ ತಿಳಿಯುತ್ತಿತ್ತು. ತಂದೆತಾಯಿಗಳು ಮಗುವನ್ನು ಶ್ರೀರಾಮಕೃಷ್ಣರೆಂದೇ ಭಾವಿಸಿದರು. ಅವನಿಗೆ ಸಂಭಂಧಪಟ್ಟ ಉಡುಪು ತಟ್ಟೆ, ಬಟ್ಟಲು, ಗ್ಲಾಸು, ಎಲ್ಲವನ್ನು ಪ್ರತ್ಯೇಕವಾಗಿ ಇಟ್ಟರು. ಉಳಿದವರು ಯಾರೂ ಅದನ್ನು ಉಪಯೋಗಿಸುತ್ತಿರಲಿಲ್ಲ.

"ಒಂದು ದಿನ ಮಗು ನನ್ನನ್ನು ನೋಡಬೇಕೆಂದು ತುಂಬಾ ಕಾತುರಪಟ್ಟಿತು. ನನ್ನ ಭಾವಚಿತ್ರ ಅವರ ಮನೆಯ ಮಹಡಿಯಮೇಲೆ ಇತ್ತು. ಮನೆಯವರನ್ನೆಲ್ಲ ಮೇಲಕ್ಕೆ ಕರೆದುಕೊಂಡು ಹೋಗಿ, ಶಬ್ದಮಾಡಿ, ನನ್ನ ಚಿತ್ರವನ್ನು ಅವರಿಗೆ ತೋರಿಸಿತು. ಮೊದಲು ಅವರಿಗೆ ಇದು ತಿಳಿಯಲಿಲ್ಲ. ನಂತರ ಅವರು ಆ ಮಗುವನ್ನು ನನ್ನ ಬಳಿಗೆ ಕರೆದು ತಂದರು. ಆ ಮಗುವಿಗೆ ನಾಲ್ಕೇ ವರ್ಷವಾಗಿದ್ದರೂ ನನಗೆ ನಮಸ್ಕರಿಸಿತು. ಮನೆ ಮಹಡಿಯ ಮೇಲೆ ಹೋಗಿ ಮಗು ಅಪ್ಪನ ಪಂಚೆ ಸೆಳೆಯಿತು. ತಂದೆ ಕೂಡ ನನ್ನನ್ನು ನೋಡಬೇಕೆಂದು ಬಯಸಿತು. ಗಿರೀಶ್ ಕಂಬನಿದುಂಬಿ ಅಳುತ್ತ, 'ನನ್ನ ಮುದ್ದು ಕಂದ, ಶ್ರೀಮಾತೆಯನ್ನು ನಾನು ನೋಡಲಾರೆ. ನಾನು ಕಡು ಪಾಪಿ!' ಎಂದನು. ಆದರೆ ಮಗು ಬಿಡಲಿಲ್ಲ. ಕೊನೆಗೆ ಗಿರೀಶ ಮಗುವಿನ ಇಚ್ಛೆಯಂತೆ ನಡೆದುಕೊಳ್ಳಬೇಕಾಯಿತು. ಮಗುವನ್ನು ಎತ್ತಿಕೊಂಡನು. ಕಂಬನಿ ಸುರಿಸುತ್ತ, ಗದ್ಗದ ಕಂಠದಿಂದ ಸಾಷ್ಟಾಂಗ

ನಮಸ್ಕಾರ ಮಾಡಿದನು. 'ಶ್ರೀಮಾತೆ, ಈ ಮಗು ನಿಮ್ಮ ಶ್ರೀ ಚರಣಗಳನ್ನು ನೋಡುವಂತೆ ಮಾಡಿತು' ಎಂದನು. ಆ ಮಗು ತನ್ನ ನಾಲ್ಕನೆ ವಯಸ್ಸಿನಲ್ಲೇ ಕಾಲವಾಯಿತು. ಒಂದು ದಿನ ಗಿರೀಶ್‌ಬಾಬು, ಅವರ ಹೆಂಡತಿ, ತಮ್ಮ ಮನೆ ಮಹಡಿಯ ಮೇಲೆ ಕುಳಿತಿದ್ದರು. ಆಗ ನಾನು ಬಲರಾಮ ವಸುವಿನ ಮನೆಯಲ್ಲಿದ್ದೆ. ಎರಡು ಮನೆಗಳೂ ಸಮೀಪದಲ್ಲಿದ್ದುವು. ನಾನು ಕೂಡ ನಮ್ಮ ಮನೆ ಮಹಡಿಯ ಮೇಲೆ ಹೋದೆ. ಗಿರೀಶ ತನ್ನ ಮಹಡಿಯಿಂದ ನನ್ನನ್ನು ನೋಡಬಹುದೆಂದು ನನಗೆ ತೋರಲಿಲ್ಲ. ಅವನ ಹೆಂಡತಿ ಗಂಡನಿಗೆ, 'ನೋಡಿ ಅಲ್ಲಿ. ಶ್ರೀಮಾತೆ ಆ ಮನೆ ಮಹಡಿಯ ಮೇಲೆ ತಾರಾಡುತ್ತಿರುವರು' ಎಂದಳು. ತಕ್ಷಣ. ಗಿರೀಶ್ ನನ್ನ ಕಡೆಗೆ ತನ್ನ ಬೆನ್ನನ್ನು ತೋರಿ, 'ಇಲ್ಲ, ಇಲ್ಲ, ಕಳ್ಳನಂತೆ ನಾನು ಅವರನ್ನು ನೋಡಲಾರೆ. ನನ್ನದು ಪಾಪಿಯ ಕಣ್ಣು!' ಎಂದನು. ತಕ್ಷಣ ಮಹಡಿ ಇಳಿದು ಬಂದನು. ಈ ಸಂಗತಿಯನ್ನು ಅವನ ಹೆಂಡತಿ ಅನಂತರ ಹೇಳಿದಳು."

೧೫ ನೇ ಜೂನ್, ೧೯೧೨.

ಶ್ರೀಮಾತೆಯವರು ಹಲವು ಗೃಹಿಣೀ ಭಕ್ತರೊಂದಿಗೆ ಕುಳಿತ್ತಿದ್ದರು ನನಗೆ ಅವರಲ್ಲಿ ಕೆಲವರ ಪರಿಚಯವಿತ್ತು ಶ್ರೀ ಮಾತೆ ಅವರ ಸಂಗಡ ತುಂಬಾ ಸಂತೋಷದಲ್ಲಿದ್ದರು. ಮಂದಹಾಸದಿಂದ ನನ್ನನ್ನು ಬರಮಾಡಿಕೊಂಡರು. ಗೌರಿಮಾಗೆ, ಪುಸ್ತಕಭಂಡಾರದಿಂದ, ಸೋದರಿ ನಿವೇದಿತಾ ಜೀವನ, ಮತ್ತು ಸ್ವಾಮಿ ವಿವೇಕಾನಂದರು ಭರತಖಂಡದಲ್ಲಿ ಮಾಡಿದ ಉಪನ್ಯಾಸವನ್ನು ತೆಗೆದುಕೊಂಡು ಬರುವಂತೆ ಹೇಳಿದೆ. ಸೋದರಿ ನಿವೇದಿತೆಯ ಪುಸ್ತಕದಿಂದ ಕೆಲವು ಭಾಗಗಳನ್ನು ಶ್ರೀಮಾತೆಗೆ ಓದಬಯಸಿದೆ. ಶ್ರೀಮಾತೆ ಒಪ್ಪಿ; "ನಿವೇದಿತೆ ಜೀವನ ಓದು. ನನಗೂ ಕೆಲವು ದಿನಗಳ ಹಿಂದೆ ಆ ಪುಸ್ತಕ ಕಳುಹಿಸಿದರು. ಆದರೆ ನಾನಿನ್ನೂ ಅದನ್ನು ನೋಡಿಲ್ಲ" ಎಂದರು. ಅಷ್ಟೊಂದು ಜನರೆದುರಿಗೆ ಓದಲು ನನಗೆ ಸ್ವಲ್ಪ ನಾಚಿಕೆಯಾಯಿತು. ಆದರೂ ಸರಳ ಬಾಲೆ ಬರೆದ ಅತಿ ಸುಂದರ ನಿವೇದಿತೆಯ ಜೀವನವನ್ನು ಶ್ರೀಮಾತೆಗೆ ಓದಬಯಸಿದೆ. ಅವರ ಅಪ್ಪಣೆಯನ್ನು ಪರಿಪಾಲಿಸಿದೆ. ಶ್ರೀಮಾತೆ ಮತ್ತು ಇತರರು ಬಹಳ ಉತ್ಸಾಹದಿಂದ ಕೇಳತೊಡಗಿದರು. ನಿವೇದಿತೆಯ ಅಪೂರ್ವ ಭಕ್ತಿಯನ್ನು ಕೇಳಿ ಅವರ ಕಣ್ಣಿನಲ್ಲೂ ನೀರು ಬಂತು. ನಿವೇದಿತೆಯನ್ನು ಕುರಿತು, "ನಿವೇದಿತೆ

ಯದು ಎಂತಹ ಶ್ರದ್ಧೆ. ನನಗಾಗಿ ಏನನ್ನು ಬೇಕಾದರದ ಮಾಡಲು ಸಿದ್ಧಳಾಗಿದ್ದಳು; ಅನೇಕ ವೇಳೆ ನನ್ನನ್ನು ನೋಡಲು ರಾತ್ರಿವೇಳೆ ಬರುತ್ತಿದ್ದಳು. ಹೆಚ್ಚು ಬೆಳಕು ನನಗೆ ಆಗದಿದ್ದುದನ್ನು ಕಂಡು ಬೆಳಕಿನ ಸುತ್ತಲೂ ಒಂದು ಕಾಗದವನ್ನು ಸುತ್ತುತ್ತಿದ್ದಳು. ನನಗೆ ನಮಸ್ಕಾರ ಮಾಡಿ, ಅತಿ ಮೃದುವಾಗಿ ತನ್ನ ಕರವಸ್ತ್ರದಿಂದ ನನ್ನ ಪದರಜವನ್ನು ತೆಗೆದುಕೊಳ್ಳುತ್ತಿದ್ದಳು. ಅವಳು ನನ್ನ ಕಾಲನ್ನು ಮುಟ್ಟುವುದಕ್ಕೂ ಅನುಮಾನಿಸುತ್ತಿದ್ದಳೆಂದು ತೋರುವುದು.'' ನಿವೇದಿತೆಯ ಸ್ಮೃತಿ ಅವರನ್ನು ಬಹಳ ಗಂಭೀರ ಭಾವಕ್ಕೆ ಒಯ್ದಿತು.

ಅಲ್ಲಿದ್ದವರು ನಿವೇದಿತೆಗೆ ಸಂಬಂಧಪಟ್ಟ ಸುದ್ದಿಯನ್ನು ಹೇಳತೊಡಗಿದರು. ದುರ್ಗಾದೀದಿ, ''ಭರತಖಂಡದ ದುರದೃಷ್ಟ. ಇವರು ಇಷ್ಟು ಬೇಗ ಕಾಲವಾಗಿದ್ದು'' ಎಂದಳು. ಮತ್ತೊಬ್ಬಳು, ''ನಿವೇದಿತೆ ಭರತಖಂಡವನ್ನು ತನ್ನ ತಾಯ್ನಾಡೆಂದು ಭಾವಿಸಿದ್ದಳು. ಅವಳೇ ಅದನ್ನು ಅನೇಕವೇಳೆ ಹೇಳಿದ್ದಳು. ಸರಸ್ವತಿ ಪೂಜೆಯದಿನ ಬರೀ ಕಾಲಿನಲ್ಲಿ ನಡೆಯುತ್ತಿದ್ದಳು. ಹಣೆಗೆ ಹೋಮದ ಬೂದಿಯನ್ನು ಧರಿಸುತ್ತಿದ್ದಳು'' ಎಂದರು. ನಾನು ಓದುವುದನ್ನು ಪೂರೈಸಿದೆ. ಶ್ರೀಮಾತೆ ಮಧ್ಯೆಮಧ್ಯೆ ಅವರನ್ನು ಕುರಿತು ಪ್ರಸ್ತಾಪಿಸುತ್ತಿದ್ದರು. ಕೊನೆಗೆ, ''ಮನ ನಿಜವಾದ ಭಕ್ತರಿಗೆ ಮರುಗುವುದು'' ಎಂದರು.

ಮಧ್ಯಾಹ್ನದ ಪೂಜೆ ಸಮಯ. ಶ್ರೀಮಾತೆ ಸೀರೆಯನ್ನು ಬದಲಾಯಿಸಿ ಶ್ರೀರಾಮಕೃಷ್ಣರ ಭಾವಚಿತ್ರದ ಮುಂದೆ ಆಸನದ ಮೇಲೆ ಕುಳಿತರು. ತಮ್ಮ ಕೈಯಿಂದಲೇ ಭಾವಚಿತ್ರಕ್ಕೆ ಹಾಕಲು ಒಂದು ಹೂವಿನ ಹಾರವನ್ನು ಮಾಡಿದ್ದರು. ರಾಸ್‌ಬಿಹಾರಿ ಎಂಬ ತರುಣ ಬ್ರಹ್ಮಚಾರಿ, ನೈವೇದ್ಯಕ್ಕೆಂದು ಮಿಠಾಯಿಯನ್ನು ಅವರ ಸಮೀಪದಲ್ಲಿಟ್ಟಿದ್ದನು. ಇರುವೆ ಮಿಠಾಯಿಯನ್ನು ಮುತ್ತಿತು. ಕೆಲವು ಇರುವೆಗಳು ಹಾರದಲ್ಲಿಯೂ ಸೇರಿದ್ದವು. ''ನೋಡು, ರಾಸ್‌ಬಿಹಾರಿ ಏನು ಮಾಡಿದ! ಶ್ರೀರಾಮಕೃಷ್ಣರಿಗೆ ಈ ಇರುವೆ ಕಚ್ಚುವುದು'' ಎಂದರು. ಹಾರಕ್ಕೆ ಮುತ್ತಿದ್ದ ಇರುವೆಯನ್ನು ತೆಗೆದು, ನಿಧಾನವಾಗಿ ಭಾವಚಿತ್ರಕ್ಕೆ ಅದನ್ನು ಹಾಕಿದರು. ಇತರರೆದುರಿಗೆ ತಮ್ಮ ಪತಿದೇವರ ಭಾವಚಿತ್ರವನ್ನು ಅಲಂಕರಿಸುವುದನ್ನು ನೋಡಿ, ಅವರ ನಾದಿನಿ, ಸೌರಬಾಲೆ ನಕ್ಕಳು. ನಂತರ ಪ್ರಸಾದವನ್ನು ಎಲ್ಲರಿಗೂ ಹಂಚಿದರು.

ಒಬ್ಬ ಗೃಹಿಣೀ ಭಕ್ತೆ, "ತಾಯೀ, ನನಗೆ ಐದು ಹೆಣ್ಣು ಮಕ್ಕಳು. ಅವರಿಗೆ ಸರಿಯಾದ ವರ ಸಿಕ್ಕುವುದು ದುರ್ಲಭ. ನಾನು ತುಂಬಾ ಕಾತುರಳಾಗಿರುವೆ" ಎಂದಳು.

ಶ್ರೀಮಾತೆ:– ಅವರ ಮದುವೆ ವಿಚಾರವಾಗಿ ಏತಕ್ಕೆ ಇಷ್ಟು ಕಾತುರ ಪಡುವೆ? ಸರಿಯಾದ ವರ ಸಿಕ್ಕದಿದ್ದರೆ, ಓದಲು ನಿವೇದಿತಾ ಶಾಲೆಗೆ ಕಳುಹಿಸು. ಶಾಲೆಯಲ್ಲಿ ಅವರು ಸಂತೋಷವಾಗಿರುವರು.

ಮತ್ತೊಬ್ಬ ಗೃಹಿಣೀ ಭಕ್ತಳು:—ನಿನಗೆ ಶ್ರೀಮಾತೆಯಲ್ಲಿ ನಂಬಿಕೆ ಇದ್ದರೆ ಅವರು ಹೇಳಿದಂತೆ ಮಾಡು. ಅದು ನಿನ್ನ ಹಿತಕ್ಕೆ. ನೀನು ಅವರ ಮಾತನ್ನು ಕೇಳಿದರೆ ತೊಂದರೆ ಇಲ್ಲ.

ಐದು ಮಕ್ಕಳ ತಾಯಿ ಈ ಬುದ್ಧಿವಾದವನ್ನು ಅಷ್ಟು ಒಳ್ಳೆಯ ದೃಷ್ಟಿಯಿಂದ ನೋಡಲಿಲ್ಲ ಎಂದು ಹೇಳಬೇಕಾಗಿಲ್ಲ.

ಮೂರನೆ ಭಕ್ತಳು:– ಈಗಿನ ಕಾಲದಲ್ಲಿ ಸರಿಯಾದ ವರ ಸಿಕ್ಕುವುದು ದುರ್ಲಭ. ಅನೇಕ ಹುಡುಗರು ಮದುವೆಗೇ ಒಪ್ಪುವುದಿಲ್ಲ.

ಶ್ರೀಮಾತೆ:–ಹೌದು, ಅವರಿಗೂ ವಿಚಾರ ತಲೆದೋರಿದೆ. ಪ್ರಾಪಂಚಿಕ ಸುಖ ಕ್ಷಣಿಕವೆಂಬುದು ಅವರಿಗೆ ಕ್ರಮೇಣ ಗೊತ್ತಾಗುತ್ತಿದೆ. ಪ್ರಪಂಚದಲ್ಲಿ ಎಷ್ಟು ಅನಾಸಕ್ತನಾಗಿದ್ದರೆ ಅಷ್ಟು ಶಾಂತಿ ಹೆಚ್ಚು.

ಅಂದು ಶ್ರೀಮಾತೆಗೆ ಮಣಿದು ಬೀಳ್ಕೊಡುವಾಗ ಆಗಲೇ ಹೊತ್ತಾಗಿತ್ತು.

ಮತ್ತೊಂದು ದಿನ ಶ್ರೀಮಾತೆಯವರನ್ನು ನೋಡಲು ಬಾಗ್ ಬಜಾರಿಗೆ ಹೋದೆ. ಮಧ್ಯಾಹ್ನ ಊಟವಾದಮೇಲೆ ಅವರು ವಿಶ್ರಮಿಸಿಕೊಳ್ಳುತ್ತಿದ್ದರು. ತಮಗೆ ಗಾಳಿ ಬೀಸುವಂತೆ ಅಪ್ಪಣೆಕೊಟ್ಟರು. ತಕ್ಷಣ ತಮಗೆ ತಾವೇ ಹೀಗೆ ಮಾತನಾಡುತ್ತಿದ್ದುದು ಕೇಳಿಬಂತು: "ನೀವೆಲ್ಲ ಬಂದಿರಿ, ಆದರೆ ಶ್ರೀರಾಮಕೃಷ್ಣರೆಲ್ಲಿ?" ನಾನು, "ಅವರನ್ನು ಈ ಜನ್ಮದಲ್ಲಿ ಕಾಣಲಿಲ್ಲ. ಯಾರಿಗೆ ಗೊತ್ತು? ಮತ್ತಾವ ಜನ್ಮದಲ್ಲಿ ನಾವು ಅವರನ್ನು ನೋಡುವೆವೊ. ಆದರೆ ಇದೇ ನಮ್ಮ ಮಹಾಭಾಗ್ಯ! ನಾವು ನಿಮ್ಮ ಪಾದಸ್ಪರ್ಶಮಾಡಿರುವೆವು" ಎಂದೆ.

ಶ್ರೀಮಾತೆಯವರು, "ಹೌದು, ಅದೇನೊ ನಿಜ" ಎಂದು

ಸಂತೋಷದಲ್ಲಿ ಹೇಳಿದರು. ಇವರ ಒಪ್ಪಿಗೆಯನ್ನು ನೋಡಿ ನನಗೆ ಆಶ್ಚರ್ಯವಾಯಿತು. ಬಹಳ ಅಪರೂಪ ಅವರು ಈ ರೀತಿ ಮಾತನಾಡು ತ್ತಿದ್ದುದು.

ಶ್ರೀಮಾತೆಗೆ ಅನೇಕರು ತಮ್ಮ ಜೀವನದ ರಹಸ್ಯಗಳನ್ನು ಹೇಳುತ್ತಿದ್ದರು ಎಂಬುದು ನನಗೆ ಗೊತ್ತಿರಲಿಲ್ಲ. ನಾನೊಬ್ಬ ಹುಡುಗಾಟದ ಹುಡುಗಿಯಾಗಿದ್ದೆ. ನನಗೆ ಇದಾವುದೂ ಗೊತ್ತಿರಲಿಲ್ಲ. ಅದಕ್ಕೇ ನಾನು ಅಲ್ಲಿಗೆ ಹೋದಾಗ ಅವರು ನನ್ನ ಕಣ್ಣಿಗೆ ಕಾಣದೆಹೋದರೆ ಮನೆಯನ್ನೆಲ್ಲಾ ಸುತ್ತಿ ಹುಡುಕಾಡುತ್ತಿದ್ದೆ. ಅವರು ಬರುವತನಕ ಕಾಯುತ್ತಿರಲಿಲ್ಲ. ಒಂದು ದಿನ ಸಾಯಂಕಾಲ ಇಬ್ಬರು ಸುಂದರ ತರುಣಿಯರು ಶ್ರೀಮಾತೆಯವರ ಕೋಣೆಗೆ ಉತ್ತರದಲ್ಲಿ ಕುಳಿತುಕೊಂಡು, ತಮ್ಮ ಬಾಳ ರಹಸ್ಯಗಳನ್ನು ಹೇಳಿಕೊಳ್ಳುತ್ತಿದ್ದರು. ಅದೇ ಸಮಯದಲ್ಲಿ ಮನೆಯ ಎಲ್ಲಾ ಕಡೆ ಹುಡುಕಿ ಸಿಕ್ಕದೆ, ಇಲ್ಲಿಗೆ ಅವರನ್ನು ನೋಡಲು ಬಂದೆ. ಶ್ರೀಮಾತೆಯವರು ಹೀಗೆ ಹೇಳುತ್ತಿದ್ದದು ನನಗೆ ಕೇಳಿಸಿತು: "ಶ್ರೀರಾಮ ಕೃಷ್ಣರ ಅಡಿಯಲ್ಲಿ ನಿಮ್ಮ ಹೃದಯ ವೇದನೆಯನ್ನೆಲ್ಲಾ ಇಡಿ. ಕಂಬನಿ ಕರೆದು ನಿಮ್ಮ ಜೀವನದ ದುಃಖವನ್ನೆಲ್ಲಾ ಅವರಿಗೆ ಹೇಳಿ. ನಿಮ್ಮ ಇಚ್ಛೆಯನ್ನು ಅವರು ನೆರವೇರಿಸುವರು. ಅವರು ಮಕ್ಕಳನ್ನು ಇಚ್ಛಿಸುತ್ತಿದ್ದರೆಂಬುದು ಆಗ ನನಗೆ ಗೊತ್ತಾಯಿತು. ಅವರು ನನ್ನನ್ನು ನೋಡಿ ನಾಚಿದರು. ನನಗೆ ಅವರಿಗಿಂತ ನಾಚಿಕೆಯಾಯಿತು. ಆದರೆ ನಾನೊಂದು ದೊಡ್ಡ ಪಾಠ ಕಲಿತೆ. ತಿಳಿಸದೆ ನಾನು ಪುನಃ ಅವರ ಬಳಿಗೆ ಹೋಗುವುದಿಲ್ಲವೆಂದು ಶಪಥಮಾಡಿದೆ. ಕೆಲವು ತಿಂಗಳಾದಮೇಲೆ, ನಾನು ಆ ಹೆಂಗಸರನ್ನು ಶ್ರೀಮಾತೆಯವರ ಸಮೀಪದಲ್ಲಿ ನೋಡಿದೆ. ಅವರ ಬಯಕೆ ಶೀಘ್ರದಲ್ಲಿಯೇ ಫಲಿಸುವುದರಲ್ಲಿರುವುದನ್ನು ನೋಡಿ ನನಗೆ ಆನಂದವಾಯಿತು.

ಗೌರಿಮಾ ಅಲ್ಲಿದ್ದರು. ನಮ್ಮ ಕೋರಿಕೆಯ ಮೇರೆ ಅವರು ಪರಮಹಂಸರ ನೆನಪನ್ನು ಹೇಳಿದರು. ಅನೇಕ ಭಕ್ತರು ಬರುವುದಕ್ಕೆ ಮುಂಚೆಯೇ ನಾನು ಅವರ ಬಳಿ ಹೋದೆ. "ನರೇನ್ (ವಿವೇಕಾನಂದ), ಕಾಳಿ (ಅಭೇದಾನಂದ), ಸಣ್ಣವರಾಗಿದ್ದಾಗಲೇ ನೋಡಿದ್ದೆ" ಎಂದರು. ಸಂಜೆಯಾಗಿತ್ತು. ಮಾತನ್ನು ನಿಲ್ಲಿಸಬೇಕಾಯಿತು. ಗೌರಿಮಾ ಶ್ರೀಮಾತೆಯಿಂದ ಬೀಳ್ಕೊಟ್ಟರು. ನಾನೂ ಹೋಗಬೇಕಾಯಿತು. ಅಪ್ಪಣೆ ಪಡೆದು ಹೋಗುವಾಗ ನನ್ನನ್ನು ಒಳ ಅಂಗಳಕ್ಕೆ ಕರೆದು ಪ್ರಸಾದ

ಕೊಟ್ಟರು. “ಪುನಃ ಬಾ, ಬಂದರೆ ನೀನು ತುಂಬಾ ಹೊತ್ತು ಇರುವುದೇ ಇಲ್ಲ. ಒಂದು ದಿನ ಬೆಳಗ್ಗೆ ಏಳು ಗಂಟೆಗೆ ಬಾ. ಮಧ್ಯಾಹ್ನದ ಊಟ ವನ್ನು ಇಲ್ಲೇ ಮಾಡು” ಎಂದರು.

೮ ನೇ ಸೆಪ್ಟೆಂಬರ್, ೧೯೧೨

ಗೌರಿಮಾ ಶಾಲೆಯ ಕೆಲಸದಲ್ಲಿ ನಾನು ನಿರತಳಾಗಿದ್ದೆ. ನನ್ನ ಇಚ್ಛೆ ಯಂತೆ ಶ್ರೀಮಾತೆಯ ದರ್ಶನ ಪಡೆಯಲು ಸಾಧ್ಯವಾಗಲಿಲ್ಲ. ಒಂದು ಪುಣ್ಯ ದಿನ ಬೆಳಗ್ಗೆ ಅಲ್ಲಿಗೆ ಬಂದೆ. ಗಂಗಾ ನದಿಗೆ ಸ್ನಾನಕ್ಕೆ ಹೋಗಲು ಅವರು ಅಣಿಯಾಗುತ್ತಿದ್ದರು. ನನ್ನನ್ನು ನೋಡಿದ ತಕ್ಷಣವೇ ಸಂತೋಷ ದಿಂದ, “ಇವತ್ತು ನೀನು ಬಂದುದು ತುಂಬಾ ಸಂತೋಷ. ಇಂದು ರಾಧೆಯ ಜನ್ಮದಿನ. ನಾನು ಗಂಗಾ ನದಿಯಿಂದ ಬರುವವರೆಗೂ ಸ್ವಲ್ಪ ತಾಳು” ಎಂದರು. ನಾನೂ ಅವರ ಜೊತೆಯಲ್ಲಿ ಗಂಗಾ ನದಿಗೆ ಹೋಗ ಲಿಚ್ಛಿಸಿದೆ. ಅವರು ಮೊದಲು ಒಪ್ಪಿಕೊಂಡರು. ಸೋನೆ ಮಳೆ ಹೊರಗೆ ಶುರುವಾಗಿತ್ತು. ನಾನು ಮಳೆಯಲ್ಲಿ ಹೋಗುವುದು ಹಿತವಲ್ಲವೆಂದು ಗುಲಾಬ್ ಮಾ ಎಚ್ಚರಿಸಿದಳು. ಶ್ರೀಮಾತೆಯವರು ಅವರ ಮಾತನ್ನೇ ಒಪ್ಪಿ, “ನೀನು ಇಲ್ಲೇ ಸ್ವಲ್ಪ ತಾಳು. ನಾನು ಬೇಗ ಬರುತ್ತೇನೆ” ಎಂದರು. ಅನೇಕ ವೇಳೆ ಅವರು ಸಣ್ಣ ಹುಡುಗಿಯಂತೆ ವರ್ತಿಸುತ್ತಿದ್ದು ದನ್ನು ನೋಡಿರುವೆವು. ಮತ್ತೊಬ್ಬರಮೇಲೆ ತಮ್ಮ ಅಭಿಪ್ರಾಯವನ್ನು ಎಂದೂ ಬಲಾತ್ಕರಿಸುತ್ತಿರಲಿಲ್ಲ. ಅವರು ರಸ್ತೆಗೆ ಬಂದೊಡನೆ ಮಳೆ ನಿಂತಿತು. ಸ್ನಾನ ಪೂರೈಸಿ ಮನೆಗೆ ಹಿಂತಿರುಗಿದರು. “ನಾನು ಬೀದಿಗೆ ಕಾಲಿಡುವುದರೊಳಗೆ ಮಳೆಯು ನಿಂತಿತು. ನೀನು ನನ್ನ ಜೊತೆಗೆ ಬರ ಬೇಕೆಂದು ಇದ್ದೆ. ಬಂದಿದ್ದರೆ ಚೆನ್ನಾಗಿತ್ತು, ಎಂದು ನನಗೂ ಅನ್ನಿಸಿತು. ಪವಿತ್ರ ಗಂಗಾ ನದಿಯ ದರ್ಶನವಾಗುತ್ತಿತ್ತು” ಎಂದರು. ನನಗೇನೊ ಗಂಗಾ ನದಿಯ ದರ್ಶನಕ್ಕಿಂತ ಅವರ ಸಾನ್ನಿಧ್ಯ ಹೆಚ್ಚು ಆನಂದದಾಯಕ ವಾಗಿತ್ತು. ಇಪ್ಪತ್ತೆಂಟು ಸಂಸಾರ ತಾಪತ್ರಯದಲ್ಲಿ ಸಿಕ್ಕಿರುವರಿಗೆ ಅವರ ದರ್ಶನಕ್ಕೆ ಸಮಯವೇ ಸಿಕ್ಕುವುದಿಲ್ಲ. ಅಪರೂಪವಾಗಿ ಯಾವತ್ತಾ ದರೂ ಒಂದು ದಿನ ಹೋದರೆ ಅಂದು ಅವರ ಸಾನ್ನಿಧಿಯಲ್ಲಿ ಇರುವತನಕ, ಒಂದು ನಿಮಿಷವೂ ಅಗಲಲು ಇಚ್ಛಿಸುವುದಿಲ್ಲ. ಗುಲಾಬ್‌ಮಾ ಶ್ರೀ ಮಾತೆಯ ಮಾತನ್ನು ಕೇಳಿ, “ಗಂಗೆಯನ್ನು ನೋಡದೆ ಇದ್ದರೆ ಏನಂತೆ, ನಿಮ್ಮ ಪಾದಕಮಲ ಸ್ಪರ್ಶದಿಂದ ಬಯಕೆಗಳೆಲ್ಲಾ ಈಡೇರುವುವು”

ಎಂದರು. ನಾನೂ ಇದಕ್ಕೆ ಸಮ್ಮತಿಯನ್ನು ಸೂಚಿಸಿದೆ. ಆದರೆ ಶ್ರೀಮಾತೆ ತಕ್ಷಣ, "ಹಾಗೆ ಹೇಳಬೇಡ. ಇದು ಎಷ್ಟಾದರೂ ಗಂಗಾಮಾಯಿ!" ಎಂದರು. ಶ್ರೀಮಾತೆಯವರು ಎಂದೂ ಮಾತು ಅಥವಾ ನಡತೆಯ ಮೂಲಕ ತಮ್ಮ ದೈವತ್ವವನ್ನು ಹೊರಗೆ ಪ್ರಕಟಿಸುತ್ತಿರಲಿಲ್ಲ. ತಾವು ಸಾಧಾರಣ ಹೆಂಗಸು ಎಂಬ ಅಭಿಪ್ರಾಯ ನೋಡಿದವರಿಗೆ ಬರುವಂತೆ ಅವರು ವ್ಯವಹರಿಸುತ್ತಿದ್ದರು. ಎಲ್ಲೋ ಕೆಲವು ಪ್ರಸಂಗಗಳಲ್ಲಿ ಮಾತ್ರ, ಕೆಲವು ಭಕ್ತರು ಅದೃಷ್ಟಶಾಲಿಯಾಗಿದ್ದರೆ ಆಗ ಸ್ವಲ್ಪ ಅದನ್ನು ಪ್ರಕಟಿಸುತ್ತಿದ್ದರು. ಅವರು ಕೋಣೆಗೆ ಹೋಗಿ, ಚಾಪೆಯ ಮೇಲೆ ಕುಳಿತರು. "ನೋಡು, ಗಂಗೆಯಲ್ಲಿ ನನ್ನ ಸ್ನಾನ ಆಗಿದೆ" ಎಂದರು. ಅವರ ಪಾದ ಕಮಲಗಳನ್ನು ನಾನು ಅರ್ಚಿಸಬೇಕೆಂಬ ನನ್ನ ಹೃದಯ ಬಯಕೆ ಅವರಿಗೆ ಗೊತ್ತಾಯಿತೆಂದು ಅರಿತೆ. ನಾನು ಮನಸ್ಸಿನೊಳಗೆ, "ನೀವು ನಿತ್ಯ ಶುದ್ಧರು. ಶುದ್ಧಿಗಾಗಿ ನೀವು ಗಂಗಾ ಸ್ನಾನಮಾಡಬೇಕಾಗಿಲ್ಲ" ಎಂದುಕೊಂಡೆ. ಹೂವು, ಚಂದನ ತೆಗೆದುಕೊಂಡು ಅವರ ಪಾದದಡಿ ಕುಳಿತಾಗ, "ತುಳಸಿ ಇದ್ದರೆ ಇಡಬೇಡ" ಎಂದರು. ನಾನು ಅವರ ಪಾದ ಕಮಲಗಳನ್ನು ಹೂವು ಗಂಧದಿಂದ ಆರಾಧಿಸಿದೆ. ನಂತರ ನಮಸ್ಕರಿಸಿದೆ. ಅವರು ಫಲಾಹಾರವನ್ನು ಆಮೇಲೆ ಸೇವಿಸಿದರು. ಅವರು ನನ್ನನ್ನು ಅವರ ಬಳಿ ಕುಳಿತುಕೊಳ್ಳುವಂತೆ ಹೇಳಿ, ಪ್ರೀತಿಯಿಂದ ತಾವು ತಿನ್ನುವ ಪ್ರತಿಯೊಂದು ಪದಾರ್ಥದ ಅರ್ಧ ಭಾಗವನ್ನು ಕೊಟ್ಟರು. ನಾನು ಸಂತೋಷದಿಂದ ಸೇವಿಸಿದೆ. ನಾನು ದೊನ್ನೆಯಲ್ಲಿ ಅದನ್ನು ತಿನ್ನುವಾಗ ಸಾಧು ದುರ್ಗಾಚರಣ ನಾಗನ ಜ್ಞಾಪಕ ಬಂದಿತು. ನಾನು ಶ್ರೀಮಾತೆಗೆ, "ಈ ದೊನ್ನೆ ನನಗೆ ಅನೇಕ ವೇಳೆ ದುರ್ಗಾಚರಣನಾಗನ ನೆನಪು ತರುವುದು" ಎಂದೆ.

ಶ್ರೀಮಾತೆ:– ಅವನದು ಎಂತಹ ಅದ್ಭುತ ಭಕ್ತಿ! ಈ ಒಣಗಿದ ದೊನ್ನೆಯನ್ನು ನೋಡು. ಯಾರು ಇದನ್ನು ತಿನ್ನಬಲ್ಲರು? ಆದರೆ ಅವನಲ್ಲಿ ಭಕ್ತಿ ಆಧಿಕ್ಯವಿತ್ತು. ಪ್ರಸಾದಕ್ಕೆ ಸೋಕಿದ ದೊನ್ನೆಯನ್ನು ತಿನ್ನುತ್ತಿದ್ದನು. ಎಂತಹ ಸಪ್ರೇಮ ಕಣ್ಣುಗಳು ಆತನದು! ಯಾವಾಗಲೂ ಕೆಂಪಗೆ ಇರುತ್ತಿತ್ತು. ಕಂಬನಿ ತುಂಬಿರುತ್ತಿತ್ತು. ತಪಸ್ಸಿನಿಂದ ದೇಹಕೃಶವಾಗಿತ್ತು. ಅವನು ನನ್ನನ್ನು ನೋಡಲು ಬರುತ್ತಿದ್ದನು. ಆತನಿಗೆ ಮೆಟ್ಟಲನ್ನು

ಹತ್ತಲೂ ಆಗುತ್ತಿರಲಿಲ್ಲ. ನನ್ನನ್ನು ನೋಡಿದೊಡನೆಯೆ ಉದ್ವೇಗಪರನಾಗುತ್ತಿದ್ದನು. ಎಲೆಯಂತೆ ನಡುಗುತ್ತಿದ್ದನು. ನಡೆಯುವಾಗ ತತ್ತರಿಸುತ್ತಿದ್ದನು. ಇಂತಹ ಭಕ್ತಿಯನ್ನು ನಾನೆಂದೂ ಯಾರಲ್ಲಿಯೂ ನೋಡಿಲ್ಲ.

ಭಕ್ತ:—ಅವರ ಜೀವನ ಚರಿತ್ರೆಯಲ್ಲಿ, ಅವರು ತಮ್ಮ ವೈದ್ಯವೃತ್ತಿಯನ್ನು ತೊರೆದು, ಹಗಲೂ ರಾತ್ರಿ ಪರಮಹಂಸರ ಧ್ಯಾನ ತತ್ಪರರಾಗಿದ್ದರು, ಎಂದು ಓದಿರುವೆನು. ಒಂದು ದಿನ ಕೋಪದಿಂದ ಇವರ ತಂದೆ, "ನೀನು ಸ್ವಲ್ಪವೂ ಸಂಸಾರದ ಕಡೆ ಗಮನವನ್ನೇ ಕೊಡುವುದಿಲ್ಲ, ನಿನ್ನ ಗತಿ ಏನಾಗುವುದು? ಮೈ ಹೊದೆಯಲು ಒಂದು ಚಿಂದಿ ಬಟ್ಟೆ ದೊರಕುವುದಿಲ್ಲ. ಹಸಿದಾಗ ಕಪ್ಪೆ ತಿನ್ನಬೇಕಾಗುವುದು" ಎಂದನು. ಅಂಗಳದಲ್ಲಿ ಒಂದು ಸತ್ತ ಕಪ್ಪೆ ಬಿದ್ದಿತ್ತು. ನಾಗಮಹಾಶಯರು ತಾವು ಧರಿಸಿದ್ದ ಬಟ್ಟೆ ಎಸೆದು ಹತ್ತಿರ ಬಿದ್ದಿದ್ದ ಕಪ್ಪೆ ತಿಂದರು. ತಂದೆಗೆ, "ನಿಮ್ಮ ಎರಡೂ ಭವಿಷ್ಯ ನೆರವೇರಿತು. ಇನ್ನು ಮೇಲಾದರೂ ನನ್ನ ವಿಷಯವನ್ನು ಮರೆಯಿರಿ. ದೇವರನ್ನು ಧ್ಯಾನಿಸಿ" ಎಂದರು.

ಶ್ರೀಮಾತೆ:—ತಂದೆಯ ಮೇಲೆ ಎಷ್ಟು ಅದ್ಭುತ ವಿಶ್ವಾಸ! ಮಡಿ ಮೈಲಿಗೆಯನ್ನು ಅವರೆದುರಿಗೆ ಗಮನಿಸಲಿಲ್ಲ. ಇದು ಅವನ ಮೇಲಿನಮಟ್ಟದ ಆಧ್ಯಾತ್ಮಿಕ ಅನುಭವವನ್ನು ತೋರುವುದು.

ಭಕ್ತ:—ಒಂದು ಪುಣ್ಯ ದಿನ ಕಲ್ಕತ್ತೆಯಿಂದ ತಮ್ಮ ಊರಿಗೆ ಬಂದರು. ತಂದೆ ಮಗನನ್ನು ದೂರುತ್ತ, "ನೀನು ಗಂಗಾ ನದಿಯ ಹತ್ತಿರ ಕಲ್ಕತ್ತೆಯಲ್ಲಿದ್ದೆ. ಇಂತಹ ಪುಣ್ಯ ದಿನ ಅಲ್ಲಿಂದ ಬರಬಹುದೆ? ಕಲ್ಕತ್ತೆಯಲ್ಲಿದ್ದು ಗಂಗಾ ಸ್ನಾನಮಾಡಬೇಕಾಗಿತ್ತು" ಎಂದರು. ಅಂದು ಆ ಪವಿತ್ರ ಘಳಿಗೆಯಲ್ಲಿ ಅಂಗಳದ ಒಂದು ಕಡೆಯಿಂದ ನೀರು ಉಕ್ಕಿ ಹರಿಯಿತು. ನಾಗಮಹಾಶಯ ಆನಂದಪರವಶನಾಗಿ, "ಬಾ, ತಾಯಿಗಂಗೆ," ಎಂದು ಆ ಜಲವನ್ನು ತಲೆಗೆ ಎರಚಿಕೊಂಡರು. ಸುತ್ತಮುತ್ತಲಿದ್ದವರು ಆ ನೀರಿನಲ್ಲಿ ಸ್ನಾನಮಾಡಿ ಗಂಗಾನದಿಯಲ್ಲಿ ಮಿಂದೆವೆಂದು ಭಾವಿಸಿದರು.

ಶ್ರೀಮಾತೆ:–ಹೌದು, ಭಕ್ತಿಯಿಂದ ಅಸಾಧ್ಯವೂ ಸಾಧ್ಯವಾಗುವುದು. ಒಮ್ಮೆ ನಾನು ಅವನಿಗೆ ಒಂದು ಪಂಚೆ ಕೊಟ್ಟೆ. ಅದನ್ನು ಯಾವಾಗಲೂ ತಲೆಗೆ ಸುತ್ತುತ್ತಿದ್ದನು. ಅವನ ಹೆಂಡತಿಯೂ ಒಳ್ಳೆ ಭಕ್ತಳು. ಕಳೆದ ಬೇಸಗೆ ಕಾಲದಲ್ಲಿ ನನ್ನನ್ನು ನೋಡಲು ಅವಳು ಬಂದಿದ್ದಳು. ಅವಳು ಇನ್ನೂ ಬದುಕಿರುವಳು.

ಇಷ್ಟು ಹೊತ್ತಿಗೆ ಕೆಲವು ಭಕ್ತರು ಬಂದುರು ಸಂಭಾಷಣೆ ನಿಂತಿತು. ಅವರು ಶ್ರೀಮಾತೆಗೆ ನಮಿಸಿದರು. "ಪಾನುಗಳನ್ನು ಮಾಡಿ ಇಡು" ಎಂದು ನನಗೆ ಹೇಳಿದರು. ನಾನು ಎರಡನ್ನು ಮಡಿಸಿ ಅವರಿಗೆ ಕೊಟ್ಟೆ. ಅವರು ಒಂದನ್ನು ತಾವು ತಿಂದು, ಮತ್ತೊಂದನ್ನು ಹಿಂತಿರುಗಿ ನನಗೆ ಕೊಟ್ಟರು. ನಾನು ಪುನಃ ವೀಳೆದೆಲೆ ಮಡಿಸಲು ಪ್ರಾರಂಭಿಸಿದೆ. ಸ್ವಲ್ಪ ಕಾಲದಮೇಲೆ ಶ್ರೀಮಾತೆ, ಇಬ್ಬರು ಭಕ್ತರೊಡನೆ ನಾವಿದ್ದ ಕೋಣೆಗೆ ಬಂದರು. ಅವರು ನನಗೆ ಸಹಾಯಮಾಡಿದರು. ಕೆಲಸ ಬೇಗ ಪೂರೈಸಿತು. ಅದರಲ್ಲಿ ಕೆಲವನ್ನು ನೈವೇದ್ಯಕ್ಕಾಗಿ ಪ್ರತ್ಯೇಕವಾಗಿಟ್ಟರು. ಅವರಿಗೆ ಸಂತೋಷವಾಗಿ, "ಓ, ಒಳ್ಳೆಯ ಹುಡುಗಿಯರು. ಇಷ್ಟು ಬೇಗ ಕೆಲಸ ಪೂರೈಸಿರುವರು!" ಎಂದರು.

ಶ್ರೀಮಾತೆ ಎರಡನೇ ಅಂತಸ್ತಿನಲ್ಲಿರುವ ಗುಲಾಬ್‌ಮಾ ಕೋಣೆಗೆ ಹೋದರು. ನಾನು ಸ್ವಲ್ಪ ಹೊತ್ತಾದಮೇಲೆ ಅಲ್ಲಿಗೆ ಹೋದೆ. ಆಗ ಅವರು ಹೊಸಲು ಮೇಲೆ ತಲೆ ಇಟ್ಟುಕೊಂಡು ನೆಲದಮೇಲೆ ಮಲಗಿದ್ದರು. ನಾನು ಹೊಸಲನ್ನು ದಾಟಿ ಕೋಣೆಯೊಳಕ್ಕೆ ಹೋಗಲಾಗಲಿಲ್ಲ. ಶ್ರೀಮಾತೆ ನನ್ನನ್ನು ನೋಡಿ, "ಪರವಾ ಇಲ್ಲ. ಒಳಕ್ಕೆ ಬಾ." ಎಂದರು. ಅವರು ಯಾವಾಗಲೂ ಅಷ್ಟು ಸದರವಾಗಿದ್ದರು. ಅವರು ಹೊಸಲಮೇಲಿಂದ ತಮ್ಮ ತಲೆಯನ್ನು ಎತ್ತಿದರು. ನಾನು ಕೋಣೆಗೆ ಹೋದೆ. ಅವರ ಬಳಿ ಕುಳಿತು ಬೀಸಣಿಗೆಯಿಂದ ಬೀಸಲು ಪ್ರಾರಂಭಿಸಿದೆ. ಗೌರಿಮಾಶಾಲೆಯ ವಿಚಾರವಾಗಿ ಅವರು ಅನೇಕ ವಿಷಯಗಳನ್ನು ಕೇಳಿದರು. ತಕ್ಕ ಉತ್ತರವನ್ನು ನಾನು ಹೇಳಿದೆ. ಅಷ್ಟು ಹೊತ್ತಿಗೆ ಇಬ್ಬರು ಗೃಹಿಣೀ ಭಕ್ತರು ಅಲ್ಲಿಗೆ ಬಂದರು. ಒಬ್ಬರು ಶ್ರೀಮಾತೆಗೆ ಜಡೆ ಹಾಕಲು ಯತ್ನಿಸಿದರು. ಶ್ರೀಮಾತೆಯು ತಲೆಯಿಂದ ಒಂದೆರಡು ಬಿಳಿ ಕೂದಲನ್ನು ಕಿತ್ತು, "ಇದನ್ನು ಜ್ಞಾಪಕಾರ್ಥವಾಗಿಟ್ಟುಕೊಳ್ಳುತ್ತೇನೆ" ಎಂದು ತಮ್ಮ ಸೀರೆಯ ಸೆರಗಿನಲ್ಲಿ ಕಟ್ಟಿಟ್ಟರು. ಸಂಕೋಚದಿಂದ

ಶ್ರೀಮಾತೆ, "ಏತಕ್ಕೆ ಹೀಗೆ ಮಾಡುವೆ? ನಾನು ಮುಂಚೆ ಎಷ್ಟೋ ಕೂದಲನ್ನು ಆಚೆಗೆ ಬಿಸಾಡಿರುವೆನು" ಎಂದರು. ಬಿಸಿಲು ಕಾಯಿಸಿ ಕೊಳ್ಳುವುದಕ್ಕೆ ಮಹಡಿಮೇಲೆ ಹೋದರು. ನಾವೂ ಹಿಂಬಾಲಿಸಿದೆವು. ಹಲವು ಬಟ್ಟೆಗಳನ್ನು ಅಲ್ಲಿ ಒಣಗಿಹಾಕಿದ್ದರು. ಅವನ್ನು ಕೋಣೆ ಯೊಳಕ್ಕೆ ತೆಗೆದಿಡುವಂತೆ ಹೇಳಿದರು.

ಪೂಜೆಯಾದಮೇಲೆ, ಭಕ್ತರ ಮಧ್ಯಾಹ್ನದ ಊಟಕ್ಕೆ ಅಣಿಮಾ ಡೆಂದು ನನಗೆ ಹೇಳಿದರು. ನಾವೆಲ್ಲ ಒಟ್ಟಿಗೆ ಊಟಕ್ಕೆ ಕುಳಿತೆವು. ಶ್ರೀಮಾತೆ ಒಂದೆರಡು ತುತ್ತನ್ನು ತಿಂದರು. ಆ ಪ್ರಸಾದವನ್ನು ಎಲ್ಲ ರಿಗೂ ಹಂಚಿದರು. ಮೇಲೆ ಹೇಳಿದ ಇಬ್ಬರು ಗೃಹಿಣೀ ಭಕ್ತರು ನಮ್ಮ ಜತೆಯಲ್ಲೇ ಇದ್ದರು. ಒಬ್ಬರಿಗೆ ವಯಸ್ಸಾಗಿತ್ತು. ಅವರಿಗೆ ಪತಿ ಇದ್ದರು. ಆಕೆ ಶ್ರೀರಾಮಕೃಷ್ಣರನ್ನು ನೋಡಿದ್ದರು. ಮತ್ತೊಬ್ಬ ಹೆಂಗಸು ಅವರ ಸೊಸೆ.

ವೃದ್ಧಸ್ತ್ರೀ:-"ಶ್ರೀರಾಮಕೃಷ್ಣರು ನಮಗೆ ಹಲವು ಸಲಹೆ ಕೊಟ್ಟರು. ಆದರೆ ಅದರಲ್ಲಿ ಕೆಲವನ್ನು ಕೂಡ ನಾವು ಅನುಷ್ಠಾನಕ್ಕೆ ತರ ಲಿಲ್ಲ. ಅವರ ಮಾತಿನಂತೆ ಕೇಳಿದ್ದರೆ ನಾವು ಪ್ರಪಂಚದಲ್ಲಿ ಇಷ್ಟು ಸಂಕಟಪಡಬೇಕಾಗಿರಲಿಲ್ಲ. ಪ್ರಪಂಚದ ಮೇಲೆ ಆಸೆ ನಮಗೆ ಇದೆ. ಯಾವಾಗಲೂ ಏನನ್ನಾದರೂ ಮಾಡುತ್ತಿರುವೆವು."

ಶ್ರೀಮಾತೆ:-ಕೆಲಸಮಾಡಬೇಕು. ಕರ್ಮದಿಂದ ಮಾತ್ರ ಕರ್ಮ ಬಂಧನ ಕಿತ್ತೊಗೆಯಬಹುದು; ಅಕರ್ಮದಿಂದಲ್ಲ. ಸಂಪೂರ್ಣ ಅನಾಸಕ್ತಿ ನಂತರ ಬರುವುದು. ಒಂದು ಕ್ಷಣವೂ ಕೆಲಸವಿಲ್ಲದೆ ಇರಬಾರದು" ಎಂದರು.

ಊಟವಾದಮೇಲೆ ಶ್ರೀಮಾತೆಯವರು ಸ್ವಲ್ಪ ವಿಶ್ರಾಂತಿಪಡೆಯು ತ್ತಿದ್ದರು. ಹಾಸಿಗೆಯಮೇಲೆ ಮಲಗಿದ್ದರು. ಭಕ್ತರೆಲ್ಲ ಅವರಿಗೆ ಏನಾ ದರೂ ಸೇವೆಮಾಡಬೇಕೆಂದು ಕಾತರಿಸುತ್ತಿದ್ದರು. ಆದರೆ ಅವರೆಲ್ಲರಿಗೂ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಳ್ಳುವಂತೆ ಹೇಳಿದರು. ಅವರೆಲ್ಲ ಬೇರೆ ಬೇರೆ ಕಡೆ ಹೊರಟುಹೋದರು. ಅವರಿಗೆಲ್ಲ ಮಾಡುವುದಕ್ಕೆ ಏನಾದರೂ ಕೆಲಸವಿತ್ತು. ಶ್ರೀರಾಮಕೃಷ್ಣರ ಸಮಕಾಲಿಕರಾದ ಒಬ್ಬ ವಿಧವೆಯೊಂದಿಗೆ ನಾನು ಅಲ್ಲಿಯೇ ಇದ್ದೆ. ನಾನು ಶ್ರೀಮಾತೆಯ ದೇಹ ವನ್ನು ಒತ್ತುತ್ತಿದ್ದೆ. ವಿಧವೆ ಹತ್ತಿರ ಕುಳಿತುಕೊಂಡು, ತಮ್ಮ ಸಂಸಾರದ

ಶ್ರೀಮಾತೆ:–ಹೌದು, ಭಕ್ತಿಯಿಂದ ಅಸಾಧ್ಯವೂ ಸಾಧ್ಯವಾಗುವುದು. ಒಮ್ಮೆ ನಾನು ಅವನಿಗೆ ಒಂದು ಪಂಚೆ ಕೊಟ್ಟೆ. ಅದನ್ನು ಯಾವಾಗಲೂ ತಲೆಗೆ ಸುತ್ತುತ್ತಿದ್ದನು. ಅವನ ಹೆಂಡತಿಯೂ ಒಳ್ಳೆ ಭಕ್ತಳು. ಕಳೆದ ಬೇಸಗೆ ಕಾಲದಲ್ಲಿ ನನ್ನನ್ನು ನೋಡಲು ಅವಳು ಬಂದಿದ್ದಳು. ಅವಳು ಇನ್ನೂ ಬದುಕಿರುವಳು.

ಇಷ್ಟು ಹೊತ್ತಿಗೆ ಕೆಲವು ಭಕ್ತರು ಬಂದುರು ಸಂಭಾಷಣೆ ನಿಂತಿತು. ಅವರು ಶ್ರೀಮಾತೆಗೆ ನಮಿಸಿದರು. "ಪಾನುಗಳನ್ನು ಮಾಡಿ ಇಡು" ಎಂದು ನನಗೆ ಹೇಳಿದರು. ನಾನು ಎರಡನ್ನು ಮಡಿಸಿ ಅವರಿಗೆ ಕೊಟ್ಟೆ. ಅವರು ಒಂದನ್ನು ತಾವು ತಿಂದು, ಮತ್ತೊಂದನ್ನು ಹಿಂತಿರುಗಿ ನನಗೆ ಕೊಟ್ಟರು. ನಾನು ಪುನಃ ವೀಳೆದೆಲೆ ಮಡಿಸಲು ಪ್ರಾರಂಭಿಸಿದೆ. ಸ್ವಲ್ಪ ಕಾಲದಮೇಲೆ ಶ್ರೀಮಾತೆ, ಇಬ್ಬರು ಭಕ್ತರೊಡನೆ ನಾವಿದ್ದ ಕೋಣೆಗೆ ಬಂದರು. ಅವರು ನನಗೆ ಸಹಾಯಮಾಡಿದರು. ಕೆಲಸ ಬೇಗ ಪೂರೈಸಿತು. ಅದರಲ್ಲಿ ಕೆಲವನ್ನು ನೈವೇದ್ಯಕ್ಕಾಗಿ ಪ್ರತ್ಯೇಕವಾಗಿಟ್ಟರು. ಅವರಿಗೆ ಸಂತೋಷವಾಗಿ, "ಓ, ಒಳ್ಳೆಯ ಹುಡುಗಿಯರು. ಇಷ್ಟು ಬೇಗ ಕೆಲಸ ಪೂರೈಸಿರುವರು!" ಎಂದರು.

ಶ್ರೀಮಾತೆ ಎರಡನೇ ಅಂತಸ್ತಿನಲ್ಲಿರುವ ಗುಲಾಬ್‌ಮಾ ಕೋಣೆಗೆ ಹೋದರು. ನಾನು ಸ್ವಲ್ಪ ಹೊತ್ತಾದಮೇಲೆ ಅಲ್ಲಿಗೆ ಹೋದೆ. ಆಗ ಅವರು ಹೊಸಲು ಮೇಲೆ ತಲೆ ಇಟ್ಟುಕೊಂಡು ನೆಲದಮೇಲೆ ಮಲಗಿದ್ದರು. ನಾನು ಹೊಸಲನ್ನು ದಾಟಿ ಕೋಣೆಯೊಳಕ್ಕೆ ಹೋಗಲಾಗಲಿಲ್ಲ. ಶ್ರೀಮಾತೆ ನನ್ನನ್ನು ನೋಡಿ, "ಪರವಾ ಇಲ್ಲ. ಒಳಕ್ಕೆ ಬಾ." ಎಂದರು. ಅವರು ಯಾವಾಗಲೂ ಅಷ್ಟು ಸದರವಾಗಿದ್ದರು. ಅವರು ಹೊಸಲಮೇಲಿಂದ ತಮ್ಮ ತಲೆಯನ್ನು ಎತ್ತಿದರು. ನಾನು ಕೋಣೆಗೆ ಹೋದೆ. ಅವರ ಬಳಿ ಕುಳಿತು ಬೀಸಣಿಗೆಯಿಂದ ಬೀಸಲು ಪ್ರಾರಂಭಿಸಿದೆ. ಗೌರಿಮಾಶಾಲೆಯ ವಿಚಾರವಾಗಿ ಅವರು ಅನೇಕ ವಿಷಯಗಳನ್ನು ಕೇಳಿದರು. ತಕ್ಕ ಉತ್ತರವನ್ನು ನಾನು ಹೇಳಿದೆ. ಅಷ್ಟು ಹೊತ್ತಿಗೆ ಇಬ್ಬರು ಗೃಹಿಣೀ ಭಕ್ತರು ಅಲ್ಲಿಗೆ ಬಂದರು. ಒಬ್ಬರು ಶ್ರೀಮಾತೆಗೆ ಜಡೆ ಹಾಕಲು ಯತ್ನಿಸಿದರು. ಶ್ರೀಮಾತೆಯ ತಲೆಯಿಂದ ಒಂದೆರಡು ಬಿಳಿ ಕೂದಲನ್ನು ಕಿತ್ತು, "ಇದನ್ನು ಜ್ಞಾಪಕಾರ್ಥವಾಗಿಟ್ಟುಕೊಳ್ಳುತ್ತೇನೆ" ಎಂದು ತಮ್ಮ ಸೀರೆಯ ಸೆರಗಿನಲ್ಲಿ ಕಟ್ಟಿಟ್ಟರು. ಸಂಕೋಚದಿಂದ

ಶ್ರೀಮಾತೆ, "ಏತಕ್ಕೆ ಹೀಗೆ ಮಾಡುವೆ? ನಾನು ಮುಂಚೆ ಎಷ್ಟೋ ಕೂದಲನ್ನು ಆಚೆಗೆ ಬಿಸಾಡಿರುವೆನು" ಎಂದರು. ಬಿಸಿಲು ಕಾಯಿಸಿ ಕೊಳ್ಳುವುದಕ್ಕೆ ಮಹಡಿಮೇಲೆ ಹೋದರು. ನಾವೂ ಹಿಂಬಾಲಿಸಿದೆವು. ಹಲವು ಬಟ್ಟೆಗಳನ್ನು ಅಲ್ಲಿ ಒಣಗಿಹಾಕಿದ್ದರು. ಅವನ್ನು ಕೋಣೆ ಯೊಳಕ್ಕೆ ತೆಗೆದಿಡುವಂತೆ ಹೇಳಿದರು.

ಪೂಜೆಯಾದಮೇಲೆ, ಭಕ್ತರ ಮಧ್ಯಾಹ್ನದ ಊಟಕ್ಕೆ ಅಣಿಮಾ ಡೆಂದು ನನಗೆ ಹೇಳಿದರು. ನಾವೆಲ್ಲ ಒಟ್ಟಿಗೆ ಊಟಕ್ಕೆ ಕುಳಿತೆವು. ಶ್ರೀಮಾತೆ ಒಂದೆರಡು ತುತ್ತನ್ನು ತಿಂದರು. ಆ ಪ್ರಸಾದವನ್ನು ಎಲ್ಲ ರಿಗೂ ಹಂಚಿದರು. ಮೇಲೆ ಹೇಳಿದ ಇಬ್ಬರು ಗೃಹಿಣೀ ಭಕ್ತರು ನಮ್ಮ ಜತೆಯಲ್ಲೇ ಇದ್ದರು. ಒಬ್ಬರಿಗೆ ವಯಸ್ಸಾಗಿತ್ತು. ಅವರಿಗೆ ಪತಿ ಇದ್ದರು. ಆಕೆ ಶ್ರೀರಾಮಕೃಷ್ಣರನ್ನು ನೋಡಿದ್ದರು. ಮತ್ತೊಬ್ಬ ಹೆಂಗಸು ಅವರ ಸೊಸೆ.

ವೃದ್ಧಸ್ತ್ರೀ:–"ಶ್ರೀರಾಮಕೃಷ್ಣರು ನಮಗೆ ಹಲವು ಸಲಹೆ ಕೊಟ್ಟರು. ಆದರೆ ಅದರಲ್ಲಿ ಕೆಲವನ್ನು ಕೂಡ ನಾವು ಅನುಷ್ಠಾನಕ್ಕೆ ತರ ಲಿಲ್ಲ. ಅವರ ಮಾತಿನಂತೆ ಕೇಳಿದ್ದರೆ ನಾವು ಪ್ರಪಂಚದಲ್ಲಿ ಇಷ್ಟು ಸಂಕಟಪಡಬೇಕಾಗಿರಲಿಲ್ಲ. ಪ್ರಪಂಚದ ಮೇಲೆ ಆಸೆ ನಮಗೆ ಇದೆ. ಯಾವಾಗಲೂ ಏನನ್ನಾದರೂ ಮಾಡುತ್ತಿರುವೆವು."

ಶ್ರೀಮಾತೆ:–ಕೆಲಸಮಾಡಬೇಕು. ಕರ್ಮದಿಂದ ಮಾತ್ರ ಕರ್ಮ ಬಂಧನ ಕಿತ್ತೊಗೆಯಬಹುದು; ಅಕರ್ಮದಿಂದಲ್ಲ. ಸಂಪೂರ್ಣ ಅನಾಸಕ್ತಿ ನಂತರ ಬರುವುದು. ಒಂದು ಕ್ಷಣವೂ ಕೆಲಸವಿಲ್ಲದೆ ಇರಬಾರದು" ಎಂದರು.

ಊಟವಾದಮೇಲೆ ಶ್ರೀಮಾತೆಯವರು ಸ್ವಲ್ಪ ವಿಶ್ರಾಂತಿಪಡೆಯು ತ್ತಿದ್ದರು. ಹಾಸಿಗೆಯಮೇಲೆ ಮಲಗಿದ್ದರು. ಭಕ್ತರೆಲ್ಲ ಅವರಿಗೆ ಏನಾ ದರೂ ಸೇವೆಮಾಡಬೇಕೆಂದು ಕಾತರಿಸುತ್ತಿದ್ದರು. ಆದರೆ ಅವರೆಲ್ಲರಿಗೂ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಳ್ಳುವಂತೆ ಹೇಳಿದರು. ಅವರೆಲ್ಲ ಬೇರೆ ಬೇರೆ ಕಡೆ ಹೊರಟುಹೋದರು. ಅವರಿಗೆಲ್ಲ ಮಾಡುವುದಕ್ಕೆ ಏನಾದರೂ ಕೆಲಸವಿತ್ತು. ಶ್ರೀರಾಮಕೃಷ್ಣರ ಸಮಕಾಲಿಕರಾದ ಒಬ್ಬ ವಿಧವೆಯೊಂದಿಗೆ ನಾನು ಅಲ್ಲಿಯೇ ಇದ್ದೆ. ನಾನು ಶ್ರೀಮಾತೆಯ ದೇಹ ವನ್ನು ಒತ್ತುತ್ತಿದ್ದೆ. ವಿಧವೆ ಹತ್ತಿರ ಕುಳಿತುಕೊಂಡು, ತಮ್ಮ ಸಂಸಾರದ

ಹಲವು ಘಟನೆಗಳನ್ನು ಹೇಳತೊಡಗಿದರು. "ತಾಯಿ, ನೀವು ಯಾವಾಗಲೂ ನನ್ನ ತಪ್ಪನ್ನು ಮನ್ನಿಸುತ್ತೀರಿ. ಆದರೆ ಮನೆಯವರು ಯಾವಾಗಲೂ ದೂರುವರು" ಎಂದರು. "ನೀವು ಶ್ರೀರಾಮಕೃಷ್ಣರನ್ನು ನೋಡಿದ್ದೀರಾ?" ಎಂದೆ. ಅದಕ್ಕೆ ಅವರು, "ಹೌದು ಮಗು! ನಾನು ಅವರನ್ನು ನೋಡಿದ್ದೆ. ಅವರು ಹಲವು ವೇಳೆ ನಮ್ಮ ಮನೆಗೆ ಬಂದಿದ್ದರು. ಆಗ ಶ್ರೀಮಾತೆ ಬಹಳ ಸಣ್ಣವರಾಗಿದ್ದರು" ಎಂದರು.

ಭಕ್ತ:-ಶ್ರೀರಾಮಕೃಷ್ಣರ ವಿಷಯವಾಗಿ ಏನನ್ನಾದರೂ ಹೇಳಿ.

ವಿಧವೆ:- ಇಲ್ಲಿ ನಾನು ಹೇಳುವುದಿಲ್ಲ. ಶ್ರೀಮಾತೆಯನ್ನು ಕೇಳಿ, ಅವರೇ ಅವರ ವಿಷಯ ಹೇಳಲಿ.

ಶ್ರೀಮಾತೆ ಕಣ್ಣು ಮುಚ್ಚಿಕೊಂಡು ವಿಶ್ರಾಂತಿಪಡೆಯುತ್ತಿದ್ದರು. ಅದಕ್ಕೋಸ್ಕರ ನಾನು ಅವರನ್ನು ಕೇಳಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಶ್ರೀಮಾತೆ, "ಯಾರು ಹೃತ್ಪೂರ್ವಕ ದೇವರನ್ನು ಪ್ರಾರ್ಥಿಸುವರೋ, ಅವರು ದೇವರನ್ನು ಕಾಣುವರು. ಸ್ವಲ್ಪ ದಿನದ ಹಿಂದೆ ತೇಜಚಂದ್ರ ನೆಂಬ ಭಕ್ತ ಕಾಲವಾದ. ಎಂತಹ ಶ್ರದ್ಧಾವಂತ ಆತ! ಪರಮಹಂಸರು ಆತನ ಮನೆಗೆ ಹೋಗುತ್ತಿದ್ದರು. ಯಾರೋ ತೇಜಚಂದ್ರನ ಹತ್ತಿರ ಇನ್ನೂರು ರೂಪಾಯಿ ಇಟ್ಟಿದ್ದರು. ಒಂದು ದಿನ ಆತ ಟ್ರಾಂನಲ್ಲಿ ಹೋಗುತ್ತಿದ್ದಾಗ ಯಾರೋ ಅದನ್ನು ಅಪಹರಿಸಿದರು. ಸ್ವಲ್ಪ ಹೊತ್ತಾದಮೇಲೆ ಅದು ಇವನಿಗೆ ಗೊತ್ತಾಯಿತು. ತುಂಬಾ ವ್ಯಥೆಪಟ್ಟನು. ಗಂಗಾನದಿ ತೀರಕ್ಕೆ ಬಂದು ಕಂಬನಿದುಂಬಿ, ಪರಮಹಂಸರಿಗೆ, 'ಹೇ ಭಗವಾನ್! ನೀನು ಏನುಮಾಡಿದೆ!' ಎಂದು ಗೋಳಿಟ್ಟನು. ಆ ದುಡ್ಡು ತಾನೇ ಕೊಡುವಷ್ಟು ಶ್ರೀಮಂತನಾಗಿರಲಿಲ್ಲ. ಅಳುತ್ತಿದ್ದಾಗ ಪರಮಹಂಸರು ಗೋಚರಿಸಿ, 'ಏತಕ್ಕೆ ಇಷ್ಟೊಂದು ಅಳುವೆ? ಗಂಗಾನದೀ ತೀರದ ಇಟ್ಟಿಗೆ ಕೆಳಗೆ ಹಣವಿದೆ' ಎಂದರು. ಇಟ್ಟಿಗೆಯನ್ನು ತೆಗೆದಮೇಲೆ ಅಲ್ಲಿ ನೋಟಿನ ಒಂದು ಕಂತೆಯನ್ನು ನೋಡಿದನು. ಈ ಘಟನೆಯನ್ನು ಸ್ವಾಮಿ ಶಾರದಾನಂದರಿಗೆ ಹೇಳಿದನು. ಅವರು, "ನೀನು ಅದೃಷ್ಟವಂತ. ಈಗಲೂ ಶ್ರೀರಾಮಕೃಷ್ಣರ ದರ್ಶನಪಡೆದೆ. ಆದರೆ ನಮಗೆ ಅದು ದೊರಕುವುದೇ ಇಲ್ಲ" ಎಂದರು. ಶರತ್ ಮತ್ತಿತರರು ಶ್ರೀರಾಮಕೃಷ್ಣರನ್ನು ಏತಕ್ಕೆ ನೋಡಬೇಕು? ಬೇಕಾದಷ್ಟು ಅವರನ್ನು ನೋಡಿದ್ದರು. ಕೃತಾರ್ಥರಾಗಿರುವರು. ಯಾರು ತಮ್ಮ ಕಣ್ಣಿನಲ್ಲಿ ಅವರನ್ನು ನೋಡಿರ

ಜಿಲ್ಲವೋ, ಅವರು ಈಗ ನೋಡಲು ಕಾತುರರಾಗಿರುವರು. ಶ್ರೀರಾಮ ಕೃಷ್ಣರು ದಕ್ಷಿಣೇಶ್ವರದಲ್ಲಿದ್ದ ಸಮಯದಲ್ಲಿ ರಾಖಾಲ್ ಮುಂತಾದ ವರು ಇನ್ನೂ ಹುಡುಗರಾಗಿದ್ದರು. ಒಂದು ದಿನ ರಾಖಾಲ್, (ಸ್ವಾಮೀ ಬ್ರಹ್ಮಾನಂದರು) ಶ್ರೀರಾಮಕೃಷ್ಣರಿಗೆ, ತಮಗೆ ತುಂಬಾ ಹಸಿ ವೆಂದು ಹೇಳಿದರು. ಶ್ರೀರಾಮಕೃಷ್ಣರು ಗಂಗಾನದಿಯ ತೀರಕ್ಕೆ ಬಂದು, 'ಗೌರಿದಾಸಿ, ಇಲ್ಲಿ ಬಾ. ನನ್ನ ರಾಖಾಲನಿಗೆ ತುಂಬಾ ಹಸಿವು' ಎಂದರು. ಆಗ ದಕ್ಷಿಣೇಶ್ವರದ ಸಮೀಪದಲ್ಲಿ ಅಂಗಡಿಗಳು ಇರಲಿಲ್ಲ. ಸ್ವಲ್ಪ ಹೊತ್ತಾದಮೇಲೆ ಗಂಗಾನದಿಯ ಮೇಲೆ ಒಂದು ದೋಣಿ ಬರು ತ್ತಿತ್ತು. ದೇವಸ್ಥಾನದ ಹತ್ತಿರ ನಿಂತಿತು. ಬಲರಾಮಬಾಬು, ಗೌರಿ ದಾಸಿ, ಮುಂತಾದವರು ಬಂದರು. ಜತೆಗೆ ಸ್ವಲ್ಪ ತಿಂಡಿಯನ್ನು ತಂದಿ ದ್ದರು. ಪರಮಹಂಸರಿಗೆ ಅತ್ಯಾನಂದವಾಗಿ ರಾಖಾಲನನ್ನು ಕರೆದರು. 'ಬಾ ಇಲ್ಲಿ, ಹೊಟ್ಟೆ ಹಸಿವು ಎನ್ನುತ್ತಿದ್ದೆ. ತಿಂಡಿ ಇದೆ.' ರಾಖಾಲನಿಗೆ ಸ್ವಲ್ಪ ಕೋಪ ಬಂದು, 'ನನಗೆ ಹಸಿವಾಗಿದೆ ಎಂದು ಎಲ್ಲರಿಗೂ ಏತಕ್ಕೆ ಡಂಗುರ ಹೊಡೆಯುತ್ತಿರುವಿರಿ?' ಎಂದನು. ಶ್ರೀರಾಮಕೃಷ್ಣರು, 'ಅದರಲ್ಲಿ ತಪ್ಪೇನು? ನಿನಗೆ ಹಸಿವಾಗಿತ್ತು. ತಿನ್ನಲು ಏನಾದರೂ ಬೇಕಾಗಿತ್ತು. ಅದರ ವಿಷಯ ಹೇಳಿದರೆ ತಪ್ಪೇನು?' ಎಂದರು. ಶ್ರೀರಾಮಕೃಷ್ಣರದು ಮಗುವಿನಂತಹ ಸರಳ ಸ್ವಭಾವ."

ಶ್ರೀಮಾತೆಯ ಸೋದರಳಿಯ, ಭೂದೇವನೆಂಬುವನು ಶಾಲೆಯಿಂದ ಬಂದನು. ಅವನಿಗೆ ಜ್ವರ ಬಂದಿತ್ತು. ಶ್ರೀಮಾತೆ ಅವನಿಗೆ ಒಂದು ಹಾಸಿಗೆಯನ್ನು ಅಣಿಮಾಡುವಂತೆ ಹೇಳಿದರು. ಅವರು ಬಲರಾಮಬಾಬು ಮನೆಗೆ ಹೋಗಲು ಸಿದ್ಧರಾಗುತ್ತಿದ್ದರು. ಅವನ ಮಗನಿಗೆ ಆಮಶಂಕೆ ಯಾಗಿತ್ತು. ಅವನನ್ನು ನೋಡಬೇಕೆಂದು ಬಯಸಿದರು. ಸಂಜೆ ಪೂಜೆ ಯಾದಮೇಲೆ ನನಗೆ ಪ್ರಸಾದ ಕೊಟ್ಟರು. ನಾನು ನಂತರ ತಿನ್ನುತ್ತೇನೆ ಎಂದೆ. ಅವರು ಒಪ್ಪಿದರು. ನಳಿನಿಗೆ (ಸೋದರ ಸೊಸೆ), ನನಗೆ ಆ ಮೇಲೆ ಪ್ರಸಾದವನ್ನು ಕೊಡುವಂತೆ ಹೇಳಿದರು. ಶ್ರೀಮಾತೆ ಹೋಗಲು ಒಂದು ಗಾಡಿ ತಂದರು. ತಾವು ಬರುವವರೆಗೂ ಇರು ಎಂದರು. ಅವರ ಜೊತೆಗೆ ಗುಲಾಬ್‌ಮಾ ಹೋದರು. ಒಂದು ಗಂಟೆಯಾದ ಮೇಲೆ ಬಂದರು. ಶ್ರೀಮಾತೆಗೆ ನನ್ನನ್ನು ನೋಡಿ ಸಂತೋಷವಾಯಿತು. "ನಾನು ನಿನಗಾಗಿ ಬೇಗ ಬಂದೆ. ಪ್ರಸಾದವನ್ನು ತೆಗೆದುಕೊಂಡೆಯಾ?"

ಎಂದರು. ಇಲ್ಲವೆಂದಾಗ, "ನಳಿನಿ, ನಾನು ಹೇಳಿದಂತೆ ಏತಕ್ಕೆ ನೀನು ಅವರಿಗೆ ಪ್ರಸಾದ ಕೊಡಲಿಲ್ಲ?" ಎಂದು ಕೇಳಿದರು.

ನಳಿನಿ :— ನನಗೆ ಮರೆತುಹೋಯಿತು. ಈಗಲೇ ತರುತ್ತೇನೆ.

ಶ್ರೀಮಾತೆ :— ನೀನು ತೊಂದರೆ ತೆಗೆದುಕೊಳ್ಳಬೇಕಾಗಿಲ್ಲ. ನಾನೇ ಅವರಿಗೆ ಪ್ರಸಾದವನ್ನು ಕೊಡುತ್ತೇನೆ. (ನನಗೆ) "ನೀನೇತಕ್ಕೆ ಕೇಳಿ ತೆಗೆದುಕೊಳ್ಳಲಿಲ್ಲ? ಇದು ನಿನ್ನ ಮನೆ."

ಭಕ್ತೆ :— ನನಗೆ ಹಸಿವಿಲ್ಲ. ಹಸಿವಾಗಿದ್ದರೆ ನಾನೇ ಕೇಳುತ್ತಿದ್ದೆ.

ಶ್ರೀಮಾತೆ ಸ್ವಲ್ಪ ಹೊತ್ತಾದ ಮೇಲೆ ದೇವರಿಗೆ ನೈವೇದ್ಯ ಮಾಡಿದ ಮಿಠಾಯಿಯನ್ನು ಕೊಟ್ಟರು. ಸಂತೋಷದಿಂದ ನಾನು ತೆಗೆದುಕೊಂಡೆ. ಅವರಿಗೆ ನಮಿಸಿ, ಹೋಗಲು ಅಪ್ಪಣೆ ಬೇಡಿದೆ. "ಮುದ್ದು ಮಗು, ಮತ್ತೊಮ್ಮೆ ಬಾ. ದುರ್ಗ! ದುರ್ಗ! ಕೆಳಗಿನವರೆಗೆ ನಾನು ನಿನ್ನೊಡನೆ ಬರಲೆ? ನೀನೊಬ್ಬಳೇ ಹೋಗಬಲ್ಲೆಯಾ? ಕತ್ತಲೆ" ಎಂದರು. "ತಾಯಿ, ನಾನೊಬ್ಬಳೇ ಹೋಗಬಲ್ಲೆ" ಎಂದೆ. ಆದರೂ ದೇವರ ಹೆಸರನ್ನು ಉಚ್ಚರಿಸುತ್ತಾ ಮೆಟ್ಟಲಿನವರೆಗೆ ಬಂದರು. "ನೀವು ಇನ್ನು ತೊಂದರೆ ತೆಗೆದುಕೊಳ್ಳಬೇಡಿ. ನನಗೆ ದಾರಿ ಚೆನ್ನಾಗಿ ಕಾಣುವುದು" ಎಂದೆ.

ಇಂದು ಅಕ್ಷಯ ತೃತೀಯ. ಹಿಂದೂಗಳ ಪವಿತ್ರ ದಿನ. ನಾನು ಶ್ರೀಮಾತೆಯ ದರ್ಶನಕ್ಕೆ ಬಂದೆ. ಹಿಂದೆ ಹೇಳಿದ್ದ ಮುದುಕಿ ತನ್ನ ಸೊಸೆಯೊಂದಿಗೆ ಬಂದಿದ್ದಳು. ಶ್ರೀಮಾತೆಗೆ ಪದ್ಧತಿಯಂತೆ ಪವಿತ್ರದಾರ ಮತ್ತು ಫಲವನ್ನು ಕೊಡುವುದರಲ್ಲಿದ್ದರು. ಶ್ರೀಮಾತೆ ಅದನ್ನು ತಡೆದು "ಇವನ್ನು ನನಗೇತಕ್ಕೆ ಕೊಡುವೆ. ಭೂದೇವನಿಗೆ ಕೊಡು" ಎಂದರು. ಮಾತನಾಡುವಾಗ ನಮ್ಮನ್ನು ನೋಡಿ, "ಇಂತಹ ಪವಿತ್ರ ದಿನದಲ್ಲಿ ಈ ಜನ್ಮದಲ್ಲೇ ನಿಮಗೆ ಮೋಕ್ಷ ಸಿಗಲಿ ಎಂದು ಆಶೀರ್ವದಿಸುತ್ತೇನೆ. ಜನನ ಮರಣಗಳು ದುಃಖದಿಂದ ತುಂಬಿ ತುಳುಕಾಡುತ್ತಿರುತ್ತವೆ. ಇನ್ನು ನಿಮಗೆ ಆ ವ್ಯಥೆ ಇಲ್ಲದಿರಲಿ!" ಎಂದರು.

ಇಂದು ರಥ ಜಾತ್ರೆ ದಿನ. ಬೆಳಗ್ಗೆ ಏಳು ಗಂಟೆ ಹೊತ್ತಿಗೆ ಗೌರಿಮಾ ಆಶ್ರಮಕ್ಕೆ ಹೊರಟೆ. ಅವರು ನನ್ನನ್ನು ಫಲಹಾರಕ್ಕೆ ಅಲ್ಲಿಗೆ ಕರೆದಿದ್ದರು. ಶಾಲೆಯಿಂದ ಸಾಧ್ಯವಾದಷ್ಟು ಬೇಗ ಶ್ರೀಮಾತೆಯ ದರ್ಶನಕ್ಕೆ ಹೋಗಬೇಕೆಂದು ಬಯಸಿದೆ. ಎರಡು ಗಂಟೆ ಹೊತ್ತಿಗೆ ಊಟ ಮುಗಿಯಿತು. ನಾನು ಮತ್ತು ಗೌರಿಮಾ, ಶ್ರೀಮಾತೆಯ ಸಮೀಪಕ್ಕೆ ಬಂದಾಗ ನಾಲ್ಕು

ಗಂಟೆ. ಶ್ರೀಮಾತೆ ದೇವರ ಮನೆಯಲ್ಲಿ ಪೂಜೆಯಲ್ಲಿ ನಿರತರಾಗಿದ್ದರು. ಅವರಿಗೆ ನಮಿಸಿದೆವು. ಗೌರಿಮಾ, ಶ್ರೀಮಾತೆಯನ್ನು ಆಚೆಕಡೆ ಕರೆದು ಕೊಂಡು ಹೋಗಿ ಏನನ್ನೋ ಕೇಳಿದರು. ಅನಂತರ ಅವರ ಬಳಿಗೆ ಬರು ವಂತೆ ನನಗೆ ಹೇಳಿದರು. ನಾನು ಶ್ರೀಮಾತೆಗೆ ರೇಷ್ಮೆ ವಸ್ತ್ರವನ್ನು ತಂದಿದ್ದೆ. ಅದನ್ನು ಅವರ ಪಾದದ ಬಳಿ ಇಟ್ಟು "ತಾಯಿ, ದಯವಿಟ್ಟು ನೀವು ಇದನ್ನು ಉಪಯೋಗಿಸುವಿರಾ?" ಎಂದೆ. ಅವರು ನಗುತ್ತಾ, "ಆಗಲಿ ಮಗು!" ಎಂದರು. ಅಷ್ಟು ಹೊತ್ತಿಗೆ ಕೆಲವು ಪುರುಷರು ನಮಸ್ಕರಿಸಲು ಬಂದರು. ನಾವು ಅಂಗಳಕ್ಕೆ ಹೋದೆವು. ಒಬ್ಬ ಭಕ್ತ ದಾಸವಾಳ ಗುಲಾಬಿ, ಒಂದು ಮಲ್ಲಿಗೆ ಹೂಮಾಲೆ, ಹಣ್ಣು, ಮಿಠಾಯಿ —ತಂದಿದ್ದ. ಇವನ್ನು ಅವರ ಪಾದ ತಳದಲ್ಲಿಟ್ಟು ಪೂಜಿಸಲು ಪ್ರಾರಂಭಿ ಸಿದನು. ಎಂತಹ ಪರವಶವಾಗುವ ದೃಶ್ಯ! ಶ್ರೀಮಾತೆ ಮಂದಹಾಸ ದಿಂದ ಕುಳಿತಿದ್ದರು. ಮಾಲೆ ಅವರ ಕೊರಳಲ್ಲಿ ರಾಜಿಸುತ್ತಿತ್ತು. ಪದತಳ ದಲ್ಲಿ ಪುಷ್ಪಗಳಿದ್ದುವು. ಪೂಜೆ ನಂತರ ಭಕ್ತ ಹಣ್ಣು ಮಿಠಾಯಿಯ ಸ್ವಲ್ಪ ಭಾಗವನ್ನು ತೆಗೆದುಕೊಂಡು ಅದನ್ನು ದಯವಿಟ್ಟು ಸ್ವೀಕರಿಸ ಬೇಕೆಂದು ಶ್ರೀಮಾತೆಯನ್ನು ಕೇಳಿಕೊಂಡನು. ಗೌರಿಮಾ ನಗುತ್ತಾ ಶ್ರೀಮಾತೆಗೆ, "ನೀವು ಒಬ್ಬ ಉಗ್ರ ಭಕ್ತನ ಕೈಯಲ್ಲಿರುವಿರಿ. ಎಲ್ಲವನ್ನು ಸ್ವಲ್ಪ ರುಚಿ ನೋಡಲೇಬೇಕು" ಎಂದರು. ಶ್ರೀಮಾತೆ. ನಗುತ್ತ, "ಅಷ್ಟು ಬೇಡ. ನಾನು ಅಷ್ಟೊಂದು ತಿನ್ನಲಾರೆ" ಎಂದರು. ಅವರಿಗೆ ಕೊಟ್ಟ ಪ್ರತಿಯೊಂದನ್ನು ಸ್ವಲ್ಪ ರುಚಿ ನೋಡಿದರು. ಭಕ್ತ ಪ್ರಸಾದವನ್ನು ತೆಗೆದುಕೊಂಡು ತಲೆಗೆ ಒತ್ತಿಕೊಂಡನು. ಅವರ್ಣ ನೀಯ ಆನಂದದಿಂದ ಅವನ ಮೊಗ ಅರಳಿತ್ತು. ಶ್ರೀಮಾತೆಗೆ ನಮಸ್ಕರಿಸಿ ಹೊರಟನು. ಅವರು ಹೂ ಮಾಲೆಯನ್ನು ತೆಗೆದು ಗೌರಿಮಾ ಕೈಗೆ ಕೊಟ್ಟರು. ಪೂಜಿಸಿದ್ದ ಹೂವನ್ನು ಭಕ್ತವೃಂದಕ್ಕೆ ಹಂಚಿದರು.

ನಾನು ಹಿಂದೆ ಹೇಳಿದಂತೆ ಇಂದು ರಥ ಜಾತ್ರೆ ಪುಣ್ಯ ದಿನ. ಭೂ ದೇವ ಆ ಸಮಯಕ್ಕೆ ಸರಿಯಾಗಿ ಸಣ್ಣದೊಂದು ರಥವನ್ನು ತಯಾರು ಮಾಡಿದನು. ಶ್ರೀರಾಮಕೃಷ್ಣರನ್ನು ಈ ರಥದಲ್ಲಿ ತೆಗೆದುಕೊಂಡು ಹೋಗಲು ಅಣಿಮಾಡಿದರು. ಗೌರಿಮಾಗೆ ಶಾಲೆಯಲ್ಲಿ ಒಂದು ಮುಖ್ಯ ಕೆಲಸವಿದ್ದುದರಿಂದ ಅವರು ಹೊರಟರು. ಮಾತು ಗೌರಿಮಾ ಕಡೆ ತಿರು ಗಿತು. ಶ್ರೀಮಾತೆ, "ಅವಳು ಬಾಲಕಿಯರಿಗೆ ವಿದ್ಯಾಭ್ಯಾಸ ಕೊಡಲು

ಶ್ರಮಿಸುತ್ತಿರುವಳು. ಖಾಯಿಲೆ ಆದಾಗ ಅವರಿಗೆ ಶುಶ್ರೂಷೆ ಮಾಡು ವಳು. ಅವಳಿಗೆ ತನ್ನ ಸಂಸಾರವಿಲ್ಲ. ಅವಳ ತಾಯ್ತನ ಈ ಮಕ್ಕಳ ಮೂಲಕ ವ್ಯಕ್ತವಾಗುತ್ತಿದೆ. ಇದೇ ಅವಳ ಕಡೆ ಜನ್ಮ. ಅದಕ್ಕೇ ಅವ ಳಿಗೆ ಈ ಅನುಭವಗಳೆಲ್ಲಾ ಬರುತ್ತಿವೆ" ಎಂದರು.

ಶ್ರೀರಾಮಕೃಷ್ಣರ ಭಾವಚಿತ್ರವನ್ನು ರಥದಲ್ಲಿ ಇಟ್ಟರು. ಶ್ರೀಮಾತೆ ಹಾಸಿಗೆಯಿಂದ ಚಿತ್ರವನ್ನು ಮನಸಾರೆ ನೋಡಿದರು. ಸ್ತ್ರೀ ಭಕ್ತೆಯರು ಅದನ್ನು ಅಂಗಳದಲ್ಲಿ ಎಳೆದರು. ಶ್ರೀಮಾತೆ ಅವರ ಇಬ್ಬರು ಸೋದರ ಸೊಸೆಯರ ಜತೆಗೆ ನಾನೂ ಸೇರಿದೆ. ತುಂಬಾ ಸಂತೋಷವಾಯಿತು. ರಥವನ್ನು ಭಾವಚಿತ್ರದ ಸಹಿತ ಕೆಳಗೆ ತೆಗೆದುಕೊಂಡುಹೋದರು. ಮೆರ ವಣಿಗೆ, ರಸ್ತೆ, ಗಂಗಾತೀರ ಮುಂತಾದ ಕಡೆ ಹೊರಟಿತು. ಸಂಜೆಯಾದ ಮೇಲೆ ಅವರು ಹಿಂದಿರುಗಿದರು. ರಥ ರಸ್ತೆಯಲ್ಲಿ ಹೋಗುತ್ತಿದ್ದಾಗ, "ಎಲ್ಲರೂ ರಥೋತ್ಸವ ನೋಡಲು ಜಗನ್ನಾಥಕ್ಕೆ ಹೋಗಲಾಗುವುದಿಲ್ಲ. ಯಾರು ರಥದಲ್ಲಿ ಶ್ರೀರಾಮಕೃಷ್ಣರನ್ನು ನೋಡಿರುವರೋ ಅವರು ಭಗ ವತ್ಸಾಕ್ಷಾತ್ಕಾರ ಪಡೆಯುವರು" ಎಂದರು.

ಅಕ್ಟೋಬರ್, ೧೯೧೨.

ದುರ್ಗಾ ಪೂಜೆ ರಜಾ ದಿನಗಳಲ್ಲಿ ಒಮ್ಮೆ ನಾನು ಅವರನ್ನು ನೋಡಲು ಹೋದೆ. ಅವರು ತುಂಬಾ ಕೆಲಸದಲ್ಲಿದ್ದರು. ನಾನು ಅವರ ಬಳಿ ಕುಳಿತೆ. ರಾಂಚಿಯಿಂದ ಬಂದ ಒಬ್ಬ ಭಕ್ತನನ್ನು ಬರಹೇಳಿದರು. ಆತ, ಹೂವು, ಹಣ್ಣು, ಬಟ್ಟೆ ಜೊತೆಗೆ ನಾರಗಸೆ (linen) ದಾರದಿಂದ ಮಾಡಿದ ಹೂಮಾಲೆ ತಂದಿದ್ದನು. ಹೂಮಾಲೆಯನ್ನು ಧರಿಸಬೇಕೆಂದು ಶ್ರೀಮಾತೆಯನ್ನು ಕೇಳಿಕೊಂಡನು. ಆಗ ಗುಲಾಬ್‌ಮಾ ಆ ಮಾಲೆಯ ತಂತಿ ಶ್ರೀಮಾತೆಗೆ ಚುಚ್ಚಬಹುದೆಂದು ಭಕ್ತನಿಗೆ ಹೇಳಿದಳು. ಅದಕ್ಕೆ ಶ್ರೀಮಾತೆ, "ಇಲ್ಲ ನನ್ನ ಬಟ್ಟೆಮೇಲೆ ಅದನ್ನು ಧರಿಸುವೆನು" ಎಂದರು. ನಾನೂ ಸ್ವಲ್ಪ ಹೂ ಹಣ್ಣುಗಳನ್ನು ತೆಗೆದುಕೊಂಡುಹೋಗಿದ್ದೆ. ಶ್ರೀಮಾತೆ ಅದನ್ನು ದೇವರಿಗೆ ಅರ್ಪಿಸುವಂತೆ ಹೇಳಿದರು. ಒಂದು ದ್ರಾಕ್ಷಿಯನ್ನು ತಿಂದು, ಅದು ಬಹು ಮಧುರವಾಗಿದೆ ಎಂದರು.

ನಾನು ಕೆಲವು ದಿನಗಳ ಹಿಂದೆ ಕೊಟ್ಟ ಸೀರೆಯನ್ನು ಶ್ರೀಮಾತೆ ಯವರು ಧರಿಸಿದ್ದರು. ಅದನ್ನು ನನಗೆ ತೋರಿ, "ನೋಡು, ನಾನು ಅದನ್ನು ಉಟ್ಟುಕೊಂಡೆ. ಈಗ ಕೊಳೆಯಾಗಿದೆ" ಎಂದರು. ನನ್ನಂತಹ

ಅಯೋಗ್ಯ ಭಕ್ತಳ ಮೇಲೂ ಎಂತಹ ಅನುಗ್ರಹ ಶ್ರೀಮಾತೆಯದು ಎಂದುಕೊಂಡೆ.

ಶ್ರೀಮಾತೆಯು ಸೋದರ ಸೊಸೆ ನಳಿನಿ, ಕೋಪವಾಗಿದ್ದಳು. ಶ್ರೀಮಾತೆ ಹೀಗೆ ಬುದ್ಧಿ ಹೇಳಿದರು: "ಹೆಂಗಸರು ಇಷ್ಟು ಸುಲಭವಾಗಿ ಕೋಪಗೊಳ್ಳಬಾರದು. ತಾಳ್ಮೆ ಕಲಿಯಬೇಕು. ಬಾಲ್ಯದಲ್ಲಿ ಅವರ ತಂದೆತಾಯಿ, ಯೌವ್ವನದಲ್ಲಿ ಪತಿ— ಇವರೇ ಅವರಿಗೆ ಏಕಮಾತ್ರ ಆಶ್ರಯದಾತರು. ಹೆಂಗಸರ ಸ್ವಭಾವವೇ ತುಂಬಾ ಮೃದು. ಒಂದು ಮಾತು ಸಾಕು, ಅವರ ಅಶಾಂತಿಗೆ. ಈಗಿನ ಕಾಲದಲ್ಲಿ ಮಾತಿಗೆ ಬೆಲೆಯೇ ಇಲ್ಲ. ಶಾಂತಿಯಿಂದ, ತಂದೆತಾಯಿಗಳು, ಪತಿ, ಇವರಿಂದ ಎಷ್ಟೇ ಕಷ್ಟವಾದರೂ, ಅನಾನುಕೂಲಗಳನ್ನು ಸಹಿಸಬೇಕು."

ಚಂದ್ರಬಾಬು ಸಹೋದರಿ ನಮ್ಮನ್ನು ನೋಡಲು ಬಂದರು. ಮಾತನಾಡುವಾಗ ಆಕೆ, "ಶ್ರೀಮಾತೆಯ ಪತಿ ಇನ್ನೂ ಬದುಕಿರುವರೇ? ಇವರೆಲ್ಲಾ ಅವರ ಮಕ್ಕಳು ಸೊಸೆಯರೆ?" ಎಂದು ನನ್ನನ್ನು ಕೇಳಿದರು, "ಅಯ್ಯೋ ದೇವರೆ! ನೀನು ರಾಮಕೃಷ್ಣರ ಉಪದೇಶವನ್ನು ಓದಿಲ್ಲವೇ? ಕಾಮಿನಿ, ಕಾಂಚನಗಳನ್ನು ತ್ಯಾಗಮಾಡೆಂದು ಅವರು ಯಾವಾಗಲೂ ಹೇಳುತ್ತಿದ್ದರು". ಆಕೆಗೆ ಭ್ರಾಂತಿ ಹಿಡಿದಂತಾಯಿತು. "ಕ್ಷಮಿಸು ಇವರೆಲ್ಲಾ ಅವರ ಮಕ್ಕಳು ಎಂದು ಭಾವಿಸಿದ್ದೆ" ಎಂದರು.

ದುರ್ಗಾ ಪೂಜೆಯ ದಿನ ಶ್ರೀಮಾತೆಯ ಹತ್ತಿರ ಒಂದು ರಾಶಿ ಹೊಸ ಬಟ್ಟೆ ಇತ್ತು. ತಮ್ಮ ಮೂರು ಸೋದರ ಸೊಸೆ ಗಂಡಂದರಿಗೆ ಇದ್ದ ಬಟ್ಟೆಯನ್ನು ಬೇರ್ಪಡಿಸಿದರು. ತಮ್ಮ ಕೈಯಲ್ಲಿ ಒಂದು ಬಟ್ಟೆಯನ್ನು ಹಿಡಿದುಕೊಂಡು, "ಜ— ಈ ಬಟ್ಟೆಯನ್ನು ಉಟ್ಟುಕೊಂಡು ಬೇಲೂರು ಮಠಕ್ಕೆ ಪೂಜೆಯ ಸಮಯದಲ್ಲಿ ಹೋಗುತ್ತಾನೆ" ಎಂದರು.

ಮಧ್ಯಾಹ್ನ ಪೂಜೆ ಆದಮೇಲೆ ನಮ್ಮ ಊಟವಾಯಿತು. ಶ್ರೀಮಾತೆ ವಿಶ್ರಮಿಸಿಕೊಳ್ಳುತ್ತಿದ್ದರು. ನಾನು ಅವರ ಬಳಿ ಕುಳಿತು ಅವರಿಗೆ ಗಾಳಿ ಬೀಸಲು ಯತ್ನಿಸಿದೆ. ಅವರು ಅತಿ ವಾತ್ಸಲ್ಯದಿಂದ, "ಅಲ್ಲೊಂದು ದಿಂಬು ಇದೆ ತಂದು ಹತ್ತಿರ ಮಲಗಿಕೊ, ನನಗೆ ಇನ್ನು ಬೀಸಬೇಕಾಗಿಲ್ಲ" ಎಂದರು. ಅವರ ದಿಂಬನ್ನು ಉಪಯೋಗಿಸಲು ಅನುಮಾನಿಸಿ, ರಾಧೆಯ ಕೋಣೆಯಿಂದ ದಿಂಬನ್ನು ತಂದೆನು. ಶ್ರೀಮಾತೆ ನಗುತ್ತ, "ಈ ದಿಂಬು ಆ ಹುಚ್ಚಿ ರಾಧೆ ತಾಯಿಗೆ ಸೇರಿದ್ದು. ಅವಳು ಗಲಾಟೆ ಮಾಡುವಳು.

ನನ್ನ ದಿಂಬನ್ನು ಉಪಯೋಗಿಸು. ಅದರಲ್ಲೇನೂ ತೊಂದರೆ ಇಲ್ಲ'' ಎಂದರು. ರಾಧೆಗೆ, ಬಾ, ಇಲ್ಲಿ. ನಿನ್ನ ತಂಗಿಯ ಪಕ್ಕದಲ್ಲಿ ಮಲಗಿಕೊ. ಎಂದರು. ಮಾತು ಕ್ರಮೇಣ ಚಂದ್ರಬಾಬು ಸೋದರಿ ಕಡೆ ತಿರುಗಿತು. ಶ್ರೀಮಾತೆ, ''ನೀನು ಆಕೆಗೆ, 'ಅವರ ಯಜಮಾನರು ಪೂಜಾ ಮಂದಿರ ದಲ್ಲಿರುವರು. ಇಲ್ಲಿರುವವರೆಲ್ಲಾ ಅವರ ಮಕ್ಕಳು' ಎಂದು ಹೇಳಬಹು ದಾಗಿತ್ತಲ್ಲಾ!'' ಎಂದರು. ''ಪ್ರಪಂಚದ ಸ್ತ್ರೀಪುರುಷರೆಲ್ಲಾ ಅವರ ಮಕ್ಕಳೇ!'' ಎಂದೆ. ಶ್ರೀಮಾತೆ ನಕ್ಕರು. ''ಜನ ಎಷ್ಟು ಸ್ವಾರ್ಥ ಅಭಿಲಾಷೆಯಿಂದ ಬರುತ್ತಾರೆ. ಒಂದು ಸೌತೆಕಾಯಿ ನೈವೇದ್ಯಕ್ಕೆ ಕೊಟ್ಟು, ತಮ್ಮ ಅಭಿಲಾಷೆ ನೆರವೇರಿಸಬೇಕೆಂದು ಇಚ್ಛಿಸುವರು. ಸಾಧಾ ರಣ ಮನುಷ್ಯರ ಸ್ವಭಾವವೇ ಹೀಗೆ'' ಎಂದರು.

ಸ್ವಲ್ಪ ವಿಶ್ರಮಿಸಿಕೊಂಡಮೇಲೆ ಎದ್ದೆವು. ಪಕ್ಕದ ಕೋಣೆಯಲ್ಲಿ ಕೆಲವು ಗೃಹಿಣೀ ಭಕ್ತರಿದ್ದರು. ಅವರಲ್ಲಿ ಇಬ್ಬರು ಕಾವಿಬಟ್ಟೆ ಧರಿ ಸಿದ್ದರು. ಅವರು ಶ್ರೀಮಾತೆಗೆ ನಮಸ್ಕರಿಸಿದರು. ನೈವೇದ್ಯಕ್ಕೆಂದು ಸ್ವಲ್ಪ ಸಿಹಿ ಪದಾರ್ಥಗಳನ್ನು ತಂದಿದ್ದರು. ಅವರು ಕಾಳಿಘಾಟಿನ ನಾರಾಯಣ ಪರಮಹಂಸರ ಶಿಷ್ಯರೆಂದು ತಿಳಿಯಿತು. ಅವರ ಗುರು ಆಗತಾನೇ ಒಂದು ದೊಡ್ಡ ಯಾಗ ಮಾಡುವುದರಲ್ಲಿದ್ದರು.

ಅವರಲ್ಲಿ ಒಬ್ಬ ಸನ್ಯಾಸಿನಿ :– 'ವಿಗ್ರಹಾರಾಧನೆಯಲ್ಲಿ ಏನಾದರೂ ಸತ್ಯವಿದೆಯೆ? ನಮ್ಮ ಗುರು ಅದನ್ನು ಒಪ್ಪುವುದಿಲ್ಲ. ಅವರು ಬೆಂಕಿ ಮತ್ತು ಸೂರ್ಯನ ಪೂಜೆಯನ್ನು ಮಾತ್ರ ವಿಧಿಸುವರು.'

ಶ್ರೀಮಾತೆ:–ನಿಮ್ಮ ಗುರುವಿನ ಮಾತನ್ನು ಅನುಮಾನಿಸಕೂಡದು. ನಿಮ್ಮ ಗುರುವಿನ ಅಭಿಪ್ರಾಯವನ್ನು ತಿಳಿದಮೇಲೆ ನನ್ನನ್ನು ಏತಕ್ಕೆ ಕೇಳುವಿರಿ?

ಸನ್ಯಾಸಿನಿ :–ನಿಮ್ಮ ಅಭಿಪ್ರಾಯವನ್ನು ತಿಳಿಯಬೇಕೆಂಬ ಆಸೆ.

ಶ್ರೀಮಾತೆ ತಮ್ಮ ಅಭಿಪ್ರಾಯವನ್ನು ತಿಳಿಸಲಿಲ್ಲ. ಆಕೆ ಬಿಡಲಿಲ್ಲ. ಬಲಾತ್ಕರಿಸಿದಳು. ಶ್ರೀಮಾತೆ, ''ನಿಮ್ಮ ಗುರು ಜ್ಞಾನಿಯಾಗಿದ್ದರೆ, ದಯವಿಟ್ಟು ತಪ್ಪುಭಾವಿಸಬೇಡಿ, ಅವರು ಹಾಗೆ ಹೇಳುತ್ತಿರಲಿಲ್ಲ. ಎಷ್ಟೋಕಾಲದಿಂದ ಜನರು ವಿಗ್ರಹಾರಾಧನೆಯನ್ನು ಮಾಡಿ ಭಗವತ್ಸಾ ಕ್ಷಾತ್ಕಾರ ಪಡೆದಿರುವರು. ನೀವು ಇದನ್ನು ಅನುಮಾನಿಸುವಿರಾ? ಶ್ರೀ ರಾಮಕೃಷ್ಣರು ಎಂದಿಗೂ ಹೀಗೆ ಹೇಳುತ್ತಿರಲಿಲ್ಲ. ಬ್ರಹ್ಮ ಸರ್ವ

ವ್ಯಾಪಿಯಾಗಿರುವನು. ದೇವದೂತರು, ಅವತಾರಗಳು ಮಾನವನಿಗೆ ಸಾರಿತೋರಲು ಜನ್ಮವೆತ್ತುವರು. ಅವರು ಪ್ರತಿಯೊಬ್ಬರಿಗೂ ಅವರವರ ಪ್ರಕೃತಿಗೆ ತಕ್ಕಂತೆ ಉಪದೇಶ ಕೊಡುವರು. ಸತ್ಯ ಸಾಕ್ಷಾತ್ಕಾರಕ್ಕೆ ಹಲವು ಪಥಗಳಿವೆ. ಈ ಉಪದೇಶಗಳೆಲ್ಲವೂ ಒಂದು ದೃಷ್ಟಿಯಿಂದ ಒಳ್ಳೆಯದೇ. ಒಂದು ಮರವನ್ನು ತೆಗೆದುಕೊಳ್ಳಿ. ಅವುಗಳಲ್ಲಿ ಎಷ್ಟೋ ಹಕ್ಕಿಗಳಿವೆ. ಅವುಗಳಲ್ಲಿ ಹಲವು ಬಣ್ಣಗಳ ಹಕ್ಕಿಗಳೂ ಇರುವುವು. ಅವುಗಳ ಧ್ವನಿಕೂಡ ಬೇರೆ ಬೇರೆ. ಆದರೆ ಮಾತನಾಡುವಾಗ ಇವುಗಳೆಲ್ಲಾ ಹಕ್ಕಿಗಳ ಧ್ವನಿ ಎನ್ನುವೆವು. ಅದರಲ್ಲಿ ಯಾವುದೊ ಒಂದನ್ನು ಮಾತ್ರ ಒಪ್ಪಿಕೊಂಡು ಉಳಿದುವನ್ನು ಅಲ್ಲಗಳೆಯುವುದಿಲ್ಲ'' ಎಂದರು.

ಸ್ವಲ್ಪಹೊತ್ತಾದ ಮೇಲೆ ಆಕೆ ವಾದಮಾಡಲಿಲ್ಲ. ಶ್ರೀಮಾತೆಯು ಕಲ್ಕತ್ತಾ ವಿಳಾಸವನ್ನು ಕೇಳಿ ಅವರನ್ನು ಒಮ್ಮೆ ಅಲ್ಲಿ ಸಂದರ್ಶಿಸುವೆವು ಎಂದರು. ಅವರು ಹೋದ ಮೇಲೆ ಶ್ರೀಮಾತೆ, ''ಹೆಂಗಸು ಹೀಗೆ ವಾದ ಮಾಡುವುದು ಯೋಗ್ಯವಲ್ಲ. ಬುದ್ಧಿವಂತರೇ ಕೇವಲ ತರ್ಕದಿಂದ ಬ್ರಹ್ಮನನ್ನು ತಿಳಿಯಲಾರರು. ವಾದವಸ್ತುವೆ ಬ್ರಹ್ಮ?'' ಎಂದರು.

ಕೆಲವು ದಿನಗಳಾದ ಮೇಲೆ ಶ್ರೀಮಾತೆ ಕಾಶಿಗೆ ಹೋಗುವುದರಲ್ಲಿದ್ದರು. ನಾನು ಕೆಲವು ದಿನ ಅವರನ್ನು ಕಾಣಲು ಸಾಧ್ಯವಿರಲಿಲ್ಲ. ನಾನು ಅವರಿಂದ ಬೀಳ್ಕೊಡುವಾಗ ತುಂಬಾ ಪ್ರೀತಿಯನ್ನು ತೋರಿದರು. ಅವರ ಪ್ರೇಮಾತಿಶಯದಿಂದ ನಾನು ತಲ್ಲೀನಳಾಗಿ ಹೋದೆ. ರಾತ್ರೆ ಯಾರ ಹತ್ತಿರಲೂ ಮಾತನ್ನೇ ಆಡಲಿಲ್ಲ.

೩೧ನೇ ಜನವರಿ, ೧೯೧೩.

ಶ್ರೀಮಾತೆ ಕಾಶಿಯಿಂದ ಹಿಂದಿರುಗಿದ್ದರು. ನಾನು ಒಂದು ದಿನ ಬೆಳಿಗ್ಗೆ ಹೊರಟೆ. ಅವರು ಆಗ ಪೂಜೆಯಲ್ಲಿ ತಲ್ಲೀನರಾಗಿದ್ದರು. ಪೂಜೆಯಾದ ಮೇಲೆ ಎದ್ದು, ''ಮಗು, ನಿನ್ನನ್ನು ನೋಡಿ ಸಂತೋಷವಾಯಿತು. ಪುನಃ ನಾನು ನಿನ್ನನ್ನು ನೋಡುವುದಿಲ್ಲವೇನೋ ಎಂದು ಭಾವಿಸಿದ್ದೆ. ಹಳ್ಳಿಯ ಕಡೆ ನಾವು ಹೋಗವುದರಲ್ಲಿರುವೆವು'' ಎಂದರು.

ಬೆಳಗ್ಗೆ ಹೊತ್ತಾಗಿತ್ತು. ಅವರ ಸೋದರ ಸೊಸೆ ರಾಧಾ, ಕ್ರೈಸ್ತ ಮಿಷನರಿ ಶಾಲೆಗೆ ಹೋಗುವುದರಲ್ಲಿದ್ದಳು. ಗುಲಾಬ್‌ಮಾ ಬಂದು ಶ್ರೀಮಾತೆಗೆ, ''ರಾಧಾ ಆಗಲೆ ದೊಡ್ಡವಳಾಗಿರುವಳು. ಅವಳೇತಕ್ಕೆ ಇನ್ನು ಶಾಲೆಗೆ ಹೋಗಬೇಕು?'' ಎಂದರು. ರಾಧೆಗೆ ಶಾಲೆಗೆ ಹೋಗ

ಬೇಡವೆಂದು ಹೇಳಿದರು. ರಾಧೆ ಅಳಲು ಪ್ರಾರಂಭಿಸಿದಳು. ಶ್ರೀಮಾತೆ, "ಅವಳೇನು ಆಗಲೆ ಬೆಳೆದು ನಿಂತಿಲ್ಲ. ಶಾಲೆಗೆ ಹೋಗಲಿ. ಓದಿ ಯಾವುದಾದರೂ ವೃತ್ತಿಯನ್ನು ಕಲಿತರೆ ಇತರರಿಗೆ ಎಷ್ಟೋ ಉಪಕಾರ ವಾಗುವುದು. ಹಳ್ಳಿಕಡೆ ಅವಳಿಗೆ ಮದುವೆಯಾಗಿದೆ. ವಿದ್ಯೆಯಿಂದ ತಾನು ಉತ್ತಮಳಾಗುವುದಲ್ಲದೆ, ಇತರರಿಗೂ ಒಳ್ಳೆಯದಾಗುವುದು" ಎಂದರು. ಅಂತೂ ರಾಧೆ ಶಾಲೆಗೆ ಹೋದಳು.

ಅನ್ನಪೂರ್ಣೆ ತಾಯಿ ಉಪದೇಶ ಕೊಡಿಸುವುದಕ್ಕಾಗಿ ಒಬ್ಬ ಹುಡುಗಿಯನ್ನು ಕರೆದುಕೊಂಡು ಬಂದಳು. "ತಾಯಿ, ಈ ಹುಡುಗಿ ನಿಮ್ಮಿಂದ ಉಪದೇಶ ಪಡೆಯಬೇಕೆಂದು ನನ್ನನ್ನು ಕಾಡುತ್ತಿರುವಳು. ಅದಕ್ಕೆ ಅವಳನ್ನು ಕರೆದುಕೊಂಡು ಬಂದೆ."

ಶ್ರೀಮಾತೆ:– ಇಂದು ಉಪದೇಶ ಹೇಗೆ ಕೊಡಲಿ? ನಾನು ಆಗಲೇ ಫಲಹಾರ ಮಾಡಿರುವೆ.

ಅನ್ನಪೂರ್ಣೆಯ ತಾಯಿ:– ಆದರೆ ಹುಡಗಿ ಉಪವಾಸವಿರುವಳು. ನೀವು ಫಲಹಾರ ಮಾಡಿದ್ದರೂ ಚಿಂತೆ ಇಲ್ಲ.

ಶ್ರೀಮಾತೆ:– ಅವಳು ಉಪದೇಶಕ್ಕೆ ಸಿದ್ಧಳಾಗಿರುವಳೆ?

ಅನ್ನಪೂರ್ಣೆಯ ತಾಯಿ:– ಹೌದು ತಾಯಿ. ಅವಳು ಅದಕ್ಕೆ ಸಿದ್ಧಳಾಗಿಯೇ ಬಂದಿರುವಳು.

ಶ್ರೀಮಾತೆ ಸಮ್ಮತಿ ಇತ್ತರು. ಉಪದೇಶವಾದಮೇಲೆ ಅನ್ನಪೂರ್ಣೆಯ ತಾಯಿ ಆ ಹುಡುಗಿ ವಿಚಾರ ಮಾತನಾಡುತ್ತಾ, "ಅವಳು ಸಾಧಾರಣ ಹುಡುಗಿಯಲ್ಲ. ಶ್ರೀರಾಮಕೃಷ್ಣರ ಜೀವನ ಓದಿದ ನಂತರ ಸಾಧನೆಮಾಡಬೇಕೆಂದು ಕಾತುರಳಾದಳು. ತನ್ನ ನೀಳವಾದ ಕೂದಲನ್ನು ಕತ್ತರಿಸಿ, ಗಂಡಸಿನಂತೆ ವೇಷಹಾಕಿಕೊಂಡು ತೀರ್ಥಯಾತ್ರೆಗೆ ಹೋದಳು. ಸುಮಾರು ಇನ್ನೂರು ಮೈಲಿ ವೈದ್ಯನಾಥ ದೇವಸ್ಥಾನದವರೆಗೆ ಹೋದಳು. ದಾರಿಯಲ್ಲಿ ಒಂದು ಕಾಡಿನಲ್ಲಿದ್ದಾಗ ಅವಳ ತಾಯಿಯ ಗುರುಗಳು ಅವಳನ್ನು ಕಂಡರು. ಮನೆಗೆ ತಿಳಿಸಿದರು. ಅಲ್ಲಿಯವರೆವಿಗೂ ತಮ್ಮ ಹತ್ತಿರವೇ ಇಟ್ಟುಕೊಂಡಿದ್ದರು. ನಂತರ ತಂದೆ, ಮಗಳನ್ನು ಕರೆದುಕೊಂಡು ಬಂದರು.

ಶ್ರೀಮಾತೆ ಮೌನವಾಗಿ ಇದನ್ನು ಕೇಳಿದರು. "ಎಂತಹ ಅದ್ಭುತ ಭಕ್ತಿ!" ಎಂದರು. ಹತ್ತಿರವಿದ್ದ ಇತರ ಭಕ್ತರು, "ಅಬ್ಬ ಎಂತಹ ಸುಂದರ ಹುಡುಗಿ. ಇಷ್ಟು ಭಕ್ತಿ ಇದ್ದರೂ ಹೇಗೆ ಒಂಟಿಯಾಗಿ

ಹೋದಳು!'' ಎಂದರು. ''ನಮ್ಮ ದೇಶದ ಕಡೆ ಇದರಿಂದ ದೊಡ್ಡ ಅಪವಾದವೇ ಬರುತ್ತಿತ್ತು!'' ಎಂದಳು ನಳಿನಿ.

ಮಧ್ಯಾಹ್ನ ಊಟವಾದಮೇಲೆ ಪಕ್ಕದ ಕೋಣೆಗೆ ಎಲ್ಲರೂ ವಿಶ್ರಾಂತಿಗೆ ಹೊರಟರು. ಶ್ರೀಮಾತೆ ತನ್ನ ಹೊಸ ಶಿಷ್ಯಳಿಗೆ, ''ವಿಶ್ರಾಂತಿ ಪಡೆ'' ಎಂದರು. ''ಹಗಲು ತನಗೆ ಮಲಗಿ ಅಭ್ಯಾಸವಿಲ್ಲ'' ಎಂದಳು. ಶ್ರೀಮಾತೆಯ ಅಪ್ಪಣೆಯನ್ನು ಪರಿಪಾಲಿಸಬೇಕೆಂದು ನಾನಂದೆ. ಅವಳು ಒಪ್ಪಿಕೊಂಡು, ಕೆಲವುಕ್ಷಣ ಮಲಗಿದ್ದು, ಅನಂತರ ಅಂಗಳಕ್ಕೆ ಹೊರಟಳು. ಶ್ರೀಮಾತೆ, ''ಚಂಚಲಚಿತ್ತಳು. ಅದಕ್ಕೇ ಅವಳು ಮನೆ ಬಿಟ್ಟಳು. ಅವಳ ಗಂಡನಿಗೆ ಏನು ಕೆಲಸ? ಅವಳನ್ನು ತನ್ನ ಹತ್ತಿರ ಏತಕ್ಕೆ ಇಟ್ಟುಕೊಳ್ಳುವುದಿಲ್ಲ?'' ಎಂದರು. ಆ ಹುಡಿಗಿಯ ಸೇವಕಿ ''ಅವನಿಗೆ ಬರುವ ಸಂಬಳ ಬಹಳ ಕಡಿಮೆ, ಜೊತೆಗೆ ಮನೆಯಲ್ಲಿ ಯಾರೂ ಇಲ್ಲ. ಮನೆಯಲ್ಲಿ ಅವಳೊಬ್ಬಳನ್ನು ಬಿಡುವುದಕ್ಕೆ ಆಗುವುದಿಲ್ಲ. ಅದಕ್ಕೆ ತಂದೆಯ ಮನೆಯಲ್ಲಿರುವಳು. ಗಂಡ, ಮಾವನ ಮನೆಗೆ ಪ್ರತಿ ಶನಿವಾರ ಭಾನುವಾರ ಬರುವನು'' ಎಂದಳು. ಅನ್ನಪೂರ್ಣೆಯ ತಾಯಿ, ''ಈ ಹುಡುಗಿ ತನ್ನ ಗಂಡನಿಗೆ 'ನೀನು ನನ್ನ ಗಂಡನಲ್ಲ. ಜಗನ್ನಾಥನೇ ನನ್ನ ಗಂಡ' ನೆನ್ನುವಳು'' ಎಂದರು. ಶ್ರೀಮಾತೆ ಉತ್ತರವನ್ನು ಕೊಡದೆ ಮೌನವಾಗಿದ್ದರು.

ಗೃಹಿಣೀ ಭಕ್ತರು ದೇವರ ಕೋಣೆಯ ಉತ್ತರ ವರಾಂಡದಲ್ಲಿ ಮಾತನಾಡುತ್ತಿದ್ದರು. ಇದರಿಂದ ಬಹಳ ಗದ್ದಲವಾಯಿತು. ಶ್ರೀಮಾತೆ ''ಅವರಿಗೆ ಮೆಲ್ಲಗೆ ಮಾತನಾಡುವಂತೆ ಹೇಳು. ಶಾರದಾನಂದರಿಗೆ ತೊಂದರೆಯಾಗುವುದು ಎಂದು ಹೇಳು'' ಎಂದು ಹತ್ತಿರಿದ್ದ ಒಬ್ಬರಿಗೆ ಹೇಳಿಕಳುಹಿಸಿದರು. ಕೋಣೆಯಲ್ಲಿ ಯಾರೂ ಇರಲಿಲ್ಲ. ಅಧ್ಯಾತ್ಮಿಕ ಬೋಧನಕ್ಕೆ ಸಂಬಂಧಪಟ್ಟ ಕೆಲವು ಪ್ರಶ್ನೆ ಕೇಳಿದೆ. ಶ್ರೀಮಾತೆ,''ಶ್ರೀ ರಾಮಕೃಷ್ಣರಿಗೂ, ನನಗೂ ಯಾವ ಭೇದಭಾವವನ್ನೂ ಮಾಡಬೇಡಿ. ಧ್ಯಾನ ಮಾಡಿ ನಿಮಗೆ ತೋರುವ ಇಷ್ಟ ದೈವಕ್ಕೆ ಪ್ರಾರ್ಥಿಸು. ಧ್ಯಾನ, ಹೃದಯದಲ್ಲಿ ಮೊದಲಾಗಿ, ಶಿರದಲ್ಲಿ ಕೊನೆಗಾಣುವುದು. ತಂತ್ರ ಮಂತ್ರ ಇವುಗಳಿಂದ ಏನೂ ಪ್ರಯೋಜನವಿಲ್ಲ. ಭಕ್ತಿಯಿಂದಲೇ ಸರ್ವವೂ ಸಿದ್ಧಿಸುವುದು. ಶ್ರೀರಾಮಕೃಷ್ಣರೇ ಸರ್ವಸ್ವ; ಅವರೇ ಇಷ್ಟದೇವ ಮತ್ತು ಗುರು'' ಎಂದರು.

ಅನಂತರ ಮಾತು ಗೌರಿಮಾ ಮತ್ತು ಅವಳ ಶಿಷ್ಯಳು ದು—ಇವರ ಕಡೆ ತಿರುಗಿತು. ಶ್ರೀಮಾತೆ, ಇಬ್ಬರನ್ನೂ ಶ್ಲಾಘಿಸಿದರು. “ಮಗು, ಕೇಳು, ಅನೇಕರು ಪ್ರಪಂಚದ ಪೆಟ್ಟನಿಂದ ನೊಂದಾದಮೇಲೆ ದೇವರ ಕಡೆ ತಿರುಗಬಹುದು. ಆದರೆ ಯಾರು ಬಾಲ್ಯದಿಂದಲೂ ಅವನನ್ನು ಕುರಿತು ಚಿಂತಿಸುವರೋ, ಅವರೇ ಧನ್ಯರು! ಆ ಹುಡುಗಿ ಹೂವಿನಂತೆ ಪರಿಶುದ್ಧಳು. ಗೌರಿದಾಸಿ ಅವಳ ಶೀಲವನ್ನು ಅಷ್ಟು ಚೆನ್ನಾಗಿ ತಿದ್ದಿರುವಳು. ಅವಳ ಸಹೋದರರು ಮದುವೆ ಮಾಡಬೇಕೆಂದು ಬೇಕಾದಷ್ಟು ಪ್ರಯತ್ನಪಟ್ಟರು. ಆದರೆ ಗೌರಿದಾಸಿ ಊರಿಂದ ಊರಿಗೆ ಅವಳನ್ನು ಕರೆದುಕೊಂಡು ಹೋಗಿ ಬಚ್ಚಿಡುತಿದ್ದಳು. ಕೊನೆಗೆ ಪುರಿಗೆ ಹೋಗಿ ಜಗನ್ನಾಥನಿಗೆ ಮಾಲೆ ಹಾಕಿ, ಅವನ ಕೊರಳ ಮಾಲೆಯನ್ನು ಇವಳಿಗೆ ಹಾಕಿಸಿ ಸನ್ಯಾಸಿನಿಯನ್ನಾಗಿ ಮಾಡಿದಳು. ಅಂದಿನಿಂದಲೂ ಅವಳು ಸನ್ಯಾಸಿನಿಯಾಗಿರುವಳು. ಅಷ್ಟು ಪರಿಶುದ್ಧಳಾದ ಒಳ್ಳೆಯ ಹುಡುಗಿ! ವಿದ್ಯಾವಂತೆ. ಒಂದು ಸಂಸ್ಕೃತ ಪರೀಕ್ಷೆಗೂ ಸಿದ್ಧಳಾಗುತ್ತಿರುವಳೆಂದು ಕೇಳಿದೆ.” ಶ್ರೀಮಾತೆಯವರಿಂದ ಗೌರಿಮಾ ಬಾಲ್ಯ ಜೀವನವನ್ನು ಕೇಳಿದೆ. ಅವರೂ ಕೂಡ ಬಾಲ್ಯದಲ್ಲಿ ತುಂಬಾ ಕಷ್ಟಪಟ್ಟರು.

ಸ್ವಲ್ಪ ಹೊತ್ತಾದ ಮೇಲೆ, ನಾಲ್ಕೈದು ಜನ ಗೃಹಿಣೀ ಭಕ್ತರು ಬಂದರು. ಶ್ರೀಮಾತೆಗೆ ಎಳನೀರು ಮತ್ತು ಫಲವನ್ನು ಅರ್ಪಿಸಿದರು. ಅವರಲ್ಲಿ ಒಬ್ಬರು ಮುಂದೆ ಬಂದು ಶ್ರೀಮಾತೆಯನ್ನು ಮುಟ್ಟುವುದರಲ್ಲಿದ್ದರು. ಆಗ ಶ್ರೀಮಾತೆ, “ಅಲ್ಲಿಂದಲೇ ನಮಸ್ಕರಿಸು ಮಗು!” ಎಂದು ಹೇಳಿದರು. ಭಕ್ತರು ದ್ರವ್ಯವನ್ನು ಕೊಟ್ಟರು. ಶ್ರೀಮಾತೆ ಹಾಗೆ ಕೊಡಬೇಡಿ ಎಂದರು. ಅವರು ಆಧ್ಯಾತ್ಮಿಕ ಸಲಹೆಯನ್ನು ಕೇಳಿದರು. ಶ್ರೀಮಾತೆ, “ನಾನು ನಿಮಗೆ ಹೇಳುವುದೇನಿದೆ? ಶ್ರೀರಾಮಕೃಷ್ಣರ ಸಂದೇಶ ಪುಸ್ತಕದಲ್ಲಿದೆ. ಅವರ ಒಂದು ಬುದ್ಧಿವಾದವನ್ನು ಅನುಸರಿಸಿದರೂ ನೀವು ಕೃತಾರ್ಥರಾಗುವಿರಿ” ಎಂದರು. ಅವರು ಹೊರಟ ನಂತರ, “ಆಧ್ಯಾತ್ಮಿಕ ಬೋಧನೆಯನ್ನು ತಿಳಿದುಕೊಳ್ಳಲು ಅರ್ಹರಾದವರೆಲ್ಲಿರುವರು? ಮೊದಲು ಒಬ್ಬ ಅರ್ಹನಾಗಿರಬೇಕು. ಇಲ್ಲದಿದ್ದರೆ ಬೋಧನೆ ವ್ಯರ್ಥ” ಎಂದರು.

ಅನ್ನಪೂರ್ಣೆಯ ತಾಯಿ ಕೋಣೆಗೆ ಬಂದು “ತಾಯಿ, ನನಗೆ ನೀವು ಸ್ವಪ್ನದಲ್ಲಿ ಕಾಣಿಸಿಕೊಂಡು, ‘ನನ್ನ ಪ್ರಸಾದ ಸ್ವೀಕರಿಸು. ನೀನು ರೋಗದಿಂದ ಪಾರಾಗುವೆ’ ಎಂದಂತೆ ಕಂಡಿತು. ಆದರೆ ಶ್ರೀರಾಮ

ಕೃಷ್ಣರು ಮತ್ತಿ ಯಾರ ಪ್ರಸಾದವನ್ನೂ ತೆಗೆದುಕೊಳ್ಳಬೇಡವೆಂದು ಹೇಳಿರುವರು. ಆದರೂ ಸ್ವಲ್ಪ ನಿಮ್ಮ ಪ್ರಸಾದವನ್ನು ಕೊಟ್ಟರೆ ಸಂತೋಷ'' ಎಂದರು. ಶ್ರೀಮಾತೆ ಅದಕ್ಕೆ ಒಡಂಬಡಲಿಲ್ಲ. ಆ ಹೆಂಗಸು ಬಲಾತ್ಕರಿಸಿದಳು.

ಶ್ರೀಮಾತೆ:— ಶ್ರೀ ರಾಮಕೃಷ್ಣರ ಆಣತಿಯನ್ನು ನೀನು ಅಲ್ಲಗಳೆಯುವುದೇ ?

ಅನ್ನಪೂರ್ಣೆತಾಯಿ :— ಎಲ್ಲಿಯವರೆಗೂ ನಾನು, ನೀವು ಬೇರೆ, ಅವರು ಬೇರೆ ಎಂದು ತಿಳಿದಿದ್ದೆನೋ, ಅಲ್ಲಿವರೆಗೆ ಮಾತ್ರ ಅದನ್ನು ಪಾಲಿಸುತ್ತಿದ್ದೆ. ಈಗ ನೀವಿಬ್ಬರೂ ಒಂದೇ ಎಂದು ನನಗೆ ಗೊತ್ತಾಗಿದೆ. ಈಗ ದಯವಿಟ್ಟು ಪ್ರಸಾದವನ್ನು ಕೊಡಿ.

ಶ್ರೀಮಾತೆ ಸೋಲಬೇಕಾಯಿತು. ಸ್ವಲ್ಪ ಹೊತ್ತಾದಮೇಲೆ ನಾವು ಹೊರಟೆವು.

ಮತ್ತೊಂದು ದಿನ ನಾನು ಶ್ರೀಮಾತೆಯ ದರ್ಶನಕ್ಕೆ ಹೋದಾಗ ಅವರು ನನ್ನ ಯಜಮಾನರ ವಿಷಯವನ್ನು ಕೇಳಿದರು. ಅವರಿಗೆ ಆರೋಗ್ಯ ಚೆನ್ನಾಗಿಲ್ಲವೆಂದೆ. ಅವರಿಗಾಗಿ ಒಂದು ಕಾಗದ ಬರೆ ಎಂದರು. ಅವರೇ ಹೇಳಿ ಬರೆಸಿದರು. ಮಧ್ಯಾಹ್ನದ ಊಟವಾದಮೇಲೆ ಸ್ವಲ್ಪ ವಿಶ್ರಾಂತಿ ಪಡೆದನಂತರ ಕೆಲವು ಗೃಹಿಣೀ ಭಕ್ತರು ಬಂದರು. ಅವರು ನಮಸ್ಕಾರ ಮಾಡಿ ಆದಮೇಲೆ ಒಬ್ಬ ಹೆಂಗಸು, "ನನ್ನ ಹತ್ತಿರ ಒಂದು ಒಳ್ಳೆಯ ಮೇಕೆ ಇದೆ. ಅದು ದಿನಕ್ಕೆ ನಾಲ್ಕು ಪೌಂಡು ಹಾಲು ಕೊಡುವುದು. ಮೂರು ಹಕ್ಕಿಗಳಿವೆ. ಇದರೊಂದಿಗೆ ಕಾಲ ಕಳೆಯುವೆ. ಈಗಾಗಲೇ ನನಗೆ ತುಂಬಾ ವಯಸ್ಸಾಗಿದೆ'' ಎಂದಳು. ಆಗ ಶ್ರೀರಾಮಕೃಷ್ಣರ ಒಂದು ನುಡಿ ನೆನಪಿಗೆ ಬಂತು. "ಮಹಾಮಾಯೆ, ಒಂದು ಬೆಕ್ಕನ್ನು ಸಾಕುವಂತೆ ಮಾಡಿ, ದೇವರನ್ನು ಮರೆಸುವುದು. ಪ್ರಪಂಚ ನಡೆಯುವುದು ಹೇಗೆ? '' ಶ್ರೀಮಾತೆ ಸುಮ್ಮನೆ ಇವರ ಮಾತುಗಳನ್ನು ಕೇಳಿದರು. ಅಯ್ಯೋ! ನಮಗಾಗಿ ಎಷ್ಟು ವ್ಯಥೆಗಳನ್ನು ಅವರು ಸಹಿಸುವರು. ಅವರಿಗೆ ಸ್ವಲ್ಪ ವಿಶ್ರಾಂತಿಗೂ ಸಮಯ ಕೊಡುವುದಿಲ್ಲ. ಕಾಡು ಹರಟೆಯಿಂದ ಅವರಿಗೆ ತೊಂದರೆ ಕೊಡುವೆವು. ಸಂಜೆ ಅವರನ್ನು ಬೀಳ್ಕೊಟ್ಟೆ.

ಒಂದು ರಾತ್ರಿ ನಾನು ಶ್ರೀಮಾತೆಯನ್ನು ಕಂಡೆ. ಹಾಸಿಗೆಯ

ಮೇಲೆ ಅವರು ಮಲಗಿದ್ದರು. ಮತ್ತೊಬ್ಬ ಹೆಂಗಸು ಅವರ ಪಕ್ಕದಲ್ಲಿದ್ದರು. ನಾನು ಅವರಿಗೆ ನಮಿಸಲು ಅನುಕೂಲವಾಗುವುದಕ್ಕೆ ಅವರು ತಕ್ಷಣ ಎದ್ದು ಕುಳಿತರು. ಮಾತನಾಡುವಾಗ, "ಸೃಷ್ಟಿಯ ಸಮಯದಲ್ಲಿ ಜನ ಸಾತ್ತ್ವಿಕರಾಗಿದ್ದರು. ಬಾಲ್ಯದಿಂದಲೇ ಜ್ಞಾನವಿತ್ತು. ಮೊದಲೇ ಪ್ರಪಂಚ ಸುಳ್ಳೆಂದು ಗೊತ್ತಾಗುತ್ತಿತ್ತು. ಪ್ರಪಂಚವನ್ನು ತ್ಯಜಿಸಿ ತಪಸ್ಸಿನಲ್ಲಿ ನಿರತರಾದರು. ಬೇಗ ಮುಕ್ತರಾದರು. ಬ್ರಹ್ಮ ತನ್ನ ಸೃಷ್ಟಿ ಇದರಿಂದ ಮುಂದೆ ಸಾಗುವುದಿಲ್ಲವೆಂದು ಕಂಡ. ಮುಕ್ತ ಜೀವಿಗಳಿಂದ ಪ್ರಪಂಚದ ಆಟಕ್ಕೆ ಪ್ರಯೋಜನವಾಗಲಿಲ್ಲ. ಪುನಃ ಸತ್ತ್ವದೊಂದಿಗೆ ರಜಸ್ಸು ತಮಸ್ಸನ್ನು ಮಿಶ್ರಮಾಡಿ ಪ್ರಜೆಗಳನ್ನು ಸೃಷ್ಟಿಸಿದ. ಇದರಿಂದ ಅವನ ಇಚ್ಛೆ ಈಡೇರಿತು." ಸೃಷ್ಟಿಗೆ ಸಂಬಂಧಪಟ್ಟ ಒಂದು ನುಡಿಯನ್ನು ಹೇಳಿ, "ಬಾಲ್ಯದಲ್ಲಿ ಹಳ್ಳಿ ನಾಟಕದಿಂದ ಇವನ್ನು ಕಲಿಯುತ್ತಿದ್ದೆವು. ಈಗ ಅವೆಲ್ಲ ಅಪರೂಪವಾಗಿವೆ" ಎಂದರು.

ಶ್ರೀಮಾತೆಯ ಕೆಲವು ಬಂಧು ಬಾಲಿಕೆಯರು ಪಕ್ಕದ ಕೋಣೆಯಲ್ಲಿ ಗಟ್ಟಿಯಾಗಿ ಓದುತ್ತಿದ್ದರು. "ಕೇಳು, ಅವರು ಎಷ್ಟು ಗಟ್ಟಿಯಾಗಿ ಓದುತ್ತಿರುವರು! ಕೆಳಗೆ ಜನರಿರುವರೆಂಬುದು ಅವರಿಗೆ ತಿಳಿಯುವುದೇ ಇಲ್ಲ." ರಾಧೆಯ ತಾಯಿ, ಶ್ರೀಮಾತೆಯವರ ಅತ್ತಿಗೆ. ಆಕೆ ಕೋಣೆಯೊಳಗೆ ಬಂದು, "ಲಕ್ಷ್ಮೀದೇವಿ ನವದ್ವೀಪದ ಯಾತ್ರೆಗೆ ಹೋಗುವಳು. ನಾನೂ ಅವಳೊಂದಿಗೆ ಹೋಗಬೇಕೆಂದಿದ್ದೆ. ಆದರೆ ನೀವು ಅದಕ್ಕೆ ಅಡ್ಡ ಬಂದಿರಿ" ಎಂದು ಹೇಳಿ ಅಸಮಾಧಾನದಿಂದ ಹೊರಗೆ ಹೊರಟಳು. ಶ್ರೀಮಾತೆ, "ಲಕ್ಷ್ಮಿಯೊಂದಿಗೆ ಹೋಗುವುದಕ್ಕೆ ಹೇಗೆ ಅಪ್ಪಣೆಕೊಡುವುದು? ಲಕ್ಷ್ಮೀದೇವಿ ಭಕ್ತಳು. ಇತರ ಭಕ್ತರೊಂದಿಗೆ ಹಾಡಿ ಕುಣಿಯುವಳು. ಜಾತಿ ಪದ್ಧತಿಯನ್ನು ಗಮನಿಸುವುದಿಲ್ಲ. ಇತರರೊಡನೆ ಊಟ ಮಾಡುವಳು. ಆದರೆ ರಾಧಾ ತಾಯಿಗೆ ಇದು ಗೊತ್ತಿಲ್ಲ. ಭಕ್ತರು ಈ ಪದ್ಧತಿಯನ್ನು ಅನುಸರಿಸಬೇಕಾಗಿಲ್ಲ ಎನ್ನುವುದು ಇವರಿಗೆ ಗೊತ್ತಿಲ್ಲ. ಅಲ್ಲಿಂದ ಬಂದಾದಮೇಲೆ ಇತರರೆದುರಿಗೆ ಲಕ್ಷ್ಮಿಯನ್ನು ಅಲ್ಲಗಳೆಯುವಳು. ನೀನು ಲಕ್ಷ್ಮಿಯನ್ನು ನೋಡಿರುವೆಯ?"

ಭಕ್ತೆ:– ಇಲ್ಲ ತಾಯಿ.

ಶ್ರೀಮಾತೆ:– ಅವಳು ದಕ್ಷಿಣೇಶ್ವರದಲ್ಲಿರುವಳು. ಒಂದು ದಿನ ಅಲ್ಲಿಗೆ ಹೋಗು. ನೀನು ದಕ್ಷಿಣೇಶ್ವರಕ್ಕೆ ಹೋಗಿರುವೆಯ?

ಭಕ್ತೆ:– ಹೌದು ತಾಯಿ, ಎಷ್ಟೋ ವೇಳೆ ನಾನು ಹೋಗಿರುವೆನು ಅವರು ಅಲ್ಲಿರುವರೆಂದು ನನಗೆ ಗೊತ್ತೇ ಇರಲಿಲ್ಲ.

ಶ್ರೀಮಾತೆ:– ನಾನು ಅಲ್ಲಿದ್ದ ನಹಬತ್‌ಖಾನೆಯನ್ನು ನೋಡಿರುವೆಯ ?

ಭಕ್ತೆ:– ಹೌದು, ನಾನು ಅದನ್ನು ಹೊರಗಿನಿಂದ ನೋಡಿರುವೆ.

ಶ್ರೀಮಾತೆ:– ನೀನು ಇನ್ನೊಂದು ದಿನ ಅಲ್ಲಿಗೆ ಹೋದರೆ ಒಳಗೆ ಹೋಗು. ನಾನು ಅಲ್ಲಿದ್ದಾಗ ನನ್ನ ಪ್ರಪಂಚವೆಲ್ಲ ಆ ಒಂದು ಕೋಣೆಯಾಗಿತ್ತು. ನೀನು ಬೇಲೂರಿನಲ್ಲಿ ಶ್ರೀರಾಮಕೃಷ್ಣರ ಜಯಂತಿ ಉತ್ಸವವನ್ನು ನೋಡಿರುವೆಯ?

ಭಕ್ತೆ:– ಇಲ್ಲ ತಾಯಿ. ನಾನೆಂದೂ ಬೇಲೂರು ಮಠಕ್ಕೆ ಹೋಗಿಲ್ಲ. ಅಲ್ಲಿರುವ ಸನ್ಯಾಸಿಗಳಿಗೆ ಹೆಂಗಸರ ದೊಡ್ಡ ತಂಡ ಮಠಕ್ಕೆ ಬರುವುದು ಹಿಡಿಸುವುದಿಲ್ಲ. ಅದಕ್ಕೆ ಅಲ್ಲಿ ಹೋಗುವುದಕ್ಕೆ ಅನುಮಾನಿಸುತ್ತೇನೆ.

ಶ್ರೀಮಾತೆ:–ಒಮ್ಮೆ ಅಲ್ಲಿಗೆ ಹೋಗಿ ಶ್ರೀರಾಮಕೃಷ್ಣರ ಜಯಂತ್ಯುತ್ಸವವನ್ನು ನೋಡು.

ಶ್ರೀಮಾತೆಯ ದರ್ಶನಕ್ಕೆ ಬಾಗ್ ಬಜಾರಿಗೆ ಹೋದಾಗ ಸಂಜೆಯಾಗಿತ್ತು. ಅವರ ಸಣ್ಣ ಚಾಪೆಯನ್ನು ಅಂಗಳದಲ್ಲಿ ಹಾಸಿ, ಜಪಮಾಲೆಯನ್ನು ತರಲು ಹೇಳಿದರು. ನಂತರ ಅವರು ಧ್ಯಾನಾಸಕ್ತರಾದರು. ಬೀದಿಯ ಎದುರಿಗೆ ಬಯಲಿತ್ತು. ಅಲ್ಲಿ ಕೆಲವು ಕೂಲಿಗಳು ಸಂಸಾರ ಸಮೇತ ಇದ್ದರು. ಒಬ್ಬ ಗಂಡನು ಹೆಂಗಸೊಬ್ಬಳನ್ನು ಹೊಡೆದನು. ಬಹುಶಃ ಅವಳು ಅವನ ಹೆಂಡತಿ. ಗುದ್ದಿನ ಮಳೆಯನ್ನೇ ಅವಳ ಮೇಲೆ ಕರೆದನು. ಅವಳನ್ನು ಒಂದು ಸಲ ಕಾಲಿನಿಂದ ಒದೆದನು. ಆ ಸ್ತ್ರೀ, ಅವಳ ಮಗುವಿನೊಡನೆ ಹಾರಿಬಿದ್ದಳು. ಪುನಃ ಅವಳನ್ನು ಒದೆಯಲು ಶುರುಮಾಡಿದನು. ಶ್ರೀಮಾತೆಗೆ ಇನ್ನು ಧ್ಯಾನಮಾಡಲು ಆಗಲಿಲ್ಲ. ಸಾಧಾರಣವಾಗಿ ಅವರದು ನಾಚಿಕೆ ಸ್ವಭಾವ, ಮಾತನಾಡಿದರೆ ಕೆಳಗೆ ಇರುವವರಿಗೂ ಕೇಳಿಸುತ್ತಿರಲಿಲ್ಲ. ಆದರೆ ಇಂದು ಮಹಡಿಯ ಕೊನೆಗೆ ಬಂದು, ಆ ಮನುಷ್ಯನನ್ನು ಗದರಿಸಿದರು. "ಮೂಢ! ಆ ಹುಡುಗಿಯನ್ನು ಕೊಲ್ಲುತ್ತೀಯೇನು? ಅಯ್ಯೋ ಪಾಪ! ಆಗಲೇ ಅವಳು ಸತ್ತಳೋ ಏನೊ!" ಆ ಮನುಷ್ಯ ಶ್ರೀಮಾತೆಯನ್ನು ಕಂಡೊಡನೆಯೆ ಮಂತ್ರವಾದಿ ಎದುರಿಗೆ ಹಾವಿನಂತೆ ತೆಪ್ಪಗಾದನು. ಹೆಂಗಸಿಗೆ ಹೊಡೆ

ಯುವುದನ್ನು ಬಿಟ್ಟನು. ಶ್ರೀಮಾತೆಯವರು ತೋರಿಸಿದ ಸಹಾನುಭೂತಿಯಿಂದ ಆ ಹೆಂಗಸು ಬಿಕ್ಕಿ ಬಿಕ್ಕಿ ಅತ್ತಳು. ಅವಳ ತಪ್ಪು, ಹೊತ್ತಿಗೆ ಸರಿಯಾಗಿ ಅಡಿಗೆ ಮಾಡದೆ ಇದ್ದುದು ಮಾತ್ರ. ಅನಂತರ ಆ ಮನುಷ್ಯ ಶಾಂತನಾದನು. ಇದನ್ನು ನೋಡಿ ಶ್ರೀಮಾತೆ ಹಿಂತಿರುಗಿದರು.

ಸ್ವಲ್ಪ ಹೊತ್ತಾದಮೇಲೆ ಭಿಕ್ಷುಕನೊಬ್ಬನು ದಾರಿಯಲ್ಲಿ ಕೂಗುತ್ತಿದ್ದುದು ಕೇಳಿಸಿತು. "ಜೈ! ರಾಧಾ ಗೋವಿಂದ. ಭಿಕ್ಷುಕನಿಗೆ ದಯೆ ತೋರಿ" ಎಂದು ಅರಚುತ್ತಿದ್ದನು. ಶ್ರೀಮಾತೆ, "ಈತ ಪ್ರತಿ ದಿನ ರಾತ್ರಿ ಈ ಬೀದಿಯಲ್ಲಿ ಹೋಗುವನು. ಮೊದಲು, "ದಯವಿಟ್ಟು ಕರುಣೆ ತೋರಿ, ಕುರುಡನಿಗೆ" ಎಂದು ಮಾತ್ರ ಹೇಳುತ್ತಿದ್ದನು. ಒಂದು ದಿನ ಗುಲಾಬ್‌ಮಾ ಅವನಿಗೆ, "ಜೈ ಕಾಳಿ, ಜೈ ರಾಧಾ ಗೋವಿಂದ ಎಂದು ಸೇರಿಸು. ದೇವರ ಹೆಸರನ್ನು ನೀನು ಉಚ್ಚರಿಸಿದಂತೆ ಆಗುವುದು. ಜತೆಗೆ ಗೃಹಸ್ಥರಿಗೆ ದೇವರನ್ನು ಜ್ಞಾಪಿಸಿದಂತೆಯೂ ಆಗುವುದು. ಇಲ್ಲದೆ ಇದ್ದರೆ ದಿನವೆಲ್ಲ ನೀನು ನಿನ್ನ ಕುರುಡುತನವನ್ನೊಂದನ್ನೇ ಆಲೋಚಿಸುತ್ತಿರುವೆ" ಎಂದಳು. ಅಂದಿನಿಂದ ಇವನು ದೇವರ ಹೆಸರನ್ನು ಹೇಳುವನು. ಗುಲಾಬ್‌ಮಾ ಅವನಿಗೆ ಒಂದು ಪಂಚೆ ಕೊಟ್ಟಳು. ' ಇತರರೂ ಅವನಿಗೆ ಭಿಕ್ಷೆ ಕೊಡುವರು."

ಒಂದು ದಿನ ಸಂಜೆ ಬಾಗ್ ಬಜಾರಿಗೆ ಹೋದೆ. ಶ್ರೀಮಾತೆ, "ಹೊಸ ಭಕ್ತರಿಗೆ ಪೂಜೆ ಮಾಡುವ ಅವಕಾಶವನ್ನು ಕೊಡಬೇಕು. ಅವರು ಹೊಸ ಭಕ್ತಿಯಿಂದ ಚೆನ್ನಾಗಿ ಪೂಜೆ ಮಾಡುವರು. ಇತರರಿಗೆ ಸಾಕಾಗಿರುತ್ತದೆ. ನಿಜವಾದ ಸೇವೆ ಅಷ್ಟು ಸುಲಭವಲ್ಲ. ಅವರ ಸೇವೆಯಲ್ಲಿ ಸ್ವಲ್ಪವೂ ಕಳಂಕವಿರಕೂಡದು. ಸತ್ಯಾಂಶವೇನೆಂದರೆ, ದೇವರಿಗೆ ನಮ್ಮ ಲೋಪದೋಷಗಳು ಗೊತ್ತಿದೆ. ಅವನು ಅದನ್ನು ಕ್ಷಮಿಸುವನು." ಒಬ್ಬ ಗೃಹಿಣೀ ಭಕ್ತಳು ಅವರ ಸಮೀಪದಲ್ಲಿದ್ದಳು. ಈ ಬುದ್ಧಿವಾದ ಆಕೆಗೇನೋ, ನನಗೆ ಗೊತ್ತಿಲ್ಲ. "ಒಳ್ಳೆ ಹೂವನ್ನು ಪೂಜೆಗೆ ಕೀಳಬೇಕು. ಚಂದನ ಚೆನ್ನಾಗಿ ಮಾಡಬೇಕು. ದೇವರ ಮನೆಯಲ್ಲಿ ಕೆಲಸಮಾಡುವಾಗ ನಮ್ಮ ದೇಹದ ಯಾವ ಭಾಗವನ್ನಾಗಲೀ, ಬಟ್ಟೆ ಬರೆಯನ್ನಾಗಲೀ, ಮುಟ್ಟಕೂಡದು. ಬಹಳ ದಕ್ಷತೆಯಿಂದ ದೇವರ ಮನೆಯಲ್ಲಿ ಕೆಲಸಮಾಡಬೇಕು. ಸರಿಯಾದ ಕಾಲದಲ್ಲಿ ನೈವೇದ್ಯ ಮುಂತಾದುವನ್ನು ಮಾಡಬೇಕು" ಎಂದರು.

ಶ್ರೀಮಾತೆ ದರ್ಶನಕ್ಕೆ ಬಂದಾಗ ಸಂಜೆ ಎಂಟೂವರೆ ಗಂಟೆಯಾಗಿತ್ತು. ಅವರು ದೇವರ ಮನೆ ಉತ್ತರದಲ್ಲಿ ಧ್ಯಾನಾಸಕ್ತರಾಗಿದ್ದರು. ನಾವು ಬೇರೊಂದು ಕೋಣೆಯಲ್ಲಿ ಅವರಿಗೆ ಕಾದೆವು. ಶ್ರೀಮಾತೆ ಬಂದರು. ಸಂತೋಷದಿಂದ, "ಮಗು ನಿನ್ನನ್ನು ನೋಡಿ ಸಂತೋಷ" ಎಂದರು.

ಭಕ್ತೆ :– ನನ್ನ ಸಹೋದರಿಯನ್ನು ಕರೆದುಕೊಂಡು ಬಂದಿರುವೆನು. ಆಗಲೆ ಮಂಗಳಾರತಿ ಆಯಿತೆ?

ಶ್ರೀಮಾತೆ:– ಇಲ್ಲ. ಈಗ ನೀನು ಅದನ್ನು ನೋಡಬಹುದು. ನಾನು ಬೇಗ ಬರುತ್ತೇನೆ.

ಮಂಗಳಾರತಿ ಬೇಗ ಪ್ರಾರಂಭವಾಯಿತು. ಹಲವು ಗೃಹಿಣೀ ಭಕ್ತರು ದೇವರ ಮನೆಯಲ್ಲಿ ಪ್ರಾರ್ಥನೆಗೆ ಕುಳಿತರು. ಪೂಜೆ ನಂತರ ವಿಗ್ರಹಕ್ಕೆ ನಮಸ್ಕಾರಮಾಡಿ, ಶ್ರೀಮಾತೆಯ ಬಳಿಗೆ ಬಂದೆವು. ನಾವು ಅಲ್ಲಿದ್ದಾಗ ಒಂದು ಕ್ಷಣವೂ ಅವರಿಂದ ಕಣ್ಮರೆಯಾಗಲು ಇಚ್ಛಿಸಲಿಲ್ಲ.

ಕೆಲವು ಕಾಲದ ಮೇಲೆ ಶ್ರೀಮಾತೆ ಕೋಣೆಗೆ ಬಂದರು. ಒಬ್ಬ ವೃದ್ಧೆಳು ಮತ್ತೊಬ್ಬಳಿಂದ ಹಾಡನ್ನು ಕಲಿಯುತ್ತಿದ್ದಳು. ಶ್ರೀಮಾತೆ ಹೇಳಿದರು : "ಆಕೆ ಸರಿಯಾಗಿ ಹಾಡು ಹೇಳಿಕೊಡಲಾರಳೆಂದು ತೋರುವುದು. ಶ್ರೀ ಗುರುದೇವರು ಎಷ್ಟು ಸುಂದರವಾಗಿ ಹಾಡುತ್ತಿದ್ದರು! ಅವರ ಧ್ವನಿ ಎಷ್ಟು ಇಂಪಾಗಿತ್ತು! ಹಾಡುವಾಗ ಅದರಲ್ಲೇ ತನ್ಮಯರಾಗುತ್ತಿದ್ದರು. ಅವರ ಧ್ವನಿ ಇನ್ನೂ ನನ್ನ ಕಿವಿಯಲ್ಲಿ ಅನುರಣಿತವಾಗುತ್ತಿದೆ. ಅದನ್ನು ನೆನಸಿಕೊಂಡಾಗ ಇತರರ ಧ್ವನಿ ಸಪ್ಪೆಯಾಗುವುದು. ನರೇಂದ್ರನಿಗೂ ಧ್ವನಿ ಚೆನ್ನಾಗಿತ್ತು. ಇಂಡಿಯಾ ದೇಶವನ್ನು ಬಿಡುವುದಕ್ಕೆ ಮುಂಚೆ ಅವನು ಬಂದು ನನ್ನೆದುರಿಗೆ ಹಾಡಿದನು. 'ತಾಯಿ, ನಿಜವಾಗಿ ನಾನು ಪುರುಷ ಸಿಂಹನಂತೆ ಹಿಂತಿರುಗಿದರೆ ಪುನಃ ನಿಮ್ಮ ದರ್ಶನವನ್ನು ಪಡೆಯುವೆನು. ಇಲ್ಲದಿದ್ದರೆ ಇದೇ ಕೊನೆ' ಎಂದನು. 'ಏನು ಮಗು, ಹಾಗೆನ್ನುವಿಯಲ್ಲ?' ಎಂದೆ. 'ಆಗಲಿ, ನಿಮ್ಮ ದಯೆಯಿಂದ ಪುನಃ ಬರುವೆನು' ಎಂದನು. ಗಿರೀಶಬಾಬುವಿಗೂ ಧ್ವನಿ ಚೆನ್ನಾಗಿತ್ತು."

ರಾಧು ಕೋಣೆಗೆ ಬಂದು ಶ್ರೀಮಾತೆಗೆ ತನ್ನ ಸಮೀಪದಲ್ಲಿ ಬಂದು ಮಲಗಿಕೊಳ್ಳುವಂತೆ ಹೇಳಿದಳು. ಶ್ರೀಮಾತೆ, "ನೀನು ಹೋಗಿ ಮಲಗಿಕೊ. ಈ ಭಕ್ತರು ಎಷ್ಟು ದೂರದಿಂದ ಬಂದಿರುವರು. ನಾನು

ಅವರ ಹತ್ತಿರ ಸ್ವಲ್ಪ ಮಾತನಾಡಬೇಕು" ಎಂದರು. ಆದರೆ ರಾಧೆ ಬಿಡಲಿಲ್ಲ. "ನಾವೂ ನಿಮ್ಮ ಕೋಣೆಗೆ ಹೋಗೋಣ ಅಲ್ಲೆ ಕುಳಿತು ಕೊಳ್ಳೋಣ" ಎಂದೆ. ಶ್ರೀಮಾತೆ ನಮಗೂ ಬರುವಂತೆ ಹೇಳಿದರು. ಶ್ರೀಮಾತೆ ಹಾಸಿಗೆಯ ಮೇಲೆ ಮಲಗಿಕೊಂಡು ಹಲವು ವಿಷಯಗಳನ್ನು ಹೇಳಿದರು. ನಾನು ಅವರಿಗೆ ಗಾಳಿ ಬೀಸುತ್ತಿದ್ದೆ. "ಈಗ ತಂಪಾಗಿದೆ. ಇನ್ನು ಬೀಸಬೇಡ" ಎಂದರು. ಅವರ ಕಾಲನ್ನು ಒತ್ತಿದೆ. ಒಬ್ಬ ವೃದ್ಧೆ ಮತ್ತೊಬ್ಬ ಸ್ತ್ರೀಗೆ, ರಾಜಯೋಗದಲ್ಲಿ ಬರುವ ಆರು ಚಕ್ರಗಳನ್ನು ವಿವರಿಸಿ ಹೇಳುತ್ತಿದ್ದಳು. ಗುಲಾಬ್‌ಮಾ ಬೇಡವೆಂದಳು. ಆದರೂ ಆಕೆ ಕೇಳಲಿಲ್ಲ. ಶ್ರೀಮಾತೆ ಆಕೆಯ ಮಾತನ್ನು ಕೇಳಿ, "ಶ್ರೀ ಪರಮ ಹಂಸರೇ ತಮ್ಮ ಕೈಯಿಂದ ಕುಂಡಲಿನಿ ಚಿತ್ರವನ್ನು ಬರೆದು, ಚಕ್ರಗ ಳನ್ನು ನನಗೆ ವಿವರಿಸಿದರು" ಎಂದರು. "ನಿಮ್ಮ ಹತ್ತಿರ ಆ ಚಿತ್ರಗಳು ಇನ್ನೂ ಇವೆಯೆ?" ಎಂದು ಕೇಳಿದೆ. "ಇಲ್ಲ ಮಗು. ಆಗ, ಮುಂದೆ ಭಕ್ತರು ಬರುವರು ಎಂದು ನನಗೆ ಗೊತ್ತಿರಲಿಲ್ಲ. ಎಲ್ಲೊ ಕಳೆದು ಹೋಯಿತು" ಎಂದರು.

ರಾತ್ರಿ ಹನ್ನೊಂದು ಗಂಟೆ. ನಾವು ಅವರಿಗೆ ನಮಸ್ಕರಿಸಿ ಹೊರ ಟೆವು. ಶ್ರೀಮಾತೆ ಹಾಸಿಗೆಯ ಮೇಲೆ ಕುಳಿತು ನಮ್ಮನ್ನು ಆಶೀರ್ವದಿ ಸಿದರು. ಅವರು ನನ್ನನ್ನು ಆಚೆ ಕಡೆ ಕರೆದು, "ಸತಿಪತಿಗಳಿಬ್ಬರೂ ಒಂದೇ ಮನಸ್ಸಿನವರಾದರೆ ಸಾಧನೆ ಸುಲಭವಾಗುವುದು" ಎಂದರು.

ಕೆಲವು ದಿನಗಳಾದಮೇಲೆ ನಾನು ಶ್ರೀಮಾತೆ ದರ್ಶನ ಪಡೆದಾಗ, "ಒಬ್ಬ ತನ್ನ ಗುರುವಿಗೂ ಕೂಡ, ಯಾವುದು ಸರಿಯೊ ಅದನ್ನು ಹೇಳ ಬೇಕು. ಹಾಗೆ ಮಾಡುವುದು ಶಿಷ್ಯನಿಗೆ ಸರಿ. ಆದರೆ ಶಿಷ್ಯನಿಗೆ ಗುರುವಿ ನಲ್ಲಿ ಅಚಲ ಶ್ರದ್ಧೆ ಇರಬೇಕು. ಗುರು ಹೇಗಾದರೂ ಇರಲಿ, ಅವನ ಮೇಲೆ ಇಡುವ ಭಕ್ತಿಯಿಂದ ಮೋಕ್ಷ ದೊರಕುವುದು. ಶ್ರೀರಾಮ ಕೃಷ್ಣರ ಶಿಷ್ಯರಲ್ಲಿ ಅವರಿಗೆ ಗುರುವಿನ ಮೇಲಿದ್ದ ಶ್ರದ್ಧೆಯನ್ನು ನೋಡು. ಈ ಗುರು ಭಕ್ತಿಯಿಂದ, ಶ್ರೀರಾಮಕೃಷ್ಣರಿಗೆ ಸಂಬಂಧಿಸಿರುವ ಎಲ್ಲರನ್ನೂ ಪ್ರೀತಿಸುವುದಕ್ಕೆ ಅವರಿಗೆ ಸಾಧ್ಯವಾಗುವುದು. ಶ್ರೀರಾಮಕೃಷ್ಣರ ಹಳ್ಳಿಗೆ ಸೇರಿದ ಬೆಕ್ಕನ್ನು ಕೂಡ ಪ್ರೀತಿಸುವರು" ಎಂದರು.

ನವಂಬರ್, ೧೯೧೩.

ಬಾಲಿಗಂಜಿನ ನಮ್ಮ ಮನೆಯಲ್ಲಿ ಬೇಕಾದಷ್ಟು ಹೂವು ಬಿಟ್ಟಿತ್ತು.

ಶ್ರೀಮಾತೆಗೆ ಯಾವಾಗಲೂ ಹೂ ಕಂಡರೆ ಇಷ್ಟ. ಒಂದು ದಿನ ನಾನು ತುಂಬಾ ಹೂವನ್ನು ಸಂಗ್ರಹಿಸಿ, ಶ್ರೀಮಾತೆಯ ದರ್ಶನಕ್ಕೆ ಬಂದೆ. ಅವರು ಆಗ ಪೂಜೆಗೆ ಸಿದ್ಧವಾಗುತ್ತಿದ್ದರು. ನಾನು ಹೂವನ್ನು ಅಣಿ ಮಾಡಿದೆ. ಅವರು ದೇವರೆದುರಿಗೆ ಆಸನದ ಮೇಲೆ ಕುಳಿತರು. ಶ್ರೀಮಾತೆ ಚರಣಕಮಲಗಳನ್ನು ಪೂಜಿಸಲು ಸ್ವಲ್ಪ ಹೂಗಳನ್ನು ಬೇರೆ ತೆಗೆದಿಡುವುದನ್ನು ಮರೆತೆ. ಅಂದು ಅವರನ್ನು ಪೂಜಿಸಲು ಸಾಧ್ಯವಾಗುವುದಿಲ್ಲ ಎಂದು ವ್ಯಥೆ ಪಟ್ಟೆ. ಆದರೆ ನನ್ನ ಮನದ ಇಚ್ಛೆ ಅವರಿಗೆ ತಿಳಿದಿತ್ತು. ಅವರೇ ತಟ್ಟೆಯಲ್ಲಿ ಬೇರೆ ಸ್ವಲ್ಪ ಹೂವನ್ನು ಇಟ್ಟಿದ್ದರು. ಪೂಜೆ ಆದಮೇಲೆ ನನಗೆ, ''ಮಗು, ನಿನಗಾಗಿ ತಟ್ಟೆಯಲ್ಲಿ ಹೂವನ್ನು ಇಟ್ಟಿರುವೆನು. ಅದನ್ನು ತಾ'' ಎಂದರು. ಆಗತಾನೇ ಒಬ್ಬ ಭಕ್ತ ಬೇಕಾದಷ್ಟು ಹಣ್ಣನ್ನು ತಂದಿದ್ದನು. ಅವನನ್ನು ನೋಡಿ ಶ್ರೀಮಾತೆಗೆ ಸಂತೋಷವಾಯಿತು. ಅವನ ಹಣೆಗೆ ಚಂದನವನ್ನು ಇಟ್ಟು ಗಲ್ಲವನ್ನು ಮುತ್ತಿಟ್ಟರು. ಹೀಗೆ ಅವರು ಭಕ್ತರಲ್ಲಿ ಪ್ರೀತಿಯನ್ನು ವ್ಯಕ್ತಪಡಿಸುವುದನ್ನು ನಾನೆಂದೂ ಹಿಂದೆ ಕಂಡಿರಲಿಲ್ಲ. ಸ್ವಲ್ಪ ಹೂವನ್ನು ಆ ಭಕ್ತನಿಗೂ ಕೊಡುವಂತೆ ಹೇಳಿದರು. ಆತ ಅದನ್ನು ಸ್ವೀಕರಿಸಿದನು. ಆತನ ದೇಹಾದ್ಯಂತವೂ ಭಕ್ತಿಯಿಂದ ಕಂಪಿಸುತ್ತಿತ್ತು. ಅತಿ ಉತ್ಸಾಹದಿಂದ ಅವನ್ನು ಶ್ರೀಮಾತೆಯ ಅಡಿದಾವರೆಗೆ ಅರ್ಪಿಸಿ, ಪ್ರಸಾದವನ್ನು ಸ್ವೀಕರಿಸಿ, ಹಿಂದಿರುಗಿದನು. ಮಂಚದಮೇಲೆ ಕುಳಿತುಕೊಂಡು ನನ್ನನ್ನು ಹತ್ತಿರ ಕರೆದರು. ನಾನು ಅವರ ಪಾದವನ್ನು ಪೂಜಿಸಿದೆ. ಬಹಳ ಪ್ರೀತಿಯಿಂದ ಅವರು ತಮ್ಮ ಕರಗಳನ್ನು ನನ್ನ ತಲೆಯ ಮೇಲೆ ಇಟ್ಟು ಮುತ್ತಿಟ್ಟರು. ಅವರ ಆಶೀರ್ವಾದದಿಂದ ನಾನು ಧನ್ಯಳಾದೆ.

ಸ್ವಲ್ಪ ಹೊತ್ತಾದಮೇಲೆ ಮನೆ ಅಂಗಳದಲ್ಲಿ ತಮ್ಮ ಕೇಶರಾಶಿಯನ್ನು ಒಣಗಿಸಿಕೊಳ್ಳುತ್ತಿದ್ದರು. ನನ್ನನ್ನು ಹತ್ತಿರ ಕರೆದು, ''ನಿನ್ನ ಮುಸುಕನ್ನು ತೆಗೆದು ತಲೆ ಒಣಗಿಸಿಕೊ ಇಲ್ಲದಿದ್ದರೆ ನಿನ್ನ ಆರೋಗ್ಯ ಕೆಡಬಹುದು'' ಎಂದರು. ಗುಲಾಬ್‌ಮಾ ಮೇಲೆ ಬಂದು ಶ್ರೀಮಾತೆಗೆ, ''ದೇವರಿಗೆ ನೈವೇದ್ಯವನ್ನು ಅರ್ಪಿಸಬೇಕು'' ಎಂದು ಕೇಳಿಕೊಂಡರು. ಶ್ರೀಮಾತೆ ಕೆಳಗೆ ಇಳಿದರು. ನಾನೂ ಸ್ವಲ್ಪ ಹೊತ್ತಾದಮೇಲೆ ಅಲ್ಲಿಗೆ ಬಂದೆ. ಒಬ್ಬ ಲಜ್ಜಾನ್ವಿತ ತರುಣ ಸತಿಯಂತೆ ಶ್ರೀರಾಮಕೃಷ್ಣರಿಗೆ, ''ಬನ್ನಿ, ನಿಮ್ಮ ಊಟ ಅಣಿಯಾಗಿದೆ'' ಎಂದರು. ಬಾಲಗೋ

ಪಾಲನ ವಿಗ್ರಹದ ಹತ್ತಿರಕ್ಕೆ ಬಂದು, "ಓ ಮಗು, ಗೋಪಾಲ, ಬಾ ನಿನ್ನ ಊಟಕ್ಕೆ" ಎಂದರು. ನಾನು ಅವರ ಹಿಂದೆ ಇದ್ದೆ. ತಕ್ಷಣ ಅವರು ನನ್ನನ್ನು ನೋಡಿ, "ಇವರನ್ನೆಲ್ಲಾ ಮಧ್ಯಾಹ್ನದ ಊಟಕ್ಕೆ ಕರೆಯು ತ್ತಿದ್ದೆ" ಎಂದು ಮಂದಹಾಸದಿಂದ ಹೇಳಿ, ಅವರು ನೈವೇದ್ಯ ವಿಡುವ ಮನೆಗೆ ಹೋದರು. ಅವರ ಶ್ರದ್ಧೆ ಭಕ್ತಿಗೆ ದೇವತೆಗಳು ಬಂದು ಅವರ ಹಿಂದೆಯೇ ಊಟಕ್ಕೆ ಹೋದಂತೆ ಇತ್ತು! ಇದನ್ನು ನೋಡಿ ನಾನು ಆಶ್ಚರ್ಯದಿಂದ ಸ್ತಬ್ಧಳಾದೆ!

ನೈವೇದ್ಯವಾದಮೇಲೆ ಎಲ್ಲಾ ಒಟ್ಟಿಗೆ ಊಟಕ್ಕೆ ಕುಳಿತೆವು. ಸ್ವಲ್ಪ ವಿಶ್ರಮಿಸಿಕೊಳ್ಳುವಂತೆ ಹೇಳಿದರು. ಒಬ್ಬ ಹಣ್ಣಿನ ಬುಟ್ಟಿಯನ್ನು ತಂದನು. ಹಣ್ಣು ನೈವೇದ್ಯಕ್ಕಾಗಿ. ಆ ಹಣ್ಣನ್ನು ಕೊಟ್ಟಾದ ಮೇಲೆ ಆ ಬುಟ್ಟಿ ಯನ್ನು ಏನು ಮಾಡಲಿ ಎಂದು ಆತನು ಸನ್ಯಾಸಿಗಳನ್ನು ಕೇಳಿದನು. ಅದನ್ನು ಬೀದಿಯಲ್ಲಿ ಬಿಸಾಡೆಂದು ಅವರು ಹೇಳಿದರು. ಶ್ರೀಮಾತೆ ಹಾಸಿಗೆ ಯಿಂದ ಎದ್ದು, ಮಹಡಿ ಅಂಚಿಗೆ ಬಂದು, "ನೋಡು, ಎಷ್ಟು ಚೆನ್ನಾದ ಬುಟ್ಟಿಯನ್ನು ಬಿಸಾಡುವಂತೆ ಹೇಳಿದರು! ಅವರಿಗೆ ಇದರ ಯೋಚ ನೆಯೇ ಇಲ್ಲ. ಎಲ್ಲಾ ಸನ್ಯಾಸಿಗಳು, ನಿರ್ಲಿಪ್ತರು. ಆದರೆ ನಾವು ಹೀಗೆ ಅದನ್ನು ಪೋಲುಮಾಡಕೂಡದು. ನಾವು ಅದರಲ್ಲಿ ತರಕಾರಿ ಸಿಪ್ಪೆಯನ್ನಾ ದರೂ ಹಾಕಬಹುದಾಗಿತ್ತು" ಎಂದರು. ಆ ಬುಟ್ಟಿಯನ್ನು ತಂದು ತೊಳೆಯುವಂತೆ ಯಾರಿಗೋ ಹೇಳಿದರು. ನನಗೆ ಅವರ ಮಾತಿನಿಂದ ಅಂದು ಒಂದು ನೀತಿ ತಿಳಿಯಿತು. ಆದರೆ ಅದನ್ನು ಅನುಷ್ಠಾನಕ್ಕೆ ತರಲು ಅಷ್ಟು ನಿಧಾನ.

ಸ್ವಲ್ಪ ಹೊತ್ತಾದಮೇಲೆ ಭಿಕ್ಷುಕನೊಬ್ಬನು ಭಿಕ್ಷೆಗೆ ಬಂದನು. ಸನ್ಯಾಸಿಗಳಿಗೆ ಸ್ವಲ್ಪ ರೇಗಿ, "ಹೋಗು, ಈಗ ತೊಂದರೆ ಕೊಡಬೇಡ" ಎಂದರು. ಆ ಮಾತನ್ನು ಕೇಳಿ ಶ್ರೀಮಾತೆ, "ಕೇಳಿದೆಯಾ ಅವರು ಹೇಳಿದ್ದನ್ನು? ಪಾಪ ಆ ಬಡವನನ್ನು ಓಡಿಸಿದರು. ಅಷ್ಟು ಸೋಮಾರಿ ಗಳು. ಎದ್ದು ಅವನಿಗೇನಾದರೂ ಕೊಡಲು ಆಗಲಿಲ್ಲ ಅವರಿಗೆ. ಅವನಿಗೆ ಒಂದು ಮುಷ್ಟಿ ಅಕ್ಕಿ ಬೇಕಾಗಿತ್ತು, ಅಷ್ಟೆ. ಯಾರಿಗೆ ಏನು ಸೇರಬೇಕೊ ಅದನ್ನು ತಡೆಯುವುದು ಸರಿಯೆ. ಹಸುಗಳಿಗೂ ತರಕಾರಿಯ ಸಿಪ್ಪೆಯ ಮೇಲೆ ಅಧಿಕಾರವಿದೆ. ಅವನ್ನು ಅದರ ಬಾಯಿ ಹತ್ತಿರ ಇಡಬೇಕು" ಎಂದರು.

* * *

ಹಲವು ದಿನಗಳಾದ ಮೇಲೆ ಪುನಃ ನಾನು ಶ್ರೀಮಾತೆಯ ದರ್ಶನಕ್ಕೆ ಹೋದೆ, ಅವರು ತಮ್ಮ ಹಳ್ಳಿಯ ಮನೆಗೆ ಹೋಗಿದ್ದರು. ಶರತ್ಕಾಲ ದಲ್ಲಿ ದುರ್ಗಾ ಪೂಜೆಗೆ ಹಲವು ದಿನ ಮುಂಚೆ ಬಂದರು. ನಾನು ಒಂದು ದಿನ ಮಧ್ಯಾಹ್ನ ಹೋದಾಗ ಒಬ್ಬ ಸ್ತ್ರೀ ಅವರಿಗೆ ನಮಸ್ಕಾರಮಾಡುತ್ತಾ ಉಪದೇಶಮಾಡಬೇಕೆಂದು ಕೇಳಿಕೊಳ್ಳುತ್ತಿದ್ದಳು. ಅಂದು ಅದಕ್ಕೆ ಒಪ್ಪ ಲಿಲ್ಲ. "ನಾನಾಗಲೇ ಹೇಳಿರುವೆ. ಇಂದು ನನಗೆ ಆರೋಗ್ಯವಿಲ್ಲ. ಉಪದೇಶ ಕೊಡಲಾರೆ" ಎಂದರು. ಆದರೆ ಸ್ತ್ರೀ ಬಲಾತ್ಕರಿಸುತ್ತಿದ್ದಳು. ಶ್ರೀಮಾತೆಗೆ ಸ್ವಲ್ಪ ಅಸಮಾಧಾನವಾಯಿತು. "ನೀನು ಉಪದೇಶವನ್ನು ಬಹಳ ಲಘುವಾಗೆಣಿಸಿರುವೆ. ನಿನಗೆ ಮಂತ್ರ ಸಿಕ್ಕಿದರೆ ಸಾಕು. ಆದರೆ ಅದರ ಪರಿಣಾಮವನ್ನು ಕುರಿತು ಚಿಂತಿಸುವುದೇ ಇಲ್ಲ." ಆದರೆ ಹೆಂಗಸು ಬಿಡಲೇ ಇಲ್ಲ. ಅಲ್ಲಿದ್ದವರೆಲ್ಲರಿಗೂ ಬೇಜಾರಾಯಿತು. ಶ್ರೀಮಾತೆ ಕೊನೆಗೆ ಅವಳಿಗೆ ಮತ್ತೊಂದು ದಿನ ಬರುವಂತೆ ಹೇಳಿದರು. ಆಗ ಆಕೆ ಯಾರಾದರೂ ಸನ್ಯಾಸಿಗಳಿಗೆ ತಮಗೆ ಉಪದೇಶಮಾಡುವಂತೆ ಹೇಳಿ ಎಂದಳು.

ಶ್ರೀಮಾತೆ:—ಅವರು ನನ್ನ ಮಾತನ್ನು ಕೇಳದೆ ಇರಬಹುದು.

ಭಕ್ತೆ:— ಏನು ಹೀಗೆ ಹೇಳುತ್ತೀರಲ್ಲ. ಅವರು ನಿಮ್ಮ ಮಾತನ್ನು ಕೇಳಲೇ ಬೇಕು.

ಶ್ರೀಮಾತೆ:—ಈ ವಿಷಯದಲ್ಲಿ ಅವರು ನನ್ನ ಮಾತನ್ನು ಗಮನಿಸದೆ ಇರಬಹುದು.

ಆದರೆ ಸ್ತ್ರೀ ಬಿಡದೆ ಇರುವುದನ್ನು ನೋಡಿ, "ಆಗಲಿ, ನಾನು ಸ್ವಾಮಿ ಸುಬೋಧಾನಂದರಿಗೆ ಹೇಳುತ್ತೇನೆ. ಅವರು ಉಪದೇಶಕೊಡು ತ್ತಾರೆ" ಎಂದರು. ಪುನಃ ಸ್ತ್ರೀ, "ನೀವೇ ನನಗೆ ಉಪದೇಶಕೊಟ್ಟರೆ ಸಂತೋಷ. ನೀವು ನನ್ನ ಬಯಕೆಯನ್ನು ಈಡೇರಿಸಬಹುದು" ಎಂದು ಹೇಳಿ ಹತ್ತುರೂಪಾಯಿ ಕೊಡಲು ಹೋಗಿ, "ಇಲ್ಲಿ ದುಡ್ಡು ಇದೆ. ನೀವು ಏನೇನು ಬೇಕೋ ಅದನ್ನು ತರಿಸಿಕೊಳ್ಳಬಹುದು" ಎಂದಳು. ಆಕೆಯ ಮೂರ್ಖತನ ನೋಡಿ ನಮಗೆಲ್ಲಾ ನಾಚಿಕೆಯಾಯಿತು. ಕೊನೆಗೆ ಶ್ರೀಮಾತೆ ಉದ್ವೇಗದಿಂದ, "ಏನು? ನೀನು ನನಗೆ ಹಣದಾಸೆಯನ್ನು ತೋರಿಸುವೆಯ? ನೀನು ನನ್ನನ್ನು ಹಣದಿಂದ ಒಲಿಸಿಕೊಳ್ಳಲಾರೆ. ಅದನ್ನು ತೆಗೆದುಕೊ" ಎಂದರು. ಶ್ರೀಮಾತೆ ತಕ್ಷಣ ಕೋಣೆಯನ್ನು

ಬಿಟ್ಟರು. ಆಕೆ ಬಲಾತ್ಕರಿಸಿದುದರಿಂದ ಮಹಾಷ್ಟಮಿ ದಿನ ಆಕೆಗೆ ಉಪದೇಶಕೊಡುತ್ತೇನೆಂದು ಹೇಳಿ ಕಳುಹಿಸಿದರು. ಅವರಿಗೆ ಈಗ ನನ್ನೊಂದಿಗೆ ಸ್ವಲ್ಪ ಮಾತನಾಡಲು ಅವಕಾಶವಾಯಿತು.

* *

ಶ್ರೀಮಾತೆ ದರ್ಶನಕ್ಕೆ ಎರಡೂವರೆ ತಿಂಗಳಾದ ಮೇಲೆ ಬಂದೆ. ಅವರು, "ಓ, ನಿನ್ನನ್ನು ನೋಡಿ ಒಂದು ಯುಗವಾಯಿತು!" ಎಂದರು. ಮಾತನಾಡುವಾಗ, ಯಾರಿಗೆ ಉಪದೇಶವನ್ನು ಕೊಡುತ್ತೇನೆ ಎಂದು ಹೇಳಿದ್ದರೋ ಆಕೆಯ ವಿಷಯವನ್ನು ಕೇಳಿದೆ.

ಶ್ರೀಮಾತೆ:- ಎಂದು ಬರುವುದಕ್ಕೆ ಹೇಳಿದ್ದೆನೋ ಅಂದು ಆಕೆ ಬರಲಿಲ್ಲ. ನಾನು ಆಕೆಗೆ, "ಈಗ ನನಗೆ ಆರೋಗ್ಯವಿಲ್ಲ. ಗುಣವಾದ್ದ ಮೇಲೆ ಕೊಡುತ್ತೇನೆ" ಎಂದು ಹೇಳಿದೆ. ನನ್ನ ಮಾತು ಸತ್ಯವಾಯಿತು. ಅವಳೇ ಖಾಯಿಲೆ ಬಿದ್ದುದರಿಂದ ಅವಳು ಮಹಾಷ್ಟಮಿ ದಿನ ಬರಲಾಗಲಿಲ್ಲ. ಹಲವು ದಿನಗಳಾದ ಮೇಲೆ ಬಂದು ಉಪದೇಶಪಡೆದಳು.

ಭಕ್ತೆ:- ಹೌದು. ನಿಮ್ಮ ಬಾಯಿಂದ ಒಮ್ಮೆ ಮಾತು ಹೊರಬಿದ್ದರೆ ಅದು ನಿಜವಾಗಲೇ ಬೇಕು. ನಿಮ್ಮ ಇಚ್ಛೆಗೆ ವಿರೋಧವಾಗಿ ಹೋದರೆ ನಾವು ದುಃಖಪಡಬೇಕಾಗುವುದು. ಹಲವು ವೇಳೆ ನಿಮಗೆ ಅನಾರೋಗ್ಯವಾಗಿರುವಾಗಲೂ ಉಪದೇಶ ಕೊಟ್ಟು, ಅವರ ದುಃಖವನ್ನು ನೀವು ಸ್ವೀಕರಿಸಿ ಮತ್ತೂ ವ್ಯಥೆಪಡುವಿರಿ.

ಶ್ರೀಮಾತೆ:- ಹೌದು ಮಗು. ಶ್ರೀರಾಮಕೃಷ್ಣರೂ ಕೂಡ, "ಈ ದೇಹ ಏತಕ್ಕೆ ಇಷ್ಟು ವ್ಯಥೆಗೆ ಈಡಾಗಬೇಕಾಗಿತ್ತು" ಎನ್ನುತ್ತಿದ್ದರು. ಕೆಲವು ದಿನದ ಹಿಂದೆ ನನಗೆ ಭೇದಿಯಾಗಿತ್ತು.

ನನ್ನ ಅತ್ತಿಗೆ ಜೊತೆಯಲ್ಲಿದ್ದಳು. ಅವಳನ್ನು ಕುರಿತು, "ಒಳ್ಳೆ ಹುಡುಗಿ. ಸಾಧು ಸ್ವಭಾವದಳು. ಊಟಕ್ಕೆ ಒಂದೇ ಪಲ್ಯವಿದೆ. ಅದು ಚೆನ್ನಾಗಿಲ್ಲದೇ ಇದ್ದರೆ ಊಟವೇ ಕೆಡುವುದು" ಎಂದರು. ಅಂದರೆ ನನಗೆ ಇದ್ದವಳು ಒಬ್ಬಳೇ ಅತ್ತಿಗೆ. ಅವಳು ಚೆನ್ನಾಗಿಲ್ಲದಿದ್ದರೆ ನನ್ನ ಬಾಳು ಸಹಿಸಲಸದಳವಾಗುತ್ತಿತ್ತು.

ಫೆಬ್ರುವರಿ, ೧೯೧೪.

ನಾನು ಬಾಗ್ ಬಜಾರಿಗೆ ಒಂದು ಬುಟ್ಟಿ ಹೂವನ್ನು ತೆಗೆದುಕೊಂಡು ಹೋದೆ. ಅದನ್ನು ಶ್ರೀಮಾತೆಗೆ ಅರ್ಪಿಸಿದೆ. ಅವರಿಗೆ ತುಂಬಾ ಸಂತೋಷವಾಯಿತು. ಅದರಿಂದ ಶ್ರೀರಾಮಕೃಷ್ಣರನ್ನು ಅಲಂಕರಿಸಿ

ದರು. ಅದರಲ್ಲಿ ಕೆಲವು ನೀಲಿ ಬಣ್ಣದ್ದು ಎಂದು ಹೀಗೆ ಹೇಳಿದರು: "ಓ, ಎಂತಹ ಸುಂದರ ಬಣ್ಣ. ದಕ್ಷಿಣೇಶ್ವರದಲ್ಲಿ ಆಶಾ ಎಂಬ ಹುಡುಗಿ ಇದ್ದಳು. ಒಂದು ದಿನ ಅವಳು ದಕ್ಷಿಣೇಶ್ವರಕ್ಕೆ ಬಂದು ಕಪ್ಪು ಎಲೆ ಇರುವ ಗಿಡದಿಂದ ಕೆಂಪು ಹೂವು ಕಿತ್ತಳು. ಅವಳು "ಆಶ್ಚರ್ಯ! ಕಪ್ಪು ಎಲೆಯ ಗಿಡದಲ್ಲಿ ಇಂತಹ ಕೆಂಪು ಹೂವು. ರಾಮ! ಎಂತಹ ವಿಚಿತ್ರ ಲೀಲೆ ನಿನ್ನದು?" ಎಂದಳು. ಶ್ರೀರಾಮಕೃಷ್ಣರು ಅವಳನ್ನು ನೋಡಿದರು. ಅವಳು ಅಳುತ್ತಿದ್ದಳು. 'ಏನು ಸಮಾಚಾರ ಮಗು! ಏತಕ್ಕೆ ಅಳುತ್ತಿರುವೆ?' ಎಂದರು. ಅವಳು ಒಂದು ಮಾತನ್ನೂ ಆಡಲಿಲ್ಲ. ಒಂದೇ ಸಮನೆ ಅಳುತ್ತಿದ್ದಳು. ಶ್ರೀರಾಮಕೃಷ್ಣರು ಕೊನೆಗೆ ಸಮಾಧಾನಪಡಿಸಿದರು."

ಶ್ರೀಮಾತೆ ಭಾವ ಪರವಶರಾಗಿದ್ದರು. "ಈ ನೀಲಿ ಬಣ್ಣದ ಹೂವನ್ನು ನೋಡು! ಇಂತಹ ಸುಂದರ ಹೂವಿಲ್ಲದೆ ದೇವರಿಗೆ ಹೇಗೆ ಪೂಜೆ ಮಾಡುವುದು?" ಎಂದು ಒಂದು ಬೊಗಸೆ ಹೂವನ್ನು ಶ್ರೀರಾಮಕೃಷ್ಣರಿಗೆ ಅರ್ಪಿಸಿದರು. ಕೆಲವು ಹೂ ದೇವರ ಮೇಲೆ ಇಡುವುದಕ್ಕೆ ಮುಂಚೆ ಶ್ರೀಮಾತೆಯ ಪದತಳದಲ್ಲಿ ಬಿದ್ದವು. "ದೇವರಿಗೆ ಅರ್ಪಿಸುವುದಕ್ಕೆ ಮುಂಚೆ ಹೇಗೆ ಅವು ಇಲ್ಲಿ ಬಿದ್ದವು!" ಎಂದರು. "ಇದು ಚೆನ್ನಾಗಿದೆ" ಎಂದೆ ನಾನು. "ನಿಮಗೆ ಶ್ರೀರಾಮಕೃಷ್ಣರು ಮೇಲಿರಬಹುದು. ಆದರೆ ನಮಗೆ ನಿಮಗೂ ದೇವರಿಗೂ ಭೇದವಿಲ್ಲ" ಎಂದುಕೊಂಡೆ.

ಒಬ್ಬ ವಿಧವೆ ಕೋಣೆಯೊಳಗೆ ಬಂದರು. ಅವರ ವಿಷಯವಾಗಿ ಶ್ರೀಮಾತೆಯನ್ನು ಕೇಳಿದೆ. ಶ್ರೀಮಾತೆ ಹೀಗೆಂದರು: "ಒಂದು ತಿಂಗಳ ಹಿಂದೆ ನನ್ನಿಂದ ಉಪದೇಶ ಪಡೆದಳು. ಮುಂಚೆ ಬೇರೊಬ್ಬ ಗುರು ಅವಳಿಗೆ ಇದ್ದರು. ಒಂದು ದಿನ ಇಲ್ಲಿಗೆ ಬಂದು ಅದು ಸರಿಯಾಗಿಲ್ಲವೆಂದು ಉಪದೇಶಪಡೆಯಲಿಚ್ಛಿಸಿದಳು. ಎಲ್ಲ ಗುರುಗಳೂ ಒಂದೇ ಎಂದು ಸಮಾಧಾನಮಾಡಲು ಆಗಲಿಲ್ಲ. ಒಂದೇ ಭಗವಂತನ ಶಕ್ತಿ ಎಲ್ಲರ ಮೂಲಕ ಕೆಲಸಮಾಡುವುದು."

ಮಧ್ಯಾಹ್ನ ಪುನಃ ಮಾತು ಹೂವಿನ ಕಡೆ ತಿರುಗಿತು. ಶ್ರೀಮಾತೆ ಹೀಗೆಂದರು: "ಒಂದು ಸಲ ದಕ್ಷಿಣೇಶ್ವರದಲ್ಲಿದ್ದಾಗ ಮಲ್ಲಿಗೆ ಮತ್ತು ಇನ್ನು ಕೆಲವು ಕೆಂಪು ಹೂವಿನಿಂದ ಏಳು ಎಳೆಯ ಹೂವಿನ ಹಾರವನ್ನು ಮಾಡಿದೆನು. ಅದನ್ನು ಒಂದು ನೀರಿನ ಪಾತ್ರೆಯಲ್ಲಿ ಅದ್ದಿದಾಗ ಹೂವೆಲ್ಲ

ಅರಳಿತು. ಕಾಳಿಕಾಮಾತೆಯ ಪೂಜೆಗೆಂದು ಅದನ್ನು ಗುಡಿಗೆ ಕಳುಹಿಸಿದೆ. ಒಡವೆಗಳನ್ನೆಲ್ಲಾ ತೆಗೆದು ಹೂವಿನ ಮಾಲೆಯನ್ನು ದೇವರಿಗೆ ಹಾಕಿದರು. ಶ್ರೀರಾಮಕೃಷ್ಣರು ದೇವಸ್ಥಾನಕ್ಕೆ ಬಂದು ದೇವರನ್ನು ನೋಡಿದಾಗ ಸಂತೋಷಪರವಶರಾದರು. ಹೂವಿನ ಹಾರದಿಂದ ಜಗನ್ಮಾತೆ ಅಷ್ಟು ಸುಂದರವಾಗಿ ಕಾಣುತ್ತಿದ್ದಳು. "ಕಪ್ಪು ಬಣ್ಣದ ಜಗನ್ಮಾತೆಗೆ ಈ ಸುಂದರ ಹಾರ ಚೆನ್ನಾಗಿ ಒಪ್ಪುವುದು! ಯಾರು ಈ ಹಾರವನ್ನು ಮಾಡಿದರು?" ಎಂದು ಕೇಳಿದರು. ಯಾರೋ ನನ್ನ ಹೆಸರು ಹೇಳಿದರು. ದೇವಿ ದರ್ಶನಕ್ಕೆ ನನ್ನನ್ನು ಕರೆತರುವಂತೆ ಹೇಳಿ ಕಳುಹಿಸಿದರು. ನಾನು ಬಂದಾಗ ಬಲರಾಮ, ಸುರೇಶ್ ಮುಂತಾದವರಿದ್ದರು. ಅವರನ್ನು ಕಂಡು ನಾಚಿ, ಬೃಂದೆಯ ಹಿಂದೆ ನಿಂತು ಹಿಂದಿನಿಂದ ಮೆಟ್ಟಲು ಹತ್ತಿ ದೇವಸ್ಥಾನಕ್ಕೆ ಹೋಗುವುದರಲ್ಲಿದ್ದೆ. ಶ್ರೀರಾಮಕೃಷ್ಣರು ಇದನ್ನು ನೋಡಿ, "ಅಲ್ಲಿ ಹೋಗಬೇಡ. ಕೆಲವು ದಿನದ ಹಿಂದೆ ಬೇರೊಬ್ಬಳು ಮೆಟ್ಟಲು ಮೇಲೆ ಹೋಗುತ್ತಿದ್ದಾಗ ಜಾರಿಬಿದ್ದು ಮೂಳೆ ಮುರಿದು ಕೊಂಡು ಅನಂತರ ಕಾಲವಾದಳು" ಎಂದರು. ಭಕ್ತರು ಇದನ್ನು ಕೇಳಿ, ನನಗೆ ಹೋಗುವುದಕ್ಕೆ ದಾರಿಬಿಟ್ಟರು. ನಾನು ದೇವಸ್ಥಾನಕ್ಕೆ ಹೋದಾಗ ಶ್ರೀರಾಮಕೃಷ್ಣರು ಭಕ್ತಿಪರವಶರಾಗಿ ಹಾಡುತ್ತಿದ್ದರು."

ಕೆಲವು ಗೃಹಿಣೀ ಭಕ್ತರು ಬಂದರು. ಸಂಭಾಷಣೆ ಅಷ್ಟಕ್ಕೆ ನಿಂತಿತು. ನನಗೂ ಹೋಗುವುದಕ್ಕೆ ಸಮಯವಾಗಿತ್ತು. ಪುನಃ ಶ್ರೀಮಾತೆ ಭಗವಂತನ ಸಾಕ್ಷಾತ್ಕಾರವನ್ನು ಕುರಿತು ಹೀಗೆಂದರು: "ಮಗು, ಅದು ಹೇಗೆ ಗೊತ್ತೆ? ಮಗುವಿನ ಕೈಯಲ್ಲಿರುವ ಕಲ್ಲುಸಕ್ಕರೆಯಂತೆ. ಕೆಲವರು ಒಂದು ಚೂರನ್ನು ಕೊಡು ಎಂದು ಬೇಡುವರು. ಅದು ಕೊಡುವುದಿಲ್ಲ. ಆದರೆ ಯಾರಮೇಲೆ ತನ್ನ ಮನಸ್ಸು ಬರುವುದೋ ಅವರಿಗೆ ಕೊಟ್ಟು ಬಿಡುವುದು. ಒಬ್ಬ ತನ್ನ ಜೀವನದಲ್ಲಿ ಬೇಕಾದಷ್ಟು ತಪಸ್ಸುಮಾಡುವನು. ಆದರೂ ದೇವರು ದೊರಕುವುದಿಲ್ಲ. ಆದರೆ ಮತ್ತೊಬ್ಬ ಹೆಚ್ಚು ಶ್ರಮವಿಲ್ಲದೆ ದೇವರನ್ನು ಪಡೆಯುವನು. ಎಲ್ಲಾ ಭಗವಂತನ ಕೃಪೆ ಮೇಲಿದೆ. ಅವನಿಗೆ ಇಚ್ಛೆ ಬಂದವರನ್ನು ಅನುಗ್ರಹಿಸುವನು. ಕೃಪೆ ಮುಖ್ಯ".

೧೯೧೨.

ಶ್ರೀಮಾತೆ ದರ್ಶನಕ್ಕೆ ಸಾಯಂಕಾಲ ಹೋದೆ. ನಾನು ಆಗ ಬಾಗ್

ಬಜಾರಿನಲ್ಲಿದ್ದೆ. ದರ್ಶನಕ್ಕೆ ಸುಮಾರು ಪ್ರತಿ ದಿನವೂ ಬರುತ್ತಿದ್ದೆ. ಅವರೊಬ್ಬರೆ ಇದ್ದುದನ್ನು ನೋಡಿ, ನನ್ನ ಒಂದು ಸ್ವಪ್ನವನ್ನು ಅವರಿಗೆ ವಿವರಿಸಿದೆ, "ಒಂದು ದಿನ ರಾಮಕೃಷ್ಣರು ಕನಸಿನಲ್ಲಿ ಕಾಣಿಸಿಕೊಂಡರು. ನೀವು ಆಗ ಜಯರಾಮವಟಿಯಲ್ಲಿದ್ದಿರಿ. ನಾನು ಅವರಿಗೆ ನಮಸ್ಕರಿಸಿ 'ಶ್ರೀಮಾತೆಯವರೆಲ್ಲಿ?' ಎಂದು ಕೇಳಿದೆ. ಅವರು, 'ಆ ಬೀದಿಯಲ್ಲಿ ಹೋದರೆ ಅಲ್ಲಿ ಗುಡಿಸಿಲಿದೆ. ಅಲ್ಲೆ ಮುಂದೆ ಕುಳಿತಿರುವರು' ಎಂದರು." ಶ್ರೀಮಾತೆ ಆಗ ಹಾಸಿಗೆಯಲ್ಲಿದ್ದರು. ಉತ್ಸಾಹದಿಂದ ಎದ್ದು ಕುಳಿತು, "ನೀನು ಹೇಳುವುದು ಸರಿ. ಆ ಕನಸು ಸತ್ಯ" ಎಂದರು ನಾನು ಉತ್ಸಾಹದಿಂದ, "ಹಾಗಾದರೆ ಆ ಕನಸು ಸತ್ಯವೆ?" ಎಂದೆ. "ಜಯರಾಮವಟಿಯಲ್ಲಿರುವ ನಿಮ್ಮ ಮನೆ ಇಟ್ಟಿಗೆಯದು ಎಂದು ಭಾವಿಸಿದ್ದೆ. ಆದರೆ ಸ್ವಪ್ನದಲ್ಲಿ ಜೋಪಡಿ ಮನೆ, ಮಣ್ಣಿನ ನೆಲ ಇದ್ದವು. ಅದಕ್ಕೇ ಇದೆಲ್ಲ ಭ್ರಾಂತಿ ಎಂದು ಭಾವಿಸಿದೆ" ಎಂದೆ.

ಭಗವಂತನ ಸಾಕ್ಷಾತ್ಕಾರಕ್ಕೆ ಬೇಕಾಗುವ ತಪಸ್ಸನ್ನು ಕುರಿತು, "ಗುಲಾಬ್ ಮತ್ತು ಯೋಗಿನ್ ಮಧ್ಯಾಹ್ನ ಜಪದಲ್ಲಿ ಬಹುಕಾಲ ಕಳೆಯುತ್ತಿದ್ದರು. ಯೋಗಿನ್ ಮಾ ತುಂಬಾ ತಪಸ್ಸುಮಾಡಿದಳು. ಒಂದು ಸಲ ಅವಳು ಬರೀ ಹಾಲು ಹಣ್ಣಿನ ಮೇಲೆಯೇ ಜೀವಿಸಿದಳು. ಈಗಲೂ ಅವಳು ಸಾಧನೆಯಲ್ಲಿ ಬಹಳ ಕಾಲ ಕಳೆಯುವಳು. ಗುಲಾಬಳ ಮನಸ್ಸು ಬಾಹ್ಯ ಪ್ರಪಂಚಕ್ಕೆ ಸೋಕುವುದೇ ಇಲ್ಲ. ಪೇಟೆಯಿಂದ ತಯಾರಿಸಿ ತಂದ ಅಡಿಗೆಯನ್ನು ಊಟ ಮಾಡುವುದಕ್ಕೂ ಅವಳು ಹಿಂಜರಿಯುವುದಿಲ್ಲ. ಬ್ರಾಹ್ಮಣ ವಿಧವೆಯರು ಅದನ್ನು ಮುಟ್ಟಲೂ ಆರರು" ಎಂದರು.

ಶ್ರೀಮಾತೆ ಇದ್ದ ಮನೆಯಲ್ಲಿ ಕಾಳಿ ಕೀರ್ತನೆ ಮಾಡಬೇಕೆಂದು ಏರ್ಪಾಡಾಗಿತ್ತು. ಬೇಲೂರು ಮಠದ ಸ್ವಾಮಿಗಳು ಅದರಲ್ಲಿ ಭಾಗವಹಿಸಿದ್ದರು. ಸಂಜೆ ಎಂಟೂವರೆ ಗಂಟೆಗೆ ಕೀರ್ತನೆ ಆರಂಭವಾಯಿತು. ಹಲವು ಸ್ತ್ರೀ ಭಕ್ತರು ಅಂಗಳದಲ್ಲಿ ಕೇಳಲು ಕುಳಿತರು. ನಾನು ಶ್ರೀಮಾತೆಯವರ ಕಾಲಿಗೆ ಎಣ್ಣೆ ಸವರುತ್ತಿದ್ದೆ. ಅಲ್ಲಿಂದಲೇ ಕೀರ್ತನೆಯನ್ನು ಕೇಳಬಹುದಾಗಿತ್ತು. ನಾನು ಅವನ್ನು ಎಷ್ಟೋ ಸಲ ಹಿಂದೆ ಕೇಳಿದ್ದೆ. ಆದರೆ ಅಂದು ಆ ಭಕ್ತರ ಬಾಯಿಂದ ಬರುತ್ತಿದ್ದ ಹಾಡಿನಲ್ಲಿ ಒಂದು ಅಪೂರ್ವ ಆಕರ್ಷಣೆ ಇತ್ತು. ಭಕ್ತಿಯಿಂದ ತುಂಬಿ ತುಳುಕಾಡುತ್ತಿತ್ತು. ನನ್ನ ಕಣ್ಣಿನಲ್ಲಿ ಅಶ್ರುಗಳು ತುಂಬಿದುವು. ಶ್ರೀರಾಮಕೃಷ್ಣರು ಹಾಡುತ್ತಿದ್ದ

ಕೆಲವು ಕೀರ್ತನೆಗಳನ್ನು ಹಾಡುತ್ತಿದ್ದರು. ಆ ಸಮಯದಲ್ಲಿ ಶ್ರೀಮಾತೆ, "ಹೌದು, ಶ್ರೀರಾಮಕೃಷ್ಣರು ಇದನ್ನು ಹಾಡುತ್ತಿದ್ದರು!" ಎಂದರು. ಅನಂತರ "ನನ್ನ ಮನೋಭೃಂಗ ಕಾಳಿಕಾಮಾತೆಯ ಪದಕಮಲದಲ್ಲಿ ಅನುರಕ್ತವಾಗಿದೆ" ಎಂಬ ಹಾಡನ್ನು ಹೇಳಿದರು. ಇನ್ನು ಶ್ರೀಮಾತೆ ಮಲಗಿರಲು ಸಾಧ್ಯವಾಗಲಿಲ್ಲ. ಕೆಲವು ಅಶ್ರುಬಿಂದುಗಳು ಅವರ ಕಣ್ಣಿನಿಂದ ಜಾರಿದುವು. "ಬಾ ಮಗು, ಅಂಗಳಕ್ಕೆ ಹೋಗೋಣ" ಎಂದರು. ಕೀರ್ತನೆ ಮುಗಿದ ಮೇಲೆ ಶ್ರೀಮಾತೆಗೆ ನಮಸ್ಕರಿಸಿ ಹಿಂದಿರುಗಿದೆ.

೨೨ ನೇ ಜುಲೈ, ೧೯೧೮.

ಶ್ರೀಮಾತೆಯ ದರ್ಶನಕ್ಕೆ ಬಂದಾಗ ರಾತ್ರಿ ಏಳೂವರೆ ಗಂಟೆಯಾಗಿತ್ತು. ಎರಡು ತಿಂಗಳು ಹಿಂದೆ ತಮ್ಮ ಹಳ್ಳಿಯಿಂದ ಬಂದಿದ್ದರು. ಮಲೇರಿಯಾ ಜ್ವರದಿಂದ ಬಹಳ ಕೃಶವಾಗಿದ್ದರು. ಎಂದಿನಂತೆ ನಗುತ್ತಾ ನನ್ನನ್ನು ಸ್ವಾಗತಿಸಿದರು. "ಸ್ವಲ್ಪ ಕುಳಿತು ವಿಶ್ರಾಂತಿ ತೆಗೆದುಕೊ" ಎಂದರು. "ನಿನ್ನ ಸಹೋದರಿಯ ಸಮಾಚಾರವೇನು? ಅವಳು ಮನೆಗೆ ಬಂದಿರುವಳೇ?" ಎಂದು ಕೇಳಿದರು.

ಭಕ್ತ.– ಹೌದು, ತಾಯಿ. ಅವಳು ಮನೆ ಸೇರಿದ ಮೇಲೆ ನಾನು ಹೊರಟೆ.

ಶ್ರೀಮಾತೆ:– ರಾಧೆಗೆ ಈ ಬೀಸಣಿಗೆ ಕೊಡು. ಈ ತೈಲವನ್ನು ನನ್ನ ಬೆನ್ನಿಗೆ ಹಚ್ಚು. ಉಷ್ಣಕ್ಕೆ ಮೈಮೇಲೆಲ್ಲ ಗಂದೆಯಾಗಿದೆ.

ನಾನು ಅವರಿಗೆ ಎಣ್ಣೆಯನ್ನು ಸವರುತ್ತಿದ್ದಾಗ ಸಂಜೆ ಮಂಗಳಾರತಿಗೆ ಗಂಟೆ ಹೊಡೆಯಿತು. ಶ್ರೀಮಾತೆ ಹಾಸಿಗೆಯ ಮೇಲೆ ಕುಳಿತುಕೊಂಡು ದೇವರಿಗೆ ಕೈಮುಗಿದರು. ಉಳಿದ ಭಕ್ತರು ಮಂಗಳಾರತಿಗೆ ದೇವರ ಮನೆಗೆ ಹೊರಟರು.

ಶ್ರೀಮಾತೆ:–"ಎಲ್ಲರೂ ವ್ಯಥೆಯಿಂದ, 'ಪ್ರಪಂಚದಲ್ಲಿ ಇಷ್ಟೊಂದು ದುಃಖವಿದೆ. ನಾವು ದೇವರಿಗೆ ಇಷ್ಟೊಂದು ಬೇಡಿಕೊಂಡಿರುವೆವು. ಆದರೂ ದುಃಖಕ್ಕೆ ಒಂದು ಅಂತ್ಯವೇ ಇಲ್ಲದಂತೆ ತೋರುವುದು' ಎನ್ನುವರು. ದುಃಖವೂ ಭಗವಂತನ ಒಂದು ವರ ಅಲ್ಲವೆ? ಅವನ ಕರುಣೆಯ ಒಂದು ಚಿಹ್ನೆ ಅಲ್ಲವೆ?" ಎಂದರು.

ಅಂದು ನನಗೆ ಬಹಳ ವ್ಯಥೆಯಾಗಿತ್ತು. ಇದು ಅವರಿಗೆ ನಿಜವಾಗಿ ತಿಳಿದು ಈ ಮಾತನ್ನು ಹೇಳಿದರೆ? ಶ್ರೀಮಾತೆ ಮುಂದುವರಿಸುತ್ತಾ

ಹೀಗೆ ಹೇಳಿದರು: "ಪ್ರಪಂಚದಲ್ಲಿ ಯಾರು ವ್ಯಥೆಪಟ್ಟಿಲ್ಲ? ಶ್ರೀಕೃಷ್ಣನ ಭಕ್ತಳಾದ ವೃಂದೆ ಒಂದು ಸಲ ಕೃಷ್ಣನನ್ನು ಕುರಿತು, 'ನಿನ್ನನ್ನು ದಯಾ ಪರನೆಂದು ಯಾರು ಹೇಳುವರು? ರಾಮಾವತಾರದಲ್ಲಿ ಸೀತೆಗೆ ಅಷ್ಟೊಂದು ದುಃಖಕೊಟ್ಟೆ. ಕೃಷ್ಣಾವತಾರದಲ್ಲಿ ರಾಧೆ ನಿನಗಾಗಿ ಅಳು ತ್ತಿರುವಳು. ನಿನ್ನ ತಾಯಿತಂದೆಯರು ಕಂಸನ ಸೆರೆಯಲ್ಲಿ ನವೆಯುತ್ತ ಹಗಲು ರಾತ್ರಿ ನಿನ್ನ ಹೆಸರನ್ನು ಹೇಳುತ್ತಿದ್ದರು. ಆದರೆ ನಾನು ಏತಕ್ಕೆ ನಿನ್ನ ನಾಮೋಚ್ಚರಣೆ ಮಾಡುವುದು? ಅದು ಮರಣಭಯವನ್ನು ತೊಡೆದುಹಾಕುವುದು ಎಂದು."

ಒಬ್ಬ ಹೆಂಗಸನ್ನು ಕುರಿತು, "ಅಂತಹ ಸ್ವಭಾವದ ಹೆಂಗಸರಲ್ಲಿ ಸಾಧಾರಣವಾಗಿ ಭಕ್ತಿ ಇರುವುದಿಲ್ಲ. ಶ್ರೀರಾಮಕೃಷ್ಣರೇ ಹೀಗೆ ಹೇಳು ತ್ತಿದ್ದುದನ್ನು ಕೇಳಿದ್ದೆ" ಎಂದರು.

ಭಕ್ತೆ:– ಯಾರು ಸರಳ ಸ್ವಭಾವದವರಲ್ಲವೋ ಅಂತಹವರು ಎಂದಿಗೂ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಲಾರರು, ಎಂದು ಕಥಾಮೃತದಲ್ಲಿ ಶ್ರೀರಾಮಕೃಷ್ಣರು ಹೇಳಿರುವುದನ್ನು ನಾನು ಓದಿರುವೆ.

ಶ್ರೀಮಾತೆ:– ಓ, ನೀನು ಅದನ್ನೇ ಹೇಳುತ್ತಿರುವುದು. ಇದನ್ನು ಚೋಟ ನರೇನ್ ಮನೆಯಲ್ಲಿ ಹೇಳಿದರು. ಒಬ್ಬನಿಗೆ ಉಪಪತ್ನಿಯೊಬ್ಬ ಳಿದ್ದಳು. ಆಕೆ ಒಮ್ಮೆ ಪಶ್ಚಾತ್ತಾಪದಿಂದ ಪರಮಹಂಸರ ಬಳಿಗೆ ಬಂದು, "ಆ ಮನುಷ್ಯ ನನ್ನ ಮಾನ ಕಳೆದು, ನಂತರ ದ್ರವ್ಯ ಒಡವೆಗಳನ್ನು ಅಪಹರಿಸಿದನು" ಎಂದಳು. ಶ್ರೀರಾಮಕೃಷ್ಣರಿಗೆ ಒಬ್ಬರ ಹೃದ ಯಾಂತರಾಳದ ಭಾವನೆಗೊತ್ತಾಗುತ್ತಿತ್ತು. ಆದರೂ ಅವರವರ ಬಾಯಿನಿಂದಲೇ ಕೇಳಲು ಇಚ್ಛಿಸುತ್ತಿದ್ದರು. "ಅದು ನಿಜವೆ? ಆ ಮನುಷ್ಯ ಭಕ್ತಿಯಮೇಲೆ ದೊಡ್ಡ ಉಪನ್ಯಾಸವನ್ನು ಕೊಡುತ್ತಿದ್ದ ನಲ್ಲ?" ಎಂದರು. ನಂತರ ಶ್ರೀರಾಮಕೃಷ್ಣರು ಅಧ್ಯಾತ್ಮಿಕ ಜೀವನಕ್ಕೆ ಆತಂಕವಾದ ಕೆಲವು ಸ್ವಭಾವವನ್ನು ವಿವರಿಸಿದರು. ಕೊನೆಗೆ ಆಕೆ ತನ್ನ ಪಾಪಕೃತ್ಯಗಳನ್ನೆಲ್ಲಾ ಹೇಳಿ, ಪಶ್ಚಾತ್ತಾಪಪಟ್ಟು ಪಾರಾದಳು.

ನಳಿನಿ:– ಹಾಗೆ ಪಾರಾಗಲು ಹೇಗೆ ಸಾಧ್ಯ ತಾಯಿ, ಸುಮ್ಮನೆ ಬಾಯಿನಲ್ಲೇ ತಪ್ಪಾಯಿತೆಂದು ಒಪ್ಪಿಕೊಂಡರೆ ಸಾಕೆ? ಹೀಗೆ ಪಾಪ ವನ್ನು ತೊಳೆಯಲು ಸಾಧ್ಯವೆ?

ಶ್ರೀಮಾತೆ:– ಮಗು, ಏತಕ್ಕೆ ಸಾಧ್ಯವಾಗಬಾರದು? ಶ್ರೀರಾಮ

ಕೃಷ್ಣರು ಮಹಾಪುರುಷರು. ಅಂತಹವರೆದುರಿಗೆ ತಪ್ಪನ್ನು ಒಪ್ಪಿಕೊಂಡು ಪಶ್ಚಾತ್ತಾಪಪಟ್ಟರೆ ಪಾರಾಗುವರು. ಒಂದು ಸ್ಥಳದಲ್ಲಿ ಒಳ್ಳೆಯ ಅಥವಾ ಕೆಟ್ಟ ಮಾತನ್ನು ಆಡಿದರೆ ಅಲ್ಲಿ ಕುಳಿತವರೆಲ್ಲ ಅದಕ್ಕೆ ಪಾಲುದಾರರು.

ನಳಿನಿ :– ಅದು ಹೇಗೆ ಸಾಧ್ಯ ?

ಶ್ರೀಮಾತೆ:– ಅದನ್ನು ವಿವರಿಸುತ್ತೇನೆ. ಒಬ್ಬ ತನ್ನ ಒಳ್ಳೆಯ ದನ್ನು ಅಥವಾ ಕೆಟ್ಟದನ್ನು ಹೇಳಿಕೊಂಡ ಎಂದು ಇಟ್ಟುಕೊಳ್ಳೋಣ. ನೀನು ಆ ಮನುಷ್ಯನನ್ನು ಆಲೋಚಿಸಿದಾಗಲೆಲ್ಲಾ ಅವನ ಒಳ್ಳೆಯ ಅಥವಾ ಕೆಟ್ಟ ಗುಣವನ್ನು ಕುರಿತು ಯೋಚಿಸುವೆ. ಅವು ನಿಮ್ಮ ಮನ ಸ್ಸಿನ ಮೇಲೆ ಸಂಸ್ಕಾರವನ್ನು ಬಿಡುವುವು. ಇದು ನಿಜವಲ್ಲವೆ ಮಗು ?

ಪುನಃ ಮಾತು ಮಾನವ ಜನ್ಮದ ದುಃಖ ಕಷ್ಟ ಅಶಾಂತಿಗಳ ಕಡೆ ತಿರುಗಿತು.

ಶ್ರೀಮಾತೆ:–ಹಲವರು ಬಂದು ತಮ್ಮ ಸಂಕಟವನ್ನು ಹೇಳಿಕೊಳ್ಳು ವರು. 'ನಮಗೆ ದೇವರು ಸಿಕ್ಕಿಲ್ಲ ಶಾಂತಿ ಹೇಗೆ ಲಭಿಸುವುದು ?' ಎನ್ನುವರು. 'ಅವರು ಏತಕ್ಕೆ ಹೀಗೆ ಹೇಳುವರು. ನಾನೇನು ದೇವ ತೆಯೆ ?' ಎಂದು ಯೋಚನೆ ಬರುವುದು. ಅಶಾಂತಿಯೆಂದರೆ ನನಗೆ ಗೊತ್ತಿರಲಿಲ್ಲ. ಭಗವತ್ಸಾಕ್ಷಾತ್ಕಾರ — ಅದು ಅಂಗೈ ನೆಲ್ಲೀಕಾಯಿ ಯಂತೆ ನನಗೆ ಯಾವಾಗಬೇಕೋ ಆಗ ಬರುವುದು . . .

"ಮಾಸ್ಟರ್ ಮಹಾಶಯ ಬರೆದ ಕಥಾಮೃತ ಬಹಳ ಚೆನ್ನಾಗಿದೆ. ಏತಕ್ಕೆಂದರೆ ಪರಮಹಂಸರು ಹೇಳಿದ ಮಾತನ್ನೇ ಅವರು ಬರೆದಿರುವರು. ಎಷ್ಟು ಮಧುರವಾಗಿವೆ ಅವರ ಮಾತು! ಮಾಸ್ಟರ್ ಮಹಾಶಯನ ಹತ್ತಿರ ನಾಲ್ಕೈದು ಪುಸ್ತಕಕ್ಕೆ ಆಗುವಷ್ಟು ವಿಷಯಗಳಿವೆಯಂತೆ! ಆದರೆ ಆತನಿಗೆ ಆಗಲೇ ವಯಸ್ಸಾಗಿದೆ. ಅದನ್ನೆಲ್ಲಾ ಪುಸ್ತಕರೂಪಕ್ಕೆ ತರುವ ತನಕ ಆತನು ಬದುಕುವನೇ ಎಂಬುದೇ ಸಂದೇಹ. ಪುಸ್ತಕ ಮಾರಾಟ ದಿಂದ ಬೇಕಾದಷ್ಟು ಹಣಗಳಿಸುವನು. ಅದನ್ನು ಬ್ಯಾಂಕಿನಲ್ಲಿ ಸ್ಥಿರನಿಧಿ ಯಾಗಿಟ್ಟಿರುವನು. ಜಯರಾಮವಟಿಯಲ್ಲಿ ನಮ್ಮ ಮನೆ ಕಟ್ಟಲು ಒಂದು ಸಾವಿರ ರೂಪಾಯಿ ಮತ್ತು ಇತರ ಚಿಲ್ಲರೆ ಖರ್ಚಿಗೆಲ್ಲ ದುಡ್ಡು ಕೊಟ್ಟಿರುವನು. ಪ್ರತಿ ತಿಂಗಳೂ ನನಗೆ ಹತ್ತುರೂಪಾಯಿ ಕಳುಹಿಸು ವನು. ನಾನು ಕಲ್ಕತ್ತೆಯಲ್ಲಿರುವಾಗ ಇಪ್ಪತ್ತೊ ಅಥವಾ ಅದಕ್ಕಿಂತ

ಹೆಚ್ಚಾಗಿಯೋ ಕೊಡುವನು. ಮೊದಲು ನನಗೆ ತಿಂಗಳಿಗೆ ಎರಡು ರೂಪಾಯಿ ಕೊಡುತ್ತಿದ್ದನು. ಆಗ ಒಬ್ಬ ಶಾಲೆ ಉಪಾಧ್ಯಾಯನಾಗಿದ್ದ"

ಭಕ್ತೆ :— ಪ್ರಾರಂಭದಲ್ಲಿ ಸನ್ಯಾಸಿಗಳ ಖರ್ಚಿಗೆ ಗಿರೀಶಬಾಬು ತುಂಬಾ ಹಣ ಕೊಟ್ಟರೆಂದು ಕೇಳಿರುವೆನು.

ಶ್ರೀಮಾತೆ:— ಅಷ್ಟೊಂದು ಹಣ ಕೊಡಲಿಲ್ಲ. ಸುರೇಶ್‌ಬಾಬು ಧಾರಾಳವಾಗಿ ಕೊಡುತ್ತಿದ್ದ. ಮಧ್ಯೆಮಧ್ಯೆ ಗಿರೀಶನೂ ಕೊಡುತ್ತಿದ್ದನು. ಒಂದು ಸಲ ಅವನು ಒಂದೂವರೆ ವರ್ಷಕ್ಕೆ ಆಗುವ ವೆಚ್ಚವನ್ನು ವಹಿಸಿ ಕೊಂಡನು. ಅವನು ಹೇಗೆ ಹೆಚ್ಚು ಹಣಕೊಡಬಲ್ಲ? ಅವನೆಂದಿಗೂ ಶ್ರೀಮಂತನಾಗಿರಲಿಲ್ಲ. ಅವನ ಮೊದಲಿನ ಜೀವನ ಅಷ್ಟು ಪರಿಶುದ್ಧ ವಾಗಿರಲಿಲ್ಲ. ಕೆಟ್ಟ ಸಹವಾಸದಲ್ಲಿದ್ದ. ನಾಟಕದಲ್ಲಿ ಪಾರ್ಟುಮಾಡು ತ್ತಿದ್ದ. ಆದರೆ ಅವನಲ್ಲಿ ಅದ್ಭುತ ಶ್ರದ್ಧೆ ಇತ್ತು. ಅದಕ್ಕೆ ಶ್ರೀ ರಾಮ ಕೃಷ್ಣರ ಕೃಪೆಯನ್ನು ಪಡೆದನು. ಈ ಅವತಾರದಲ್ಲಿ ಶ್ರೀರಾಮಕೃಷ್ಣರು ಗಿರೀಶನನ್ನು ಉದ್ಧಾರಮಾಡಿರುವರು. ಪ್ರತಿಯೊಂದು ಅವತಾರದಲ್ಲಿ ಇಂತಹ ಉದ್ಧಾರದ ಘಟನೆಗಳಿವೆ. ಗೌರಾಂಗ, ಜಗಾಯಿ ಮತ್ತು ಮಾಧಾಯಿರನ್ನು ಉದ್ಧಾರಮಾಡಿದರು. ಶ್ರೀರಾಮಕೃಷ್ಣರು ಗಿರೀಶ್‌ನಲ್ಲಿ ಶಿವನ ಅಂಶವಿದೆ ಎನ್ನುತ್ತಿದ್ದರು. ಮಗು, ಹಣದಲ್ಲಿ ಏನಿದೆ? ಅವರು ಅದನ್ನು ಮುಟ್ಟುತ್ತಲೂ ಇರಲಿಲ್ಲ. ಹಣ ಕಂಡರೆ ಕೈಸೆಳೆದುಕೊಳ್ಳುತ್ತಿತ್ತು. ಅವರು, "ಈ ಪ್ರಪಂಚ ಮಿಥ್ಯ. ಇಲ್ಲದೇ ಇದ್ದರೆ ಕಾಮಾರಪುಕೂರ ವನ್ನು ಚಿನ್ನದ ತಗಡಿನಿಂದ ಮುಚ್ಚುತ್ತಿದ್ದೆ. ಆದರೆ ಪ್ರಪಂಚ ಮಿಥ್ಯ ವೆಂದು ನನಗೆ ಗೊತ್ತಿದೆ. ದೇವರೊಬ್ಬನೇ ಸತ್ಯ" ಎನ್ನುತ್ತಿದ್ದರು.

ಶ್ರೀಮಾತೆಯವರ ಸೋದರ ಸೊಸೆ, "ನಾನು ಒಂದು ಸ್ಥಳ ದಲ್ಲಿಯೂ ಸ್ಥಿರವಾಗಿ ನಿಲ್ಲಲಿಲ್ಲ" ಎಂದು ವ್ಯಸನದಿಂದ ಹೇಳಿಕೊಂಡಳು. ಅದಕ್ಕೆ ಶ್ರೀಮಾತೆ, "ಅದು ಹೇಗೆ? ನೀನು ಎಲ್ಲಿದ್ದರೂ ಶಾಂತಿಯಿಂದ ಇರಬೇಕು. ನಿನ್ನ ಗಂಡನ ಹತ್ತಿರ ಸುಖವಾಗಿರಬಹುದು ಎಂದು ನೀನು ಭಾವಿಸಿರುವೆ. ಅದು ಹೇಗೆ ಸಾಧ್ಯ? ಅವನಿಗೆ ಅಷ್ಟು ಕಡಿಮೆ ಸಂಬಳ ಬರುವುದು. ಅದರಲ್ಲಿ ಸಂಸಾರ ಹೇಗೆ ನಿರ್ವಹಿಸುವೆ? ನೀನು ನನ್ನ ಹತ್ತಿರ ಇರುವೆ. ಇದು ನಿನಗೆ ತಂದೆ ಮನೆಯಂತಿದೆ. ಮದುವೆಯಾದ ಹುಡುಗಿಯರು ಕೆಲವು ವೇಳೆ ತೌರುಮನೆಯಲ್ಲಿ ಇರುವುದಿಲ್ಲವೆ? ಅಷ್ಟು ಅಲ್ಪವಾದ ತ್ಯಾಗವನ್ನು ಮಾಡಲು ಸಾಧ್ಯವಿಲ್ಲವೆ?" ಎಂದರು.

ಯೋಗಿನ್ ಮಾ ಆಗ ಕಿಟಕಿ ಹತ್ತಿರ ಇದ್ದರು. ನಾನು ಅವರೊಂದಿಗೆ ಮಾತನಾಡುತ್ತಿದ್ದೆ. ಶ್ರೀಮಾತೆ, "ಒಳಗೆ ಬಾ. ಈಚೆಗೆ ನಿನ್ನನ್ನು ಕಾಣುವುದೇ ಅಪರೂಪ" ಎಂದರು. ಯೋಗಿನ್ ಮಾ ನಗುತ್ತ ಪ್ರವೇಶಿಸಿದರು. ಅವರ ಕಾಲು ನನ್ನ ದೇಹಕ್ಕೆ ತಾಕಿತು. ಅವರು ನನಗೆ ನಮಸ್ಕಾರಮಾಡುವುದಕ್ಕೆ ಮುಂಚೆ ನಾನೇ ಅವರಿಗೆ ನಮಸ್ಕಾರ ಮಾಡಿದೆ. "ಏನು ನನಗೆ ಕೈಮುಗಿಯುವಿರಿ ಯೋಗಿನ್ ಮಾ. ನಾನು ನಿಮ್ಮ ಪಾದ ಧೂಳಿಯನ್ನು ಮುಟ್ಟಲೂ ಯೋಗ್ಯಳಲ್ಲ. ನಿಮ್ಮ ಕಾಲು ನನಗೆ ತಾಕಿದರೆ ನೀವೇಕೆ ನನಗೆ ಕೈಮುಗಿಯಬೇಕು?" ಎಂದೆ. ಆಕೆ, "ಏತಕ್ಕೆ, ಹಾವು ಸಣ್ಣದಾದರೇನು? ದೊಡ್ಡದಾದರೇನು? ಹಾವು ಹಾವೆ. ನೀವೆಲ್ಲಾ ಭಕ್ತರು. ನಮ್ಮ ಗೌರವಕ್ಕೆ ಪಾತ್ರರು" ಎಂದರು. ನಾನು ಶ್ರೀಮಾತೆಯನ್ನು ನೋಡಿದೆ. ಅದೇ ದಯಾಪೂರ್ಣ ಮಂದಹಾಸ ಮೂಡಿತ್ತು ಅವರ ಮೊಗದಮೇಲೆ. ನಾನು ರಾತ್ರಿ ಹೊತ್ತಾದ ಮೇಲೆ ಅವರಿಂದ ಬೀಳ್ಕೊಟ್ಟೆ.

೨೮ ನೇ ಜುಲೈ, ೧೯೧೮.

ನಾನು ಬಾಗ್‌ಬಜಾರಿನಲ್ಲಿ ಶ್ರೀಮಾತೆಯವರ ದರ್ಶನಕ್ಕೆ ಬಂದಾಗ ಸಂಜೆ. ಮಂಗಳಾರತಿಗೆ ಮುಂಚೆ ವಯಸ್ಸಾದ ಒಬ್ಬ ವೃದ್ಧೆ ಬಂದು ಅವರಿಗೆ ಕಾಲು ಮುಟ್ಟಿ ನಮಸ್ಕರಿಸಿದರು. ಸ್ವಲ್ಪ ಅಸಮಾಧಾನದಿಂದ ಶ್ರೀಮಾತೆ, "ಕಾಲನ್ನು ಮುಟ್ಟಿ ಏತಕ್ಕೆ ನಮಸ್ಕಾರಮಾಡುವಿ. ನನಗೆ ಅನಾರೋಗ್ಯ, ಇದರಿಂದ ಮತ್ತು ಹೆಚ್ಚಾಗುವುದು" ಎಂದರು. ಆಕೆ ಹೋದಮೇಲೆ ಶ್ರೀಮಾತೆ ತಮ್ಮ ಕಾಲನ್ನು ಜಲದಿಂದ ತೊಳೆದುಕೊಂಡರು.

ಅನಂತರ ನಾನು ತೈಲವನ್ನು ಅವರ ದೇಹಕ್ಕೆ ಲೇಪಿಸುತ್ತಿದ್ದಾಗ ಲಲಿತಬಾಬು ಎಂಬ ಪ್ರಖ್ಯಾತ ಗೃಹಸ್ಥಶಿಷ್ಯನ ವಿಷಯ ಬಂದಿತು. "ಆತ ಒಮ್ಮೆ ಬಹಳ ಖಾಯಿಲೆ ಬಿದ್ದಿದ್ದಾಗ ನಿಮ್ಮ ದಯದಿಂದ ಗುಣವಾದನು ಎಂದು ಕೇಳಿದ್ದೆ" ಎಂದೆ.

ಶ್ರೀಮಾತೆ:– ಅವನಿಗೆ ಹಲವು ಬಯಕೆಗಳಿದ್ದವು. ಆತ ಶೋಭೆಯಿಂದ ನರುಳುತ್ತಿದ್ದ. ಆತ ದೀನಸ್ವರದಿಂದ, "ತಾಯಿ, ನಾನು ಜಯರಾಮವಟಿ ಕಮಾರಪುಕೂರದಲ್ಲಿ ಶಾಲೆ, ಔಷಧಾಲಯ ಕಟ್ಟಬೇಕೆಂದಿರುವೆನು. ಆದರೆ ಈ ಬಯಕೆ ಈಡೇರುವಂತೆ ಇಲ್ಲ" ಎಂದನು.

ಶ್ರೀರಾಮಕೃಷ್ಣರು ಅವನನ್ನು ರಕ್ಷಿಸಿದರು. ಈಗ ಅದನ್ನು ನೆರವೇರಿಸ ಬೇಕೆಂದಿರುವನು. ನನಗೆ ಒಂದು ಕೊಳವನ್ನು ಕೊಂಡಿರುವನು.

೨೯ ನೇ ಜುಲೈ, ೧೯೧೮.

ಶ್ರೀರಾಮಕೃಷ್ಣರ ಶಿಷ್ಯ ಸ್ವಾಮಿ ಪ್ರೇಮಾನಂದರು ಸಂಜೆ ಕಾಲ ವಾದರು. ನಾನು ಶ್ರೀಮಾತೆ ದರ್ಶನಕ್ಕೆ ಸಂಜೆ ಹೋದೆ. "ಬಾ ಮಗು, ಒಳಗೆ ಕುಳಿತುಕೊ. ಈ ದಿನ ನನ್ನ ಬಾಬುರಾಮ (ಪ್ರೇಮಾನಂದ) ಕಾಲವಾದ. ಬೆಳಗಿನಿಂದ ಅಳುತ್ತಿರುವೆ" ಎಂದರು. ಪುನಃ ಕಂಬನಿ ದುಂಬಿದರು. "ಬಾಬುರಾಮ ನನಗೆ ಅತಿ ನಿಕಟವಾಗಿದ್ದ. ಬೇಲೂರು ಮಠದ ಶಕ್ತಿ, ಭಕ್ತಿ, ವಿವೇಕವೆಲ್ಲ ಅವನಲ್ಲಿ ಮೂರ್ತಿವತ್ತಾಗಿತ್ತು. ಅವನು ಮಠದ ಬೆಳಕಾಗಿದ್ದನು. ಅವನ ತಾಯಿ ಬಡವಳು. ತಂದೆಯ ಆಸ್ತಿ ಬಂತು, ಆದರಿಂದ ಸ್ವಲ್ಪ ಗರ್ವ ಹುಟ್ಟಿತು. ಇದನ್ನು ಅವಳೇ ಒಪ್ಪಿಕೊಂಡು ಒಂದು ದಿನ ನನಗೆ "ಕೆಲವು ಚಿನ್ನದ ಒಡವೆ ನನ್ನಲ್ಲಿ ಇತ್ತು. ಪ್ರಪಂಚವನ್ನು ಒಂದು ಕಸದ ಗುಂಡಿ ಎಂದು ಭಾವಿಸಿದ್ದೆ" ಎಂದಳು. ಅವಳ ಹಿಂದೆ ನಾಲ್ಕು ಜನ ಮಕ್ಕಳಿರುವರು. ಒಂದು ಮಗು ತಾಯಿ ಇರುವಾಗಲೇ ತೀರಿಕೊಂಡಿತು.

ಕೊಂಚ ಕಾಲದಮೇಲೆ ದಕ್ಷಿಣದ ಗೋಡೆಗೆ ಹಾಕಿದ ಶ್ರೀರಾಮ ಕೃಷ್ಣರ ಚಿತ್ರಕ್ಕೆ ಅವರ ಪಾದದಡಿಯಲ್ಲಿ ಬಾಗಿ "ಭಗವಾನ್, ಬಾಬು ರಾಮನನ್ನು ಕರೆದುಕೊಂಡು ಬಿಟ್ಟೆ" ಎಂದು ಅತ್ತರು. ನನಗೆ ಕಣ್ಣೀ ರನ್ನು ತಡೆಯಲಾಗಲಿಲ್ಲ.

ಗುಲಾಬ್‌ಮಾಗೆ ಬಹಳ ರಕ್ತಭೇಧಿಯಾಗಿತ್ತು. ಆಕೆ ತನ್ನ ಕೊನೆ ಗಾಲದಲ್ಲಿದ್ದಳು.

೩೦ ನೇ ಜುಲೈ, ೧೯೧೮.

ಸಂಜೆ ಏಳೂವರೆ ಗಂಟೆಯಾಗಿತ್ತು. ಶ್ರೀಮಾತೆ ದೇವರ ಮನೆ ಯಲ್ಲಿ ಕುಳಿತಿದ್ದರು. ಇಂದೂ ಕೂಡ ದಿವಂಗತ ಪ್ರೇಮಾನಂದಸ್ವಾಮಿಜಿ ಯವರನ್ನು ಕುರಿತು ಮಾತನಾಡಿದರು. "ಮಗು, ಬಾಬುರಾಮನ ದೇಹ ದಲ್ಲಿ ಖಾಯಿಲೆ ಆದಮೇಲೆ ಮಾಂಸವು ಇರಲಿಲ್ಲ, ರಕ್ತವೂ ಇರಲಿಲ್ಲ. ಕೇವಲ ಅಸ್ತಿಪಂಜರವಾಗಿದ್ದ." ಚಂದ್ರಬಾಬು ಕೋಣೆಗೆ ಬಂದು ಮಾತಿ ನಲ್ಲಿ ಭಾಗವಹಿಸಿದ. ಸ್ವಾಮಿಗಳ ದೇಹದ ಅಂತ್ಯಕ್ರಿಯೆಗೆ ಕೆಲವು ಭಕ್ತರು ನಾನೂರು ಐನೂರು ರೂಪಾಯಿ ಬೆಲೆ ಬಾಳುವ ಗಂಧದ ಚಕ್ಕೆ, ಬೆಣ್ಣೆ,

ಹೂವು, ಊದುಕಡ್ಡಿ ಕೊಟ್ಟರು, ಎಂದನು. ಶ್ರೀಮಾತೆ, “ಅವರ ಹಣ ಸದ್ವಿನಿಯೋಗವಾಯಿತು. ಭಕ್ತನೊಬ್ಬನಿಗೆ ಖರ್ಚುಮಾಡಿರುವರು. ದೇವರು ಅವರಿಗೆ ಬೇಕಾದಷ್ಟು ಕೊಟ್ಟಿರುವನು. ಇನ್ನೂ ಕೊಡುವನು” ಎಂದು ಹೇಳಿದರು. ಚಂದ್ರಬಾಬು ಹೊರಟನು.

“ಮಗು, ಕೇಳು. ಮನುಷ್ಯ ಎಷ್ಟೇ ತಪಸ್ವಿಯಾಗಲೀ, ದೇಹ ದಲ್ಲಿ ವಾಸಮಾಡಿದ್ದಕ್ಕೆ ಬಾಡಿಗೆಯ ಕೊನೆ ಕುರುಡು ಕಾಸನ್ನೂ ಕೊಡ ಬೇಕು. ಮಹಾತ್ಮನಿಗೂ ಸಾಧಾರಣ ಮನುಷ್ಯನಿಗೂ ವ್ಯತ್ಯಾಸ ಇದು: ಸಾಧಾರಣ ಜೀವಿ ಪ್ರಪಂಚವನ್ನು ಬಿಡುವಾಗ ಅಳುವನು. ಮುಕ್ತ ಜೀವಿ ನಗುವನು. ಮೃತ್ಯು ಅವನಿಗೊಂದು ಆಟ.”

ಬಾಬುರಾಮ ಸಣ್ಣ ವಯಸ್ಸಿನಲ್ಲೇ ಶ್ರೀರಾಮಕೃಷ್ಣರ ಬಳಿಗೆ ಬಂದನು. ಶ್ರೀರಾಮಕೃಷ್ಣರು ಹುಡುಗರ ಹತ್ತಿರ ಬಹಳ ಹಾಸ್ಯಮಾಡು ತ್ತಿದ್ದರು. ಪಕ್ಕೆ ಸಿಡಿಯುವಂತೆ ನಗುತ್ತ ನೆಲದಮೇಲೆ ನರೇಂದ್ರ, ಬಾಬು ರಾಮ ಹೊರಳಾಡುತ್ತಿದ್ದರು. ಕಾಸಿಪುರದ ತೋಟದ ಮನೆಯಲ್ಲಿ ಎರಡೂವರೆ ಸೇರು ಹಾಲನ್ನು ತೆಗೆದುಕೊಂಡು ನಾನು ಮೆಟ್ಟಲನ್ನು ಹತ್ತು ತ್ತಿದ್ದೆ. ನನಗೆ ತಲೆ ಸುತ್ತಿ ಹಾಲು ನೆಲಕ್ಕೆ ಚೆಲ್ಲಿತು. ಕಾಲು ಉಳುಕಿತು. ನರೇನ್, ಬಾಬುರಾಮ ಓಡಿ ಬಂದು ನನ್ನನ್ನು ಉಪಚರಿಸಿದರು. ಕಾಲು ಊದಿತು. ಶ್ರೀರಾಮಕೃಷ್ಣರು ಈ ಘಟನೆ ಕೇಳಿ ಬಾಬುರಾಮನಿಗೆ, “ಒಳ್ಳೆಯ ತಾಪತ್ರಯ ಬಂತಲ್ಲ! ಯಾರು ಈಗ ಅಡಿಗೆಮಾಡುವರು, ನನಗೆ ಊಟ ಕೊಡುವರು?” ಎಂದರು. ಆಗ ಅವರು ಗಂಟಲಿನ ವ್ರಣದಿಂದ ನರಳುತ್ತಿದ್ದರು. ಗಂಜಿಯನ್ನು ಮಾತ್ರ ತೆಗೆದುಕೊಳ್ಳು ತ್ತಿದ್ದರು. ಗಂಜಿಯನ್ನು ತಯಾರಿಸಿ ಮೇಲಂತಸ್ತಿನ ಕೋಣೆಯಲ್ಲಿ ಅವ ರಿಗೆ ಊಟಮಾಡಿಸುತ್ತಿದ್ದೆ. ಆಗ ನನಗೆ ಮೂಗು ಬಟ್ಟು ಇತ್ತು. ನನ್ನನ್ನು ಇತರರಿಗೆ ಜ್ಞಾಪಿಸಲು ತಮ್ಮ ಮೂಗನ್ನು ತೋರಿಸಿ ನನ್ನ ವಿಷಯವನ್ನು ಹೇಳುತ್ತಿದ್ದರು. ಬಾಬುರಾಮನಿಗೆ, “ಬಾಬುರಾಮ, ಅವಳನ್ನು ಒಂದು ಬುಟ್ಟಿಯಲ್ಲಿ ಕೂರಿಸಿ ಇಲ್ಲಿಗೆ ತರುವೆಯಾ?” ಎಂದರು. ಬಾಬುರಾಮ ಮತ್ತು ನರೇಂದ್ರನಿಗೆ ಇದನ್ನು ಕೇಳಿ ನಗು ತಡೆಯಲಾಗಲಿಲ್ಲ. ಅವರು ಹೀಗೆ ಹಾಸ್ಯಮಾಡುತ್ತಿದ್ದರು. ಮೂರು ದಿನವಾದಮೇಲೆ ಊದು ಇಳಿಯಿತು. ಅನಂತರ ಊಟವನ್ನು ಮಹಡಿ ಮೇಲಕ್ಕೆ ತೆಗೆದುಕೊಂಡು ಹೋಗಲು ಸಹಾಯಮಾಡಿದರು.

ಬಾಬುರಾಮ ತನ್ನ ತಾಯಿಗೆ, 'ನೀನು ನನ್ನನ್ನು ಎಷ್ಟು ಕಡಿಮೆ ಪ್ರೀತಿಸುವೆ? ನೀನು ಶ್ರೀರಾಮಕೃಷ್ಣರು ನನ್ನನ್ನು ಪ್ರೀತಿಸುವಷ್ಟು ಪ್ರೀತಿಸುವೆಯಾ?' ಎಂದು ಕೇಳಿದನು. ತಾಯಿ, 'ನಿನಗೆ ಬುದ್ಧಿ ಇಲ್ಲ. ನಾನು ನಿನ್ನ ತಾಯಿ, ಪ್ರೀತಿಸುವುದಿಲ್ಲವೆ?' ಎನ್ನುತ್ತಿದ್ದಳು. ಶ್ರೀರಾಮಕೃಷ್ಣರು ಅಷ್ಟು ನಿಕಟವಾಗಿ ಪ್ರೀತಿಸುತ್ತಿದ್ದರು. ಬಾಬುರಾಮನಿಗೆ ನಾಲ್ಕು ವರುಷವಾಗಿದ್ದಾಗಲೇ ತಾಯಿಗೆ, 'ನಾನು ಮದುವೆಯಾಗುವುದಿಲ್ಲ. ಹಾಗೆ ಆಗಬೇಕಾಗಿ ಬಂದರೆ ಪ್ರಾಣಬಿಡುತ್ತೇನೆ' ಎನ್ನುತ್ತಿದ್ದ. ಶ್ರೀರಾಮಕೃಷ್ಣರಿಗೆ ಕಂಠವ್ರಣವಾಗಿ ಏನನ್ನು ತಿನ್ನಲು ಆಗದೆ ಇರುವಾಗ, 'ನಾನು ನಂತರ ಸೂಕ್ಷ್ಮದೇಹದಲ್ಲಿ ಲಕ್ಷಾಂತರ ಬಾಯಿನಿಂದ ಸ್ವೀಕರಿಸುವೆನು' ಎಂದರು. ಅದಕ್ಕೆ ಬಾಬುರಾಮ, 'ನಿಮ್ಮ ಲಕ್ಷಾಂತರಬಾಯಿ, ಸೂಕ್ಷ್ಮ ದೇಹ ಇವು ಯಾವುವೂ ನನಗೆ ಬೇಕಾಗಿಲ್ಲ. ನನಗೆ ಬೇಕಾಗಿರುವುದು, ನೀವು ಈ ದೇಹದ ಮೂಲಕ ತಿನ್ನುವುದು, ನಾನು ಅದನ್ನು ನೋಡುವುದು' ಎಂದ.

ಶ್ರೀರಾಮಕೃಷ್ಣರು ಹೆಚ್ಚು ಮಕ್ಕಳಿರುವ ಯಾರನ್ನೂ ಭಕ್ತರನ್ನಾಗಿ ಸ್ವೀಕರಿಸುತ್ತಿರಲಿಲ್ಲ. "ಇಪ್ಪತ್ತೈದು ಮಕ್ಕಳನ್ನು ಹೆರುವುದು ಎಂತಹ ನಾಚಿಕೆಗೇಡು, ಸ್ವಲ್ಪವೂ ಇಂದ್ರಿಯ ನಿಗ್ರಹವಿಲ್ಲ. ಅವನೇನು ಮನುಷ್ಯನೆ? ನಿಜವಾಗಿ ಮೃಗ!"

ಗುಲಾಬ್‌ಮಾ ರಕ್ತಬೇಧಿಯಿಂದ ನರಳುತ್ತಿದ್ದರು. ಇಂದು ಸ್ವಲ್ಪ ಹುಷಾರಾಗಿದ್ದರು. ಪೂರ್ಣ ಗುಣಮುಖವಾಗಬೇಕಾದರೆ ಮೂರು ತಿಂಗಳು ಹಿಡಿಯುವುದೆಂದು ವೈದ್ಯರು ಹೇಳಿದರು. "ರಕ್ತಬೇಧಿ ಸಾಧಾರಣ ಖಾಯಿಲೆ ಅಲ್ಲ. ಶ್ರೀರಾಮಕೃಷ್ಣರಿಗೆ ಅನೇಕ ವೇಳೆ ಬರುತ್ತಿತ್ತು. ಸಾಧಾರಣವಾಗಿ ಮಳೆಗಾಲದಲ್ಲಿ ಬರುತ್ತಿತ್ತು. ಒಂದು ಸಲ ಅದು ತುಂಬಾ ದಾರುಣವಾಗಿಯೇ ಇತ್ತು. ನಾನು ಅವರಿಗೆ ಶುಶ್ರೂಷೆ ಮಾಡುತ್ತಿದ್ದೆ. ಕಾಶಿಯಿಂದ ದಕ್ಷಿಣೇಶ್ವರಕ್ಕೆ ಒಬ್ಬ ಹೆಂಗಸು ಬಂದಿದ್ದಳು. ಆಕೆ ಒಂದು ಚಿಕಿತ್ಸೆ ಹೇಳಿದಳು. ಅದರಂತೆ ಮಾಡಲು ಬೇಗ ಅವರಿಗೆ ಗುಣವಾಯಿತು. ಆಕೆಯನ್ನು ನಾನು ಅನಂತರ ಕಾಣಲೇ ಇಲ್ಲ. ಆಕೆ ನನಗೆ ಎಷ್ಟೋ ಸಹಾಯ ಮಾಡಿದಳು. ಕಾಶಿಯಲ್ಲಿ ಅವರನ್ನು ವಿಚಾರಿಸಿದೆ. ಸಿಕ್ಕಲೇ ಇಲ್ಲ. ಶ್ರೀರಾಮಕೃಷ್ಣರಿಗೆ ಯಾವಾಗಲಾದರೂ ಅವಶ್ಯಕತೆಯಿದ್ದಾಗ ಬೇಕಾದ ಜನ ಎಲ್ಲಿಂದಲೋ ಬಂದು ಹಾಗೆಯೇ ಮಾಯವಾಗುತ್ತಿದ್ದರು. ಇದನ್ನು ನಾವು ಹಲವು ವೇಳೆ ನೋಡಿರುವೆವು.

"ಮಗು, ನನಗೂ ಆಮಶಂಕೆಯಾಗಿತ್ತು. ದೇಹ ಒಂದು ಅಸ್ಥಿ ಪಂಜರದಂತೆ ಆಯಿತು. ನಾನು ಒಂದು ಕೆರೆಯ ಹತ್ತಿರ ಮಲಗುತ್ತಿದ್ದೆ. ನೀರಿನಲ್ಲಿ ಒಂದು ದಿನ ನೆರಳನ್ನು ನೋಡಿಕೊಂಡಾಗ ನನ್ನ ದೇಹ ಒಂದು ಎಲುಬಿನ ಗೂಡಿನಂತೆ ಇತ್ತು. ಇಂತಹ ದೇಹದಿಂದ ಪ್ರಯೋಜನ ವೇನು. ಇದನ್ನು ಇಲ್ಲೇ ತ್ಯಜಿಸುವೆ ಎಂದು ಇದ್ದೆ. ಆ ಸಮಯದಲ್ಲಿ ಒಬ್ಬ ಹೆಂಗಸು ಬಂದು 'ಏಕೆ ತಾಯಿ ಇಲ್ಲಿರುವಿರಿ? ಬನ್ನಿ ಮನೆಗೆ ಹೋಗೋಣ' ಎಂದು ಕರೆದುಕೊಂಡು ಹೋದಳು." ರಾತ್ರಿ ಹಿಂತಿರುಗಿ ಹೋಗುವಾಗ ಹೊತ್ತಾಗಿತ್ತು.

೩೧ ನೇ ಜುಲೈ, ೧೯೧೮.

ಇಂದು ಶ್ರೀಮಾತೆಯವರೊಬ್ಬರೇ ಇದ್ದರು. ಅವರೊಡನೆ ಬಹಳ ಹೊತ್ತು ಮಾತನಾಡುತ್ತಾ ಇದ್ದೆ. ನಮ್ಮ ಸಂಭಾಷಣೆ ಪರಮಹಂಸರ ಸನ್ಯಾಸಿ ಶಿಷ್ಯವರ್ಗದವರ ಕಡೆ ತಿರುಗಿತು. ಪ್ರೇಮಾನಂದರ ನಿಧನ ವಾದಮೇಲೆ ಶ್ರೀಮಾತೆ ಅವರ ಶಿಷ್ಯರನ್ನು ಕುರಿತು ಚಿಂತಿಸುತ್ತಿದ್ದ ರೇನೊ! ಆ ಶಿಷ್ಯರನ್ನು ಕುರಿತು, "ಶ್ರೀರಾಮಕೃಷ್ಣರು ಶಿಷ್ಯರನ್ನು ಚೆನ್ನಾಗಿ ಪರೀಕ್ಷಿಸಿ ಅದಮೇಲೆ ಸ್ವೀಕರಿಸುತ್ತಿದ್ದರು. ಶ್ರೀರಾಮಕೃಷ್ಣರ ಕಾಲಾನಂತರ ಎಂತಹ ಕಠಿಣ ಜೀವನವನ್ನು ಅವರು ಬಾರಾನಗರ ಮಠ ದಲ್ಲಿ ನಡಿಸಬೇಕಾಯಿತು! ನಿರಂಜನ ಮತ್ತು ಇತರರು ಕೆಲವು ವೇಳೆ ಉಪವಾಸವಿರಬೇಕಾಯಿತು. ತಮ್ಮ ಕಾಲವನ್ನೆಲ್ಲಾ ಪ್ರಾರ್ಥನೆ ಧ್ಯಾನ ಗಳಲ್ಲಿ ಕಳೆದರು. ಒಂದು ದಿನ ಆ ತರುಣ ಶಿಷ್ಯರು ತಮ್ಮಲ್ಲಿ ಮಾತ ನಾಡಿಕೊಳ್ಳುತ್ತಿದ್ದರು: 'ನಾವು ಶ್ರೀರಾಮಕೃಷ್ಣರ ಹೆಸರಿನಲ್ಲಿ ಎಲ್ಲ ವನ್ನೂ ತೊರೆದೆವು. ಅವರನ್ನೇ ನೆಚ್ಚಿಕೊಂಡಿದ್ದರೆ ಅವರು ಆಹಾರವನ್ನು ಒದಗಿಸುತ್ತಾರೆಯೇ ನೋಡೋಣ! ನಾವು ಯಾರಿಗೂ ಇದನ್ನು ತಿಳಿಸು ವುದಿಲ್ಲ. ಇವತ್ತು ಹೊರಗೆ ಭಿಕ್ಷಕ್ಕೆ ಹೋಗುವುದಿಲ್ಲ' ದೇಹದಮೇಲೆ ಬಟ್ಟೆ ಹೊದೆದುಕೊಂಡು ಧ್ಯಾನಕ್ಕೆ ಕುಳಿತರು. ದಿನವೆಲ್ಲ ಕಳೆಯಿತು. ರಾತ್ರೆ ಹೊತ್ತಾಗಿತ್ತು. ಬಾಗಿಲನ್ನು ಯಾರೋ ತಟ್ಟಿದರು. ನರೇಂದ್ರ ಎಚ್ಚರ ವಾಗಿ ಹತ್ತಿರ ಇದ್ದವರಿಗೆ 'ಬಾಗಿಲು ತೆರೆ. ಅವನ ಕೈಯಲ್ಲಿ ಏನನ್ನಾ ದರೂ ತಂದಿರುವನೇ ನೋಡು' ಎಂದನು. ಏನು ಅದ್ಭುತ! ಬಾಗಿ ಲನ್ನು ತೆರೆದಾಗ ಒಬ್ಬ ನಿಂತಿದ್ದ. ಗಂಗಾನದಿಯ ತೀರದಲ್ಲಿದ್ದ ಗೋಪಾ ಲನ ದೇವಸ್ಥಾನದಿಂದ ರುಚಿರುಚಿಕರವಾದ ತಿಂಡಿಯನ್ನು ತಂದಿದ್ದ. ಆಗ

ಅವರಿಗೆ ತುಂಬಾ ಆನಂದವಾಯಿತು. ಶ್ರೀರಾಮಕೃಷ್ಣರು ತಮ್ಮನ್ನು ರಕ್ಷಿಸುತ್ತಿರುವವರು ಎಂದು ನಿಸ್ಸಂದೇಹವಾಗಿ ತಿಳಿದರು. ಅಷ್ಟು ಆವೇಳೆ ರಾತ್ರಿಯಲ್ಲಿ ಶ್ರೀರಾಮಕೃಷ್ಣರಿಗೆ ಆಹಾರವನ್ನು ಅರ್ಪಿಸಿ ಪ್ರಸಾದವನ್ನು ಎಲ್ಲರೂ ಸ್ವೀಕರಿಸಿದರು. ಇಂತಹ ಸನ್ನಿವೇಶ ಎಷ್ಟೋ ಸಾರಿ ಬಂತು.. ಈಗ ಅವರಿಗೆ ಕಷ್ಟವಿಲ್ಲ. ನರೇಂದ್ರ (ಸ್ವಾಮಿ ವಿವೇಕಾನಂದ), ಬಾಬು ರಾಮು (ಪ್ರೇಮಾನಂದರು), ಎಷ್ಟು ಕಷ್ಟಪಟ್ಟರು. ನನ್ನ ರಾಖಾಲ (ಬ್ರಹ್ಮಾನಂದ) ಈಗ ರಾಮಕೃಷ್ಣ ಸಂಘಕ್ಕೆ ಅಧ್ಯಕ್ಷನಾಗಿರುವನು. ಅವನೂ ಕೂಡ ಅನೇಕ ದಿನ ಮುಸುರೆ ತಿಕ್ಕಬೇಕಾಯಿತು. ನರೇಂದ್ರ ಪರಿವ್ರಾಜಕನಾಗಿ ಉತ್ತರ ಇಂಡಿಯಾದಲ್ಲಿ ಸಂಚರಿಸುತ್ತಿದ್ದ. ಒಂದು ಸಲ ಎರಡು ದಿನದಿಂದ ಊಟವಿರಲಿಲ್ಲ. ಒಂದು ಮರದ ಕೆಳಗೆ ಮಲಗಿದ್ದನು. ಹತ್ತಿರದಲ್ಲೇ ಒಬ್ಬ ಕೈಯಲ್ಲಿ ಒಂದು ಚೊಂಬು ನೀರು, ಶುಚಿಕರವಾದ ಆಹಾರವನ್ನು ಹಿಡಿದುಕೊಂಡು, 'ರಾಮನ ಪ್ರಸಾದವಿದೆ. ದಯವಿಟ್ಟು ಇದನ್ನು ಸ್ವೀಕರಿಸಿ' ಎಂದನು. ನರೇಂದ್ರ 'ನನಗೆ ನಿನ್ನ ಪರಿಚಯವಿಲ್ಲ. ನೀನು ಯಾರನ್ನೋ ತಪ್ಪು ತಿಳಿದು ಕೊಂಡಿರಬಹುದು' ಎಂದನು. ಆತ ಅತಿ ದೈನ್ಯದಿಂದ, 'ಇಲ್ಲ ಸ್ವಾಮಿ, ನಾನು ನಿಮಗಾಗಿ ಇದನ್ನು ತಂದೆ. ನಾನು ಮಧ್ಯಾಹ್ನ ನಿದ್ರಿಸುತ್ತಿದ್ದೆ. ಆಗ ಕನಸಿನಲ್ಲಿ ಒಬ್ಬ ಬಂದು, 'ಒಬ್ಬ ಸಾಧು, ಮರದ ಕೆಳಗೆ ಮಲಗಿರುವನು. ಅವನಿಗೆ ಊಟ ಕೊಡು' ಎಂದಂತೆ ಆಯಿತು. ನಾನು ಇದೆಲ್ಲ ಕನಸು ಎಂದು ಸುಮ್ಮನೆ ಇದ್ದೆ. ಪುನಃ ಮಗ್ಗಲಿಗೆ ತಿರುಗಿ ನಿದ್ರಿಸಿದೆ, ಪುನಃ ಅದೇ ಮನುಷ್ಯ ಕನಸಿನಲ್ಲಿ ಬಂದು ನೂಕಿ, 'ನಾನು ಏಳು ಎನ್ನುತ್ತಿರುವೆ. ನೀನು ಇನ್ನೂ ಮಲಗಿರುವೆಯಾ? ವಿಳಂಬಮಾಡದೆ ಹೇಳಿದಂತೆ ಕೇಳು' ಎಂದನು. ಅನಂತರ, ಇದು, ಭ್ರಾಂತಿಯ ಕನಸಲ್ಲ, ರಾಮನ ಆಜ್ಞೆ ಎಂದು ತಿಳಿದೆ. 'ಅವನ ಅಪ್ಪಣೆ ಪ್ರಕಾರ ಇವನ್ನು ನಿಮಗೆ ತಂದೆ ಸ್ವಾಮಿ' ಎಂದನು. ನರೇಂದ್ರನಿಗೆ ಇದೆಲ್ಲಾ ಶ್ರೀರಾಮಕೃಷ್ಣರ ಕೃಪೆ ಎಂದು ತಿಳಿದು ಅದನ್ನು ಸಂತೋಷದಿಂದ ಸ್ವೀಕರಿಸಿದನು.

"ಹೀಗೆಯೇ ಮತ್ತೊಂದು ದಿನ ನಡೆಯಿತು. ಹಿಮಾಲಯದಲ್ಲಿ ನರೇಂದ್ರ ಮೂರು ದಿನ ಊಟವಿಲ್ಲದೆ ನಡೆಯುತ್ತಿದ್ದ. ಪ್ರಜ್ಞೆ ತಪ್ಪಿ ಬೀಳುವುದರಲ್ಲಿದ್ದ. ಆಗ ಒಬ್ಬ ಫಕೀರ ಬಂದು ಸೌತೆಕಾಯಿಯನ್ನು ಅವ

ನಿಗೆ. ಕೊಟ್ಟು ಪ್ರಾಣ ಉಳಿಸಿದ. ಅಮೇರಿಕಾದಿಂದ ಬಂದ ಮೇಲೆ ಆಲ್ಮೋರಾದಲ್ಲಿ ನರೇಂದ್ರ ಒಂದು ಕಡೆ ಉಪನ್ಯಾಸಕೊಡುತ್ತಿದ್ದ. ಆ ಫಕೀರ ಒಂದು ಕಡೆ ಕುಳಿತಿರುವುದು ಕಂಡಿತು. ತಕ್ಷಣ ಅಲ್ಲಿಗೆ ಹೋಗಿ ಅವನನ್ನು ಕರೆದು ಸಭೆಯ ಮಧ್ಯದಲ್ಲಿ ಕುಳ್ಳಿರಿಸಿದನು. ಸಭಿಕರಿಗೆ ಆಶ್ಚರ್ಯವಾಯಿತು. 'ಈತ ನನ್ನ ಪ್ರಾಣವನ್ನು ಒಮ್ಮೆ ಉಳಿಸಿದ' ಎಂದು, ಹಿಂದಿನ ಘಟನೆಯನ್ನೆಲ್ಲ ವಿವರಿಸಿದನು. ಫಕೀರನಿಗೆ ಸ್ವಲ್ಪ ಹಣವನ್ನು ಕೊಟ್ಟನು. ಮೊದಲು ಆತ ಅದನ್ನು ತೆಗೆದುಕೊಳ್ಳಲಿಲ್ಲ. 'ನಾನು ಮಾಡಿರುವುದೇನು? ನೀವು ನನಗೆ ಹಣ ಕೊಡುವುದಕ್ಕೆ ಕಾತುರರಾಗಿ ರುವಿರಲ್ಲ?'' ಎಂದನು. ಮಾತನ್ನು ಕೇಳದೆ ಬಲಾತ್ಕಾರವಾಗಿ ಕೊಂಚ ಹಣವನ್ನು ನರೇಂದ್ರನು ಅವನಿಗೆ ಕೊಟ್ಟನು.

"ನರೇಂದ್ರ ಮೊದಲನೆ ದುರ್ಗಾ ಪೂಜೆಯ ಸಮಯದಲ್ಲಿ ನನ್ನನ್ನು ಬೇಲೂರು ಮಠಕ್ಕೆ ಕರೆದುಕೊಂಡು ಹೋಗಿ ನನ್ನ ಮೂಲಕ ಪುರೋಹಿತ ರಿಗೆ ಇಪ್ಪತ್ತೈದುರೂಪಾಯಿ ದಕ್ಷಿಣೆ ಕೊಡಿಸಿದನು. ಆ ಸಮಯದಲ್ಲಿ ಸುಮಾರು ಸಾವಿರದ ನಾನ್ನೂರು ರೂಪಾಯಿ ಪೂಜೆಗೆ ಖರ್ಚುಮಾಡಿ ದರು. ಜನ ಸಂದಣಿ ಹೆಚ್ಚಾಯಿತು. ಸನ್ಯಾಸಿಗಳು ಶ್ರಮಪಟ್ಟು ಕೆಲಸ ಮಾಡಿದರು. ನರೇಂದ್ರ ಹತ್ತಿರ ಬಂದು 'ತಾಯಿ, ಜ್ವರ ಬಂದು ಮಲಗುವಂತೆ ಅನುಗ್ರಹಿಸಿ' ಎಂದು ಕೇಳಿಕೊಂಡ. ಇದನ್ನು ಕೇಳಿ ದೊಡನೆ ಜ್ವರದಿಂದ ನರಳಲು ಪ್ರಾರಂಭಿಸಿದ. 'ಅಯ್ಯೊ ದೇವರೆ! ಈಗ ಹೇಗೆ ಗುಣವಾಗುವುದು' ಎಂದು ನಾನು ಕಾತರಳಾದೆ. 'ಇದಕ್ಕೆ ಕಳವಳಪಡಬೇಡಿ. ನಾನೇ ಬೇಡಿಕೊಂಡೆ. ಇದಕ್ಕೆ ಕಾರಣವೇನೆಂದರೆ, ಹುಡುಗರು ಇಷ್ಟು ಕಷ್ಟಪಟ್ಟು ಕೆಲಸಮಾಡುತ್ತಿರುವರು. ಅವರಲ್ಲಿ ಏನಾ ದರೂ ತಪ್ಪು ಕಂಡರೆ ರೇಗುವೆನು. ಅವರಿಗೆ ಹೊಡೆದರೂ ಹೊಡೆಯ ಬಹುದು. ಅವರಿಗೂ ನನಗೂ ಇದರಿಂದ ದುಃಖವಾಗಬಹುದು. ಅದಕ್ಕೆ ಜ್ವರದಿಂದ ಮಲಗುವುದು ಮೇಲೆಂದೆ.' ಪೂಜೆ ಎಲ್ಲ ಆದಮೇಲೆ ನಾನು ಅವನಿಗೆ 'ಮಗು ಪೂಜೆ ಆಯಿತು. ಈಗ ಏಳು' ಎಂದೆ. 'ನಾನು ಹುಷಾರಾಗಿ ಇರುವೆ.'' ಎಂದು ಹಾಸಿಗೆಯಿಂದ ಎದ್ದ.

"ದುರ್ಗಾಪೂಜೆ ಸಮಯದಲ್ಲಿ ನರೇಂದ್ರ ತನ್ನ ತಾಯಿ ಯನ್ನು ಕರೆದುಕೊಂಡು ಬಂದಿದ್ದ. ಆಕೆ ತೋಟದಿಂದ ತೋಟಕ್ಕೆ ಹೋಗಿ ಮೆಣಸಿನಕಾಯಿ, ಬದನೆಕಾಯಿ ಬಿಡಿಸುವುದರಲ್ಲಿ

ನಿರತಳಾಗಿದ್ದಳು. ಇದೆಲ್ಲ ತನ್ನ ಮಗ ನರೇಂದ್ರ ಮಾಡಿದುದು ಎಂಬ ಅಹಂಕಾರವಿತ್ತು. ನರೇಂದ್ರ ತನ್ನ ತಾಯಿಯ ಹತ್ತಿರ ಬಂದು, 'ಏನು ಮಾಡುತ್ತಿರುವಿ ಅಮ್ಮ. ಶ್ರೀಮಾತೆಯನ್ನು ಏತಕ್ಕೆ ಸಂದರ್ಶಿಸಬಾರದು? ಬರೀ ತರಕಾರಿ ಬಿಡಿಸುತ್ತಿರುವಿಯಲ್ಲ? ಬಹುಶ: ನಿನ್ನ ಮಗ ಇದನ್ನೆಲ್ಲಾ ಮಾಡಿದನೆಂದು ಯೋಚಿಸುತ್ತಿರಬಹುದು. ಇಲ್ಲ ಅಮ್ಮ, ನೀನು ತಪ್ಪು ತಿಳಿದು ಕೊಂಡಿರುವುದು. ಇದನ್ನೆಲ್ಲಾ ಮಾಡಿದವರು ಅವರು' ಎಂದನು. ಶ್ರೀರಾಮಕೃಷ್ಣರ ಕೃಪೆಯಿಂದ ಮಠಸ್ಥಾಪನೆ ಆಯಿತೆಂದನು. ಎಂತಹ ಅದ್ಭುತ ಭಕ್ತ! ನನ್ನ ಬಾಬುರಾಮ ಕಾಲವಾದ. ಈಸಲ ದುರ್ಗಾ ಪೂಜೆಯ ಸಮಯದಲ್ಲಿ ಯಾರು ಮೇಲ್ವಿಚಾರಣೆ ನೋಡಿಕೊಳ್ಳುವರು?''

೮ ನೇ ಜೂನ್, ೧೯೧೮.

ಶ್ರೀಮಾತೆ ದರ್ಶನಕ್ಕೆ ಹೋದಾಗ ಅವರು ಕೋಣೆಯ ಮುಂದೆ ಧ್ಯಾನದಲ್ಲಿದ್ದರು. ಸ್ವಲ್ಪಹೊತ್ತಾದ ಮೇಲೆ ನಾಲ್ಕೈದು ಜನ ಸ್ತ್ರೀ ಭಕ್ತರು ನಮಸ್ಕಾರ ಮಾಡುವುದಕ್ಕೆ ಬಂದರು. ದೇವರ ಮನೆಯಲ್ಲಿ ಶ್ರೀರಾಮಕೃಷ್ಣರಿಗೆ ನಮಸ್ಕರಿಸಿದರು. ಶ್ರೀಮಾತೆ ಭಕ್ತರನ್ನು ವಿಚಾರಿಸಿ ದರು. ನಳಿನಿ ಪರಿಚಯ ಮಾಡಿಕೊಟ್ಟಳು. ಅವರಲ್ಲಿ ಒಬ್ಬಾಕೆ ಕಲ್ಕತ್ತೆ ಯಲ್ಲಿ ಚಿಕಿತ್ಸೆಗಾಗಿ ಬಂದಿದ್ದಳು. ವೈದ್ಯರು ಹೊಟ್ಟೆಯ ವ್ರಣವೆಂದು ಹೇಳಿದ್ದರು. ಶಸ್ತ್ರಚಿಕಿತ್ಸೆ ಮಾಡಬೇಕೆಂದು ಹೇಳಿದ್ದರು. ಅದಕ್ಕೆ ಆಕೆ ತುಂಬಾ ಅಂಜಿದ್ದಳು. ಶ್ರೀಮಾತೆ ಯಾರಿಗೂ ತಮ್ಮ ಪಾದವನ್ನು ಮುಟ್ಟಲು ಅವಕಾಶ ಕೊಡಲಿಲ್ಲ. ನನಗೆ ಕಾರಣ ತಿಳಿಯದು. ಪದೇ ಪದೇ ಅವರು ಅವರ ಚರಣದ ಧೂಳಿಯನ್ನು ಬೇಡುತ್ತಿದ್ದರು. ಶ್ರೀಮಾತೆ 'ದೂರದಿಂದಲೇ ನಮಸ್ಕರಿಸಿ' ಎಂದರು. ರೋಗಿ ಹುಡುಗಿಯನ್ನು ಸ್ತ್ರೀಯರು ತೋರಿ, 'ದಯವಿಟ್ಟು ಅವಳಿಗೆ ಹರಸಿ. ಪುನಃ ಅವಳು ನಿಮಗೆ ನಮಸ್ಕರಿಸುವಂತೆ ಆಗಲಿ' ಎಂದು ಬೇಡಿಕೊಂಡರು. ಶ್ರೀಮಾತೆ, 'ಶ್ರೀರಾಮಕೃಷ್ಣರಿಗೆ ನಮಸ್ಕರಿಸಿ. ಅವರೇ ಸರ್ವಸ್ವ. ಅವರನ್ನು ಹೃತ್ಪೂ ರ್ವಕ ಪ್ರಾರ್ಥಿಸಿ.' ಶ್ರೀಮಾತೆ ಸ್ವಲ್ಪ ದುಗುಡದಲ್ಲಿದ್ದಂತೆ ಕಂಡಿತು. 'ಮಕ್ಕಳೆ, ಹೋಗಿ ಬನ್ನಿ ಹೊತ್ತಾಗಿದೆ' ಎಂದು ಹೇಳಿಕಳುಹಿಸಿದರು.

ಅವರು ಹೋದ ಮೇಲೆ '' ನೆಲಗುಡಿಸಿ, ಗಂಗಾ ಜಲ ಚಿಮುಕಿಸಿ. ನೈವೇದ್ಯ ಮಾಡುವುದಕ್ಕೆ ಸಮಯವಾಯಿತು '' ಎಂದರು. ಅವರ ಅಪ್ಪಣೆಯನ್ನು ತಕ್ಷಣ ಪಾಲಿಸಲಾಯಿತು.

ಅವರು ಹಾಸಿಗೆಯ ಮೇಲೆ ಮಲಗಿ ಬೀಸುವುದಕ್ಕೆ ಒಂದು ಬೀಸಣಿಗೆಯನ್ನು ಕೊಟ್ಟರು. "ಮಗು, ಸ್ವಲ್ಪ ಬೀಸು ಮೈಯೆಲ್ಲಾ ಸುಡುತ್ತಿದೆ. ನಿನ್ನ ಕಲ್ಕತ್ತೆಗೆ ನಮಸ್ಕಾರ. ಜನ ಇಲ್ಲಿಗೆ ಬಂದು ತಮ್ಮ ತಾಪತ್ರಯದ ಕಂತೆಯನ್ನು ಇಡುವರು. ಇನ್ನೂ ಕೆಲವರು ಅನೇಕ ಪಾಪಕೃತ್ಯಗಳನ್ನು ಮಾಡಿರುವರು. ಮತ್ತೆ ಕೆಲವರು ಇಪ್ಪತ್ತೈದು ಮಕ್ಕಳನ್ನು ಹೆತ್ತಿರುವರು. ಅವರಲ್ಲೂ ಹತ್ತು ಜನ ಸತ್ತರೆಂದು ಅಳುವರು. ಅವರು ಮನುಷ್ಯರೇ! ಸ್ವಲ್ಪವೂ ನಿಗ್ರಹವಿಲ್ಲ. ಮೃಗಗಳು! ಅದಕ್ಕೇ ಶ್ರೀರಾಮಕೃಷ್ಣರು 'ಒಂದು ಸೇರು ಹಾಲಿಗೆ ಐದು ಸೇರು ನೀರು ಬೆರಸಿದಂತೆ ಇದೆ. ಅಂತಹ ಹಾಲನ್ನು ಇಂಗಿಸಬೇಕಾದರೆ ಕಷ್ಟ. ಅದನ್ನು ಕುದಿಸಲು ಬೆಂಕಿ ಊದಿ ಊದಿ, ನನ್ನ ಕಣ್ಣು ಕೆಂಪಗಾಗುತ್ತಿದೆ. ಹಾಲನ್ನು ಇಂಗಿಸುವುದು ಬಹಳ ಕಷ್ಟದ ಕೆಲಸ. ದೇವರಿಗೆ ತಮ್ಮ ಸರ್ವಸ್ವವನ್ನೂ ತೆರಬಲ್ಲ ನನ್ನ ಮಕ್ಕಳೆಲ್ಲಿ? ಅವರು ಬರಲಿ. ಅವರ ಹತ್ತಿರ ಮಾತನಾಡುತ್ತೇನೆ. ಇಲ್ಲದೇ ಇದ್ದರೆ ಜೀವನ ಸಹಿಸಲಸದಳ' ಎನ್ನುತ್ತಿದ್ದರು. ಈ ಮಾತು ಸತ್ಯ. ಮಗು ಬೀಸಣಿಗೆ ನಿಲ್ಲಿಸು. ನಾಲ್ಕು ಗಂಟೆಯಿಂದಲೂ ಜನರು ಈದಿನ ಬರುತ್ತಿರುವರು. ಜನರ ಸಂಕಟವನ್ನು ಇನ್ನು ಸಹಿಸಲಾರೆ.

"ಬಲರಾಮನ ಹೆಂಡತಿಯೂ ಇಂದು ಬಂದಳು. ನನ್ನ ಬಾಬುರಾಮನ ಸಹೋದರಿ ಅವಳು. ಅವನಿಗಾಗಿ ತುಂಬಾ ಅತ್ತಳು. ಆಕೆ ಅಂದಳು 'ಅವನು ನನಗೆ ಸಾಧಾರಣ ಸಹೋದರನೇ? ಇಲ್ಲ. ಸಾಕ್ಷಾತ್ ದೇವರು."

೪ನೇ ಆಗಸ್ಟ್, ೧೯೧೮.

ಡಾಕ್ಟರ್ ದು.. ಬಾಬುವಿನ ಸಹೋದರಿಯೊಂದಿಗೆ ಶ್ರೀಮಾತೆ ಮಾತನಾಡುತ್ತಿದ್ದರು. ಆಕೆ ಬಾಲ್ಯದಲ್ಲಿಯೇ ವಿಧವೆಯಾಗಿದ್ದಳು. ಆಕೆಯ ಗಂಡನ ಆಸ್ತಿಯ ವಿಷಯದಲ್ಲಿ ಸ್ವಲ್ಪ ತಕರಾರು ಇತ್ತು. ಆತನ ಮರಣ ಶಾಸನವನ್ನು ರುಜುವಾತು ಪಡಿಸಲು ಆಗಲಿಲ್ಲ. ಈ ವಿಷಯವನ್ನು ಕುರಿತು ಇತರರು ಮಾತನಾಡುತ್ತಿದ್ದರು. ಕೊನೆಗೆ ಶ್ರೀಮಾತೆ ಆಕೆಗೆ ಹೀಗೆಂದರು: "ನಿನಗೆ ಅವನ ಆಸ್ತಿಯನ್ನು ಮಾರುವುದಕ್ಕೆ ಅಧಿಕಾರವಿಲ್ಲದೆ ಇರುವಾಗ ಒಬ್ಬ ಸಭ್ಯ ಮನುಷ್ಯನ ವಶದಲ್ಲಿಡು. ಪ್ರಪಂಚದಲ್ಲಿ ಇನ್ನು ಆಸ್ತಿ ಮುಂತಾದುವನ್ನು ನೆಚ್ಚ ಕೂಡದು. ನಿಜವಾದ ಸನ್ಯಾಸಿಮಾತ್ರ ಪ್ರಲೋಭನೆಯಿಂದ ಪಾರಾಗಬಲ್ಲ. ತುಂಬಾ ವ್ಯಥೆಪಡಬೇಡ, ಮಗು.

ಭಗವಂತನ ಇಚ್ಛೆಯಂತೆ ಆಗಲಿ. ನೀನು ಸರಿಯಾದ ಮಾರ್ಗದಲ್ಲಿರುವೆ. ದೇವರು ನಿನಗೆ ಕಷ್ಟಕೊಡುವುದಿಲ್ಲ. ಒಳ್ಳೆಯದು ಹೋಗಿ ಬಾ. ಮಧ್ಯೆ ಮಧ್ಯೆ ಕಾಗದ ಬರೆ. ಬಂದು ಹೋಗುತ್ತಿರು" ಎಂದರು.

ಆಕೆ ಹೋದ ಮೇಲೆ, ಆಯುರ್ವೇದ ಪಂಡಿತ ಶಾಮದಾಸ್ ಗುಲಾಬ್‌ಮಾಳನ್ನು ನೋಡಲು ಬಂದರು. ಶ್ರೀಮಾತೆ ಆತನಿಗಾಗಿ ಸ್ವಲ್ಪ ಕಾದರು. ಆದರೆ ಆತನು ಹೊರಟು ಹೋದನೆಂದು ಕೇಳಿ ತಾವು ಹಾಸಿಗೆಯ ಮೇಲೆ ಮಲಗಿ, 'ನೀನು ಈಗ ನಿನ್ನ ಕೆಲಸ ಮಾಡು' ಎಂದರು. ನಾನು ಅವರಿಗೆ ತೈಲವನ್ನು ಲೇಪಿಸಿದೆ. ಶ್ರೀಮಾತೆ, 'ಗಿರೀಶಘೋಷನ ಸಹೋದರಿಗೆ ನನ್ನ ಮೇಲೆ ತುಂಬ ಪ್ರೀತಿ. ಮನೆಯಲ್ಲಿ ಮಾಡಿದ ಅಡಿಗೆಯನ್ನೆಲ್ಲಾ ಸ್ವಲ್ಪ ಸ್ವಲ್ಪ ತೆಗೆದಿಟ್ಟು ನನಗೆ ಕಳುಹಿಸುತ್ತಿದ್ದಳು. ಅವಳಿಗೆ ನನ್ನ ಮೇಲೆ ಬಹಳ ಪ್ರೀತಿ. ಶ್ರೀಮಂತರ ಮನೆಗೆ ಲಗ್ನವಾಗಿತ್ತು. ಬೇಕಾದಷ್ಟು ಐಶ್ವರ್ಯವೂ ಇತ್ತು. ಆದರೆ ಅವಳ ಬಂಧುಗಳು ಆ ಸ್ತ್ರೀಯನ್ನು ಹಾಳುಮಾಡಿದ್ದರು. ಗಿರೀಶನ ಸಹೋದರ ಅತುಳ ಐದುಸಾವಿರ ರೂಪಾಯಿ ಬಂಡವಾಳ ಹಾಕಿ ವ್ಯಾಪಾರಕ್ಕೆ ಇಳಿದ. ಜೊತೆಗೆ ತನ್ನ ಗಂಡನ ಖಾಯಿಲೆಗೆ ಬಹಳ ಹಣ ಖರ್ಚು ಮಾಡಬೇಕಾಯಿತು. ಸುಮಾರು ಒಂದು ವರ್ಷ ಆತ ಖಾಯಿಲೆಯಲ್ಲಿದ್ದ. ಆಕೆ ತನ್ನ ಮರಣಶಾಸನದಲ್ಲಿ ನನಗೆ ನೂರುರೂಪಾಯಿ ಬಿಡಬೇಕೆಂದು ಇಚ್ಛಿಸಿದ್ದಳು. ಬದುಕಿರುವಾಗ ಆ ಹಣವನ್ನು ನನಗೆ ಕೊಡುವುದಕ್ಕೆ ಬಹಳ ನಾಚಿಕೆ. ನೂರು ರೂಪಾಯಿ ತುಂಬಾ ಕಡಿಮೆ ಎಂದು ಭಾವಿಸಿದ್ದಳು. ಅವಳ ಕಾಲಾನಂತರ ಅವಳ ತಮ್ಮ ಬಂದು ನನಗೆ ಆ ಹಣವನ್ನು ಕೊಟ್ಟನು. ಅವಳು ದುರ್ಗಾ ಪೂಜೆಗೆ ಒಂದು ದಿನ ಮುಂಚೆ ನನ್ನನ್ನು ನೋಡಲು ಬಂದಿದ್ದಳು. ಬದುಕಿರುವತನಕ ನನ್ನನ್ನು ಒಂದು ಕ್ಷಣವೂ ಬಿಡಲಿಲ್ಲ. ದುರ್ಗಾಪೂಜೆ ಆದೊಡನೆಯೇ ಕಾಶಿಗೆ ಹೋಗಬೇಕೆಂದು ಇದ್ದಳು. ಪ್ರಯಾಣಕ್ಕೆ ಅಣಿಯಾಗುವುದರಲ್ಲಿ ನಿರತಳಾಗಿದ್ದಳು. ಕೊನೆಗೆ ಅವಳು 'ಅಪ್ಪಣೆ ದಯಪಾಲಿಸುವಿರಾ ಹೊರಡುವುದಕ್ಕೆ?' ಎಂದು ಕೇಳಿದಳು. ನಾನು ಸ್ವಲ್ಪ ಅಜಾಗರೂಕತೆಯಿಂದ ಇದ್ದೆ. 'ಆಗಲಿ ಹೋಗು' ಎಂದು ಬಿಟ್ಟೆ. ಆಕೆ ಹೊರಟು ಹೋದಳು. ಆಕೆ ಹೋದ ಮೇಲೆ 'ಎಂತಹ ಅವಿವೇಕ ಮಾಡಿದೆ ನಾನು! ಬರೀ ಹೋಗು ಎಂದು ಮಾತ್ರ ಹೇಳಿದೆನಲ್ಲ. ಇದುವರೆವಿಗೂ ಯಾರಿಗೂ ಹೀಗೆ ಹೇಳಿರಲಿಲ್ಲ.' ಎಂದುಕೊಂಡೆ. ಅವಳು ಹಿಂದಿರುಗಿ ಬರಲೇ ಇಲ್ಲ.

ನನ್ನ ಬಾಯಿಂದ ಅಂತಹ ಮಾತು ಏತಕ್ಕೆ ಬಂತೋ ತಿಳಿಯಲಿಲ್ಲ" ಎಂದರು.

* * *

ಸಂಜೆ ನಾನು ಉದ್ಬೋಧನ ಆಫೀಸಿಗೆ ಹೋದೆ. ಶ್ರೀಮಾತೆ ಮಲಗಿದ್ದರು. ರಾಧೆ ಅವರ ಪಕ್ಕದಲ್ಲೇ ಚಾಪೆಯ ಮೇಲೆ ಮಲಗಿದ್ದಳು. ಒಂದು ಕಥೆ ಹೇಳು ಎಂದು ಶ್ರೀಮಾತೆಯನ್ನು ಪೀಡಿಸುತ್ತಿದ್ದಳು. ಒಂದು ಕಥೆಯನ್ನು ಹೇಳುವಂತೆ ಶ್ರೀಮಾತೆ ನನಗೆ ಅಪ್ಪಣೆ ಕೊಡಿಸಿದರು. ನಾನು ಭ್ರಾಂತಳಾದೆ. ಏನು ಹೇಳಬೇಕೋ ನನಗೆ ತಿಳಿಯಲಿಲ್ಲ. ವೈಷ್ಣವ ಭಕ್ತೆ ಮೀರಾಬಾಯಿಯ ಕಥೆ ಗೊತ್ತಿತ್ತು. ಅದನ್ನೇ ಹೇಳಿದೆ. ಮೀರಾಬಾಯಿಯ, 'ಪ್ರೀತಿ ಇಲ್ಲದೆ ದೇವರನ್ನು ಪಡೆಯಲಾಗುವುದಿಲ್ಲ' ವೆಂಬ ಹಾಡನ್ನು ಹೇಳಿದಾಗ ಶ್ರೀಮಾತೆ ಭಾವ ಪರವಶರಾದರು. 'ಹೌದು. ನಿಜವಾದ ಪ್ರೇಮವಿಲ್ಲದೆ ಏನನ್ನೂ ಪಡೆಯಲಾಗುವುದಿಲ್ಲ' ಎಂದರು. ರಾಧೆಗೆ ಕಥೆ ಹಿಡಿಸಲಿಲ್ಲ. ಸರಳೆ ನನ್ನ ಸಹಾಯಕ್ಕೆ ಬಂದಳು. ಒಂದು ಮಾಯಾ ಮಂತ್ರದ ಕಥೆಯನ್ನು ಹೇಳಿದಳು. ರಾಧೆಗೆ ಪರಮಸಂತೋಷವಾಯಿತು. ಸರಳೆಯನ್ನು ಕಂಡರೆ ಶ್ರೀಮಾತೆಗೆ ಬಹಳ ಪ್ರೀತಿ. ಗುಲಾಬ್ ಮಾ ಶುಶ್ರೂಷೆಗಾಗಿ ಅವಳು ಹೊರಟಳು. ರಾಧಾ ತನ್ನ ಕಾಲನ್ನು ಹಿಸುಕುವಂತೆ ನನಗೆ ಹೇಳಿದಳು. ಅವಳಿಗೆ ನಾನು ಮಾಡುವುದರಿಂದ ತೃಪ್ತಿಯಾಗಲಿಲ್ಲ: ಸ್ವಲ್ಪ ಗಟ್ಟಿಯಾಗಿ ಒತ್ತೆಂದು ಹೇಳಿದಳು. ಶ್ರೀಮಾತೆ, "ಶ್ರೀರಾಮಕೃಷ್ಣರು ಕಾಲನ್ನು ಹೇಗೆ ಒತ್ತಬೇಕೆಂಬುದನ್ನು ನನ್ನ ಕಾಲನ್ನು ಒತ್ತಿ ತೋರಿಸಿದರು" ಎಂದರು. 'ನಿನ್ನ ಕೈಯನ್ನು ನೋಡೋಣ' ಎಂದು ಕೇಳಿದರು. ನನ್ನ ಕೈಯನ್ನು ಒತ್ತಿ ಹೇಗೆ ದೇಹವನ್ನು ಒತ್ತಬೇಕೆಂಬುದನ್ನು ತೋರಿದರು. ರಾಧಾ ನಿದ್ರೆ ಮಾಡಿದಳು. 'ಸೊಳ್ಳೆ ನನ್ನ ಕಾಲನ್ನು ಕಚ್ಚುತ್ತಿದೆ. ಸ್ವಲ್ಪ ಅದನ್ನು ಸವರು' ಎಂದರು. ಸ್ವಲ್ಪಹೊತ್ತು ಸುಮ್ಮನಿದ್ದು, 'ಈ ವರ್ಷ ಬೇಲೂರು ಮಠಕ್ಕೆ ತುಂಬಾ ದುರ್ದೆಶೆ. ಬಾಬುರಾಮ, ದೇವವ್ರತ, ಶಚಿನ್, ಮುಂತಾದವರು ಕಾಲವಾದರು' ಎಂದರು.

"ಸ್ವಾಮಿ ಬ್ರಹ್ಮಾನಂದರು ದೇವವ್ರತ ಸಾಯುವುದಕ್ಕೆ ಕೆಲವು ದಿನಗಳ ಮುಂಚೆ ಉದ್ಬೋಧನದಲ್ಲಿ ಪ್ರೇತವನ್ನು ಕಂಡರು ಎಂದು ಕೇಳಿದ್ದೆ" ಎಂದು ಹೇಳಿದೆ ಶ್ರೀಮಾತೆಗೆ. "ಮಗು, ಮೆಲ್ಲಗೆ ಮಾತಾಡು. ಜನ ಕೇಳಿದರೆ ಅಂಜುವರು. ಶ್ರೀರಾಮಕೃಷ್ಣರೂ ಅಂತಹ ಪ್ರೇತಗಳನ್ನು ನೋಡಿದ್ದರು. ಅವರು ಒಂದು ದಿನ ರಾಖಾಲನೊಂದಿಗೆ ವೇಣೀಪಾಲನ

ಮನೆಗೆ ಹೋಗಿದ್ದರು. ಅವರು ಅವನ ತೋಟದಲ್ಲಿ ತಿರುಗಾಡುತ್ತಿದ್ದಾಗ ಒಂದು ಪ್ರೇತ ಬಂದು, 'ನೀನೇತಕ್ಕೆ ಇಲ್ಲಿ ಬರುವೆ. ನಾವು ಸಾಯುತ್ತಿರುವೆವು. ನಿನ್ನ ಇರವನ್ನು ಸಹಿಸಲಾರೆವು. ಬೇಗ ಹೊರಡು' ಎಂದವು. ಅವರ ಜಾಜ್ವಲ್ಯಮಾನವಾದ ಪವಿತ್ರತೆಯ ಎದುರಿಗೆ ಹೇಗೆ ಇರಬಲ್ಲವು? ಶ್ರೀರಾಮಕೃಷ್ಣರು ನಗುತ್ತಾ ಆ ಸ್ಥಳವನ್ನು ಬಿಟ್ಟರು. ಅವರು ಈ ಸುದ್ದಿಯನ್ನು ಯಾರಿಗೂ ಹೇಳಲಿಲ್ಲ.

"ಮೊದಲು, ರಾತ್ರಿ ಅಲ್ಲಿರುವಂತೆ ನಿಶ್ಚಯಿಸಿದ್ದರೂ, ಊಟವಾದೊಡನೆ ಒಂದು ಗಾಡಿಯನ್ನು ತರುವಂತೆ ಹೇಳಿದರು. ಅಂತೂ ದಕ್ಷಿಣೇಶ್ವರಕ್ಕೆ ಹಿಂತಿರುಗಿದರು. ಬಾಗಿಲಿನ ಹತ್ತಿರ ಗಾಡಿಸದ್ದು ಕೇಳಿತು. ಶ್ರೀರಾಮಕೃಷ್ಣರು ರಾಖಾಲನೊಂದಿಗೆ ಮಾತನಾಡುತ್ತಿದ್ದರು. ಅವನು ರಾತ್ರಿ ಇನ್ನೂ ಊಟಮಾಡಿರಲಿಲ್ಲವೇನೊ. ಈಗ ಏನು ಮಾಡಲಿ ಅವರ ಊಟಕ್ಕೆ? ಎಂಬ ಚಿಂತೆಯಾಯಿತು ಸ್ವಲ್ಪ ಅರಳನ್ನಾದರೂ ಇಡುತ್ತಿದ್ದೆ. ಅವರು ಅವೇಳೆ ಸಮಯದಲ್ಲೆಲ್ಲ ಆಹಾರ ಕೇಳುತ್ತಿದ್ದರು. ಅವರು ರಾತ್ರೆ ಬರುವುದಿಲ್ಲವೆನ್ನುವುದು ನಿಶ್ಚಯವಾಗಿದ್ದುದರಿಂದ ನಾನು ಏನನ್ನೂ ಇಟ್ಟಿರಲಿಲ್ಲ. ದೇವಸ್ಥಾನದ ಹೆಬ್ಬಾಗಿಲನ್ನೆಲ್ಲಾ ಹಾಕಿದ್ದರು. ಚಪ್ಪಾಳೆ ತಟ್ಟುತ್ತಾ, ದೇವರ ಹೆಸರನ್ನು ಉಚ್ಚರಿಸುತ್ತಿದ್ದರು. ಯಾರೋ ಬಾಗಿಲನ್ನು ತೆರೆದರು. ಹಸಿವಾಗಿದ್ದರೆ ಅವರಿಗೆ ಊಟಕ್ಕೆ ಏನುಮಾಡಲಿ ಎಂದು ಯೋಚಿಸುತ್ತಿದ್ದೆ. 'ನಮ್ಮ ಊಟಕ್ಕೆ ಯೋಚನೆಪಡಬೇಡ. ನಾನಾಗಲೇ ಪೂರೈಸಿರುವೆನು' ಎಂದರು. ಆಗ ರಾಖಾಲನಿಗೆ ಪ್ರೇತದ ಕಥೆಯನ್ನು ಹೇಳಿದರು. ಆಗ ರಾಖಾಲ 'ಅಬ್ಬ! ನೀವು ಆಗ ಹೇಳದೆ ಇದ್ದದ್ದೇ ಮೇಲಾಯಿತು. ಹೇಳಿದ್ದರೆ ನಡುಗಿಹೋಗುತ್ತಿದ್ದೆ. ಈಗಲೂ ನನಗೆ ಅಂಜಿಕೆಯಾಗುತ್ತಿದೆ' ಎಂದನು." ಶ್ರೀಮಾತೆ ನಗುತ್ತಾ ಕಥೆ ಮುಗಿಸಿದರು.

ಭಕ್ತೆ :– ಆ ಪ್ರೇತಗಳಿಗೆ ಬುದ್ಧಿ ಇಲ್ಲ. ಬಿಡುಗಡೆಯನ್ನು ಕೊಡು ಎನ್ನುವುದಕ್ಕೆ ಬದಲಾಗಿ ಅವರನ್ನು ಹೊರಟುಹೋಗು ಎಂದವಲ್ಲ!

ಶ್ರೀಮಾತೆ :– ಅವು ಮುಕ್ತರಾಗುವುವು. ಶ್ರೀಗುರುದೇವರು ಅಲ್ಲಿಗೆ ಹೋಗಿದ್ದು ವ್ಯರ್ಥವಾಗುವುದಿಲ್ಲ. ಒಂದು ಸಲ ನರೇಂದ್ರನು ಮದ್ರಾಸಿನಲ್ಲಿದ್ದಾಗ ಒಂದು ಪ್ರೇತವನ್ನು ಬಿಡುಗಡೆಮಾಡಿದನು.

ನನ್ನ ಒಂದು ಕನಸನ್ನು ಶ್ರೀಮಾತೆಗೆ ವಿವರಿಸಿದೆ. "ತಾಯಿ,

ಒಂದು ಸಾರಿ ನಾನು ನನ್ನ ಗಂಡನೊಂದಿಗೆ ಎಲ್ಲಿಗೋ ಹೋಗುತ್ತಿರುವಂತೆ ಕನಸು ಕಂಡೆ. ಒಂದು ನದೀ ತೀರಕ್ಕೆ ಬಂದೆವು. ಎದುರಿನ ದಡ ಕಾಣಿಸಲಿಲ್ಲ. ನದೀ ತೀರದ ನೆರಳಿನಲ್ಲಿ ನಾವು ಹೋಗುತ್ತಿದ್ದೆವು. ಒಂದು ಹಸರು ಬಳ್ಳಿ ನನ್ನ ಕೈಗೆ ಸುತ್ತಿಕೊಂಡಿತು. ಅದರಿಂದ ತಪ್ಪಿಸಿಕೊಳ್ಳಲು ಆಗಲಿಲ್ಲ. ನದಿಯ ಆಚೆಯಕಡೆಯಿಂದ ಒಬ್ಬ ಕಪ್ಪು ಹುಡುಗ ಬಂದು ದೋಣಿಯನ್ನು ತಂದ. 'ಬಳ್ಳಿಯನ್ನು ಕತ್ತರಿಸಿಹಾಕು. ಆಮೇಲೆ ನಿನ್ನನ್ನು ದೋಣಿಯಲ್ಲಿ ಕರೆದುಕೊಂಡು ಹೋಗುವೆ' ಎಂದ. ಎಲ್ಲಾ ಬಳ್ಳಿಯನ್ನು ಬಿಡಿಸಿದೆ. ಒಂದು ಚೂರು ಬಳ್ಳಿಮಾತ್ರ ಇನ್ನೂ ಸಿಕ್ಕಿಕೊಂಡಿತ್ತು. ಅದನ್ನು ಬಿಡಿಸಲಾಗಲಿಲ್ಲ. ಅಷ್ಟು ಹೊತ್ತಿಗೆ ನನ್ನ ಗಂಡನೂ ಕಾಣಲಿಲ್ಲ. ಆಗ ನಾನು ಆ ಹುಡುಗನಿಗೆ 'ನೀನೇ ಬಳ್ಳಿಯನ್ನು ಬಿಡಿಸಿ ಪಾರುಮಾಡಬೇಕು' ಎನ್ನುತ್ತ ಆ ದೋಣಿಗೆ ಹಾರಿದೆ. ಅದು ನನ್ನನ್ನು ಆಚೆ ದಡಕ್ಕೆ ಒಯ್ದಿತು.

ಶ್ರೀಮಾತೆ ಹೀಗೆಂದರು:– "ನೀನು ನೋಡಿದ ಹುಡುಗ ಮಹಾಮಾಯೆಯಲ್ಲದೆ ಬೇರೆಯಲ್ಲ. ಸಂಸಾರ ಸಾಗರದಮೇಲೆ ನಿನ್ನನ್ನು ಹುಡುಗನ ರೂಪಿನಲ್ಲಿ ಕರೆದೊಯ್ದಳು. ಗಂಡ, ಹೆಂಡತಿ, ದೇಹ ಎಲ್ಲಾ ಮಾಯೆ. ಇವೆಲ್ಲಾ ಭ್ರಾಂತಿ ಸರಪಳಿ. ನೀನು ಇವುಗಳಿಂದ ಪಾರಾದಲ್ಲದೆ ಆಚೆಯ ಕಡೆ ಹೋಗಲಾರೆ. ನಾನು, ದೇಹ, ಎನ್ನುವ ಭ್ರಾಂತಿ ಹೋಗಬೇಕು. ಮಗು, ಈ ದೇಹವೆಂದರೇನು ? ಸುಟ್ಟರೆ ಆಗುವ ಮೂರು ಬೊಗಸೆ ಬೂದಿಯಲ್ಲದೆ ಮತ್ತೇನು ? ಇದಕ್ಕಾಗಿ ಅಷ್ಟೊಂದು ಆಸೆ ಏತಕ್ಕೆ ? ದೇಹ ಎಷ್ಟೇ ಸುಂದರವಾಗಿರಲೀ, ಬಲವಾಗಿರಲೀ, ಕೊನೆಗೆ ಮೂರು ಬೊಗಸೆ ಬೂದಿ. ಆದರೂ ಜನರಿಗೆ ದೇಹದಮೇಲೆ ಅಷ್ಟು ಮಮತೆ. ದೇವರೇ ರಕ್ಷಿಸಬೇಕು.

"ನಾನು ಆರಾ ಜಿಲ್ಲೆಯ ಕೈಲ್‌ವಾರ್ ಎಂಬಲ್ಲಿ ಕೆಲವು ದಿನ ಕಳೆದೆ. ಅದು ಒಳ್ಳೆ ಆರೋಗ್ಯ ಸ್ಥಳ. ಗುಲಾಬ್‌ಮಾ, ಬಾಬುರಾಮನ ತಾಯಿ, ಬಲರಾಮನ ಹೆಂಡತಿ ಇವರೆಲ್ಲ ಇದ್ದರು. ಅಲ್ಲಿ ಬೇಕಾದಷ್ಟು ಜಿಂಕೆಗಳಿದ್ದುವು. ತ್ರಿಕೋಣಾಕಾರದಲ್ಲಿ ಒಂದೊಂದು ಗುಂಪೇ ಸಂಚರಿಸುತ್ತಿತ್ತು. ಅವು ನಮ್ಮನ್ನು ನೋಡಿದೊಡನೆಯೇ ಹಕ್ಕಿಗಳಂತೆ ಓಡಿ ಹೋಗುತ್ತಿದ್ದವು. ಅಷ್ಟು ವೇಗವಾಗಿ ಓಡುವುದನ್ನು ನಾನು ನೋಡಿರಲಿಲ್ಲ. ಶ್ರೀರಾಮಕೃಷ್ಣರು 'ಕಸ್ತೂರಿ ಒಂದು ಬಗೆಯ ಜಿಂಕೆಯನಾಭಿ

ಯಲ್ಲಾಗುವುದು. ಆ ವಾಸನೆಗೆ ಅಲ್ಲಿ ಇಲ್ಲಿ ಓಡಾಡುವುದು. ಆ ವಾಸನೆ ಎಲ್ಲಿಂದ ಬರುವುದೋ ಅವಕ್ಕೇ ಗೊತ್ತಿಲ್ಲ. ಅದರಂತೆಯೇ ದೇವರು ಎಲ್ಲರ ಹೃದಯದಲ್ಲಿರುವನು. ಮನುಷ್ಯರಿಗೆ ಅದು ಗೊತ್ತಿಲ್ಲ. ಅದಕ್ಕೇ ಹೊರಗೆಲ್ಲ ಅವನನ್ನು ಹುಡುಕಾಡುವರು' ಎನ್ನುತ್ತಿದ್ದರು. ದೇವ ರೊಬ್ಬನೇ ಸತ್ಯ. ಉಳಿದುವೆಲ್ಲ ಮಿಥ್ಯ. ಮಗು, ನೀನು ಏನು ಹೇಳುವೆ ?"

ಶ್ರೀಮಾತೆಗೆ ದೇಹದಮೇಲೆಲ್ಲ ಗುಳ್ಳೆಗಳಿದ್ದುವು. "ಕಳೆದ ಮೂರು ವರುಷಗಳಿಂದ ನಾನು ಇದರಿಂದ ನರಳುತ್ತಿರುವೆ. ನಾನು ಯಾರ ಪಾಪಕ್ಕಾಗಿ ಇದನ್ನು ಅನುಭವಿಸುತ್ತಿರುವೆನೋ ಗೊತ್ತಿಲ್ಲ. ಇಲ್ಲದೇ ಇದ್ದರೆ ನನಗೆ ರೋಗ ಏತಕ್ಕೆ ಬರಬೇಕು ಮಗು!" ಎಂದರು.

೩೦ ನೇ ಆಗಸ್ಟ್, ೧೯೧೮.

ಶ್ರೀಮಾತೆ ದರ್ಶನಕ್ಕೆ ಹೋಗಿದ್ದಾಗ ಸಂಜೆಯಾಗಿತ್ತು. ಅವರು ಮಂಚದ ಹತ್ತಿರ ನೆಲದಮೇಲೆ ಒಂದು ಚಾಪೆಯಮೇಲೆ ಮಲಗಿದ್ದರು. ಅವರಿಗೆ ನಮಸ್ಕರಿಸಿ ಮಾತನಾಡುವಾಗ, "ಕಾಳಿಘಟ್ಟದಲ್ಲಿರುವ ನಮ್ಮ ಮನೆಗೆ ಹೋಗಿ ತುಂಬಾ ದಿನವಾಯಿತು. ಈಗ ನಾನು ಅಲ್ಲಿಗೆ ಹೋಗಲೇ ?" ಎಂದು ಕೇಳಿದೆ.

ಶ್ರೀಮಾತೆ:– ಇಲ್ಲೇ ಏತಕ್ಕೆ ಕೆಲವು ದಿನ ಇರಬಾರದು ? ನೀನು ಕಾಳಿಘಾಟಿಗೆ ಹೋದರೆ ಇಲ್ಲಿಗೆ ಪದೇಪದೇ ಬರುವುದಕ್ಕೆ ಆಗುವುದಿಲ್ಲ. ನೀನು ಒಂದು ದಿನ ಬರದೇ ಇದ್ದರೆ ನಾನು ವ್ಯಾಕುಲಪಡುವೆ. ನೀನು ನೆನ್ನೆ ಇಲ್ಲಿಗೆ ಬರಲಿಲ್ಲ. ಏನೋ ನಿನಗೆ ಸುಖವಿಲ್ಲವೇನೋ ಎಂದು ಚಿಂತಿ ಸುತ್ತಿದ್ದೆ. ನೀನು ಈವತ್ತು ಬರದೇ ಇದ್ದರೆ ನಿನ್ನ ವಿಚಾರವನ್ನು ತಿಳಿ ಯಲು ಯಾರನ್ನಾದರೂ ಕಳುಹಿಸುತ್ತಿದ್ದೆ. ನಿನ್ನ ಗಂಡನಿಗೆ ಅನಾರೋಗ್ಯ ವಾಗಿದ್ದರೆ ಅಥವಾ ನೀನು ಅಲ್ಲಿರಬೇಕೆಂದು ಅವನ ಇಚ್ಛೆ ಇದ್ದರೆ ನೀನು ಅಲ್ಲಿಗೆ ಹೋಗು".

"ಅಂತಹ ತೊಂದರೆ ಏನೂ ಇಲ್ಲ. ನಾನು ನನ್ನ ತಂಗಿ ಮನೆ ಯಲ್ಲಿ ಇಷ್ಟೊಂದು ದಿನ ನಿಂತರೆ ಜನ ಟೀಕೆಮಾಡುವರೆಂದು ಹಾಗೆ ಹೇಳಿದೆ" ಎಂದೆ. ಅದಕ್ಕೆ ಅವರು, "ಅದನ್ನು ಗಣನೆಗೆ ತರಬೇಕಾಗಿಲ್ಲ. ಇನ್ನೊಂದು ತಿಂಗಳು ನಿನ್ನ ತಂಗೀ ಮನೆಯಲ್ಲೇ ಇರು" ಎಂದರು.

ಒಬ್ಬ ಗೃಹಿಣೀ ಭಕ್ತಳು ತಮ್ಮ ದರ್ಶನಕ್ಕೆ ಬಂದಿರುವಳೆಂದು

ಒಬ್ಬ ಬ್ರಹ್ಮಚಾರಿ ಹೇಳಿದರು. ಶ್ರೀಮಾತೆಗೆ ಸಾಕಾಗಿ ಮಲಗಿದ್ದರು. ಅವರಿಗೆ ಸ್ವಲ್ಪ ಅಸಮಾಧಾನವಾಗಿ, "ಏನು, ಇನ್ನೂ ಒಬ್ಬಳನ್ನು ನೋಡಬೇಕೆ! ಸಾಕಾಗಿದೆ!" ಎಂದರು. ಚಾಪೆಯಮೇಲೆ ಕುಳಿತರು. ಸ್ವಲ್ಪ ಹೊತ್ತಿನಮೇಲೆ ಚೆನ್ನಾಗಿ ಉಡುಪನ್ನು ಧರಿಸಿದ ಭಕ್ತ ಮಹಿಳೆ ಯೊಬ್ಬಳು ಬಂದು ಶ್ರೀಮಾತೆಯ ಪಾದ ಮುಟ್ಟಿ ನಮಸ್ಕರಿಸಿದಳು.

ಶ್ರೀಮಾತೆ "ದೂರದಲ್ಲೇ ನಿಂತು ನಮಸ್ಕರಿಸಬಹುದಾಗಿತ್ತು, ಕಾಲನ್ನು ಏತಕ್ಕೆ ಮುಟ್ಟುತ್ತೀಯಮ್ಮ" ಎಂದರು. ಅವಳ ಕ್ಷೇಮ ಸಮಾಚಾರವನ್ನು ವಿಚಾರಿಸಿದರು.

ಭಕ್ತೆ :– ನಮ್ಮ ಯಜಮಾನರಿಗೆ ಕೆಲವು ದಿನದಿಂದ ಅನಾರೋಗ್ಯ. ನಿಮಗೆ ಇದು ಗೊತ್ತೆ ?

ಶ್ರೀಮಾತೆ :– ಹೌದು, ಇದನ್ನು ಕೇಳಿರುವೆ. ಈಗ ಹೇಗಿರುವನು ? ಏನು ಖಾಯಿಲೆ ? ಯಾರು ಔಷಧಿ ಕೊಡುತ್ತಿರುವರು ?

ಭಕ್ತೆ :– ಮಧುಮೇಹದಿಂದ ನರಳುತ್ತಿರುವರು. ಕಾಲು ಊದಿ ಕೊಂಡಿದೆ. ವೈದ್ಯರು ಇದು ಅಪಾಯ ಖಾಯಿಲೆ ಎನ್ನುವರು. ಆದರೆ ನಾನು ಅವರ ಅಭಿಪ್ರಾಯವನ್ನು ಲೆಕ್ಕಿಸುವುದಿಲ್ಲ. ನೀವು ಅವರನ್ನು ಗುಣಮಾಡಬೇಕು. ಅವನು ಗುಣವಾಗುವನು ಅನ್ನಿ.

ಶ್ರೀಮಾತೆ :– ನನಗೇನೂ ಗೊತ್ತಿಲ್ಲಮ್ಮ. ಗುರುದೇವರೇ ಸರ್ವಸ್ವ. ಅವರು ಇಚ್ಛಿಸಿದರೆ ನಿನ್ನ ಪತಿ ಗುಣವಾಗುವನು; ಅವರಿಗೆ ಪ್ರಾರ್ಥಿಸುವೆ.

ಭಕ್ತೆ :– ನನಗೆ ಈಗ ಸಂತೋಷವಾಯಿತು. ಶ್ರೀರಾಮಕೃಷ್ಣರು ನಿಮ್ಮ ಪ್ರಾರ್ಥನೆಯನ್ನು ನಿರಾಕರಿಸುವುದಿಲ್ಲ.

ಆಕೆ ಶ್ರೀಮಾತೆಯ ಪಾದಗಳ ಮೇಲೆ ತಲೆಯಿಟ್ಟು ಅತ್ತಳು. "ಶ್ರೀ ಗುರುದೇವರಿಗೆ ಪ್ರಾರ್ಥಿಸು. ಅವರು ಆರೋಗ್ಯವನ್ನು ಕೊಡುವರು. ಈಗ ಅವನ ಆಹಾರವೇನು ?" ಎಂದು ಸಮಾಧಾನ ಮಾಡಿದರು.

ಭಕ್ತೆ :–ವೈದ್ಯರು ಹೇಳಿದಂತೆ ಪೂರಿ ಮುಂತಾದುವನ್ನು ಸೇವಿಸುವರು.

ಆಕೆ ಶ್ರೀಮಾತೆಯ ಅಪ್ಪಣೆ ಪಡೆದು ಶಾರದಾನಂದರನ್ನು ನೋಡಲು ಹೋದಳು.

ಶ್ರೀಮಾತೆ ದೇಹದ ಮೇಲಿನ ಬಟ್ಟೆಯನ್ನು ತೆಗೆಯುತ್ತ 'ಹಗಲೂ ರಾತ್ರಿ ಜನನ, ನೋವು, ದುಃಖದಿಂದ ನಾನು ಬೇಯುತ್ತಿರುವೆ' ಎಂದರು. ನಾನು ಅವರಿಗೆ ತೈಲವನ್ನು ಲೇಪಿಸುವುದರಲ್ಲಿದ್ದೆ. ಅಷ್ಟುಹೊತ್ತಿಗೆ ಆಗ

ತಾನೇ ಹೋದ ಗೃಹಿಣಿಯ ಬಂಧು ಒಬ್ಬಳು ನಮಸ್ಕರಿಸಲು ಬಂದಳು. ಪುನಃ ಶ್ರೀಮಾತೆ ಏಳಬೇಕಾಯಿತು. ಅವರು ಹೋದ ತಕ್ಷಣ ಶ್ರೀಮಾತೆ ಮಲಗಿ, 'ಈಗ ಯಾರಾದರೂ ಬರಲಿ, ಏಳುವುದಿಲ್ಲ. ಮಗೂ, ಎಷ್ಟೆ ತೊಂದರೆ ಪದೇ ಪದೇ ಏಳುವುದು. ಜತೆಗೆ ಬೆನ್ನೆಲ್ಲ ಗುಳ್ಳೆಯಿಂದ ನೋಯುತ್ತಿದೆ. ತೈಲ ಚೆನ್ನಾಗಿ ತಿಕ್ಕು' ಎಂದರು.

ತೈಲ ಲೇಪಿಸುತ್ತಿದ್ದಾಗ, ಆಗತಾನೇ ಹೊರಟ ಸ್ತ್ರೀಯ ವಿಷಯ ಮಾತಿಗೆ ಬಂತು. ಶ್ರೀಮಾತೆ, 'ಗಂಡ ಅಷ್ಟು ರೋಗದಲ್ಲಿ ನರಳುತ್ತ ಅಪಾಯದಲ್ಲಿರುವನು. ಅವನು ಮೇಲಾಗಲೆಂದು ದೇವರನ್ನು ಪ್ರಾರ್ಥಿಸುವುದಕ್ಕೆ ಬಂದಿರುವಳು. ಶ್ರದ್ಧೆ, ಭಕ್ತಿಯಿಂದ ಕೂಡಿರುವ ಬದಲು, ಬೇಕಾದಷ್ಟು ಗಂಧ ಹಚ್ಚಿಕೊಂಡು ಬಂದಿರುವಳು. ದೇವಸ್ಥಾನಕ್ಕೆ ಬರುವ ರೀತಿಯೆ ಇದು! ನಿಮ್ಮ ಈಗಿನ ಕಾಲದ ಹೆಂಗಸರ ಸ್ವಭಾವ ಇದು' ಎಂದರು.

ನಾನು ಹೊರಡುತ್ತಿರುವಾಗ 'ಪ್ರಸಾದವನ್ನು ಕೊಡಿ' ಎಂದು ಯಾರಿಗೋ ಹೇಳಿದರು. * * *

೨೩ ನೇ ಆಗಸ್ಟ್, ೧೯೧೮

ಶ್ರೀಮಾತೆಯ ದರ್ಶನಕ್ಕೆ ಸಂಜೆ ಹೋದೆ. ಒಬ್ಬ ಭಕ್ತಳನ್ನು ಕುರಿತು, 'ಆಕೆ ತನ್ನ ಸೊಸೆಯ ಮೇಲೆ ಅಷ್ಟು ಕಟ್ಟುನಿಟ್ಟುಗಳನ್ನು ಇಡುವಳು. ಅಷ್ಟು ಮಿತಿಮೀರಿ ಇರಕೂಡದು. ಆಕೆಯ ಮೇಲೆ ಲಕ್ಷ್ಯವಿಟ್ಟಿದ್ದರೂ ಸ್ವಾತಂತ್ರ್ಯ ಕೊಡಬೇಕು. ಅವಳಿನ್ನೂ ಹುಡುಗಿ. ಚೆನ್ನಾಗಿರುವುದನ್ನು ಅನುಭವಿಸಬೇಕೆಂಬ ಆಸೆ. ಅವಳನ್ನು ಅಷ್ಟು ಬಂಧನದಲ್ಲಿಟ್ಟರೆ ಹುಡುಗಿ ಮನೆಬಿಡಬಹುದು. ಅಥವಾ ಆತ್ಮಹತ್ಯ ಮಾಡಿಕೊಳ್ಳಬಹುದು. ಅವಳು ಆಗ ಏನು ಮಾಡುವಳು?' ಎಂದರು. ನನ್ನನ್ನು ನೋಡುತ್ತಾ 'ಕಾಲಿಗೆ ಅರಿಶಿನ ಹಚ್ಚಿಕೊಂಡಿರುವಳು. ಅದೊಂದು ಮಹಾಪರಾಧವೆ? ಆ ಹುಡುಗಿ ತನ್ನ ಗಂಡನನ್ನು ಕೂಡ ನೋಡಲಾರಳು. ಗಂಡ ಸನ್ಯಾಸಿಯಾಗಿರುವನು. ನಾನು ನನ್ನ ಗಂಡನನ್ನು ಕಣ್ಣಾರೆ ನೋಡುತ್ತಿದ್ದೆ. ಅವರಿಗೆ ಶುಶ್ರೂಷೆ ಮಾಡುತ್ತಿದ್ದೆ. ಅಡಿಗೆ ಮಾಡುತ್ತಿದ್ದೆ. ಇತರ ಸೇವೆ ಮಾಡುತ್ತಿದ್ದೆ' ಎಂದರು.

ಮತ್ತೊಂದು ದಿನ ಶ್ರೀಮಾತೆಯವರ ಬಳಿಗೆ ಹೋಗಿದ್ದೆ. ಒಬ್ಬ ಸನ್ಯಾಸಿಗಳು ಅವರಿಗೆ ನಮಸ್ಕರಿಸಿದರು. 'ತಾಯಿ, ಮನಸ್ಸೇಕೆ ಪದೇ

ಏಕೆ ಚಂಚಲವಾಗುವುದು? ಸದಾ ಏತಕ್ಕೆ ನಿಮ್ಮ ಮೇಲೇ ಧ್ಯಾನಿಸ ಬಾರದು? ಕೆಲಸಕ್ಕೆ ಬಾರದ ಆಲೋಚನೆಗಳೆಷ್ಟು ಬರುವುವು! ಕೆಲಸಕ್ಕೆ ಬಾರದವುಗಳನ್ನು ಸುಲಭವಾಗಿ ಪಡೆಯಬಹುದು. ನನಗೆ ದೇವರು ಲಭಿಸುವುದಿಲ್ಲವೇ? ತಾಯಿ, ಹೇಳಿ, ಹೇಗೆ ಶಾಂತಿ ಪಡೆಯಬೇಕು. ಈ ನಡುವೆ ಯಾವ ಹಲವು ದೇವತಾದರ್ಶನಗಳೂ ಕಾಣುವುದಿಲ್ಲ. ದೇವರನ್ನು ಪಡೆಯದ ಈ ಜೀವನದಿಂದ ಏನು ಸಾರ್ಥಕ? ಇಂತಹ ಬಾಳಿಗಿಂತ ಸಾಯುವುದೇ ಮೇಲು' ಎಂದರು.

ಶ್ರೀಮಾತೆ:— ಮಗು, ನೀನು ಏನು ಮಾತನ್ನಾಡುತ್ತಿರುವೆ! ಅಂತಹ ಆಲೋಚನೆಯನ್ನು ಮಾಡಬೇಡ. ಪ್ರತಿದಿನ ದೇವತಾ ದರ್ಶನ ವಾಗುವುದೆ? 'ಬೆಸ್ತನಿಗೆ ಪ್ರತಿದಿನ ಮೀನನ್ನು ಹಿಡಿಯಲು ಕುಳಿತೊಡನೆಯೇ ಮೀನು ಸಿಕ್ಕುವುದೆ?' ಎನ್ನುತ್ತಿದ್ದರು ಶ್ರೀರಾಮಕೃಷ್ಣರು. ಎಲ್ಲ ಅಣಿ ಮಾಡಿಕೊಂಡು, ಗಾಳ ಹಿಡಿದು ಕುಳಿತು ಕಾಯುವನು. ಕೆಲವು ವೇಳೆ ದೊಡ್ಡ ಮೀನು ಸಿಕ್ಕುವುದು. ಹಲವು ವೇಳೆ ನಿರಾಶೆಯೂ ಆಗುವುದು. ಆದರೆ ಸಾಧನೆ ನಿಲ್ಲಿಸಬೇಡ. ಹೆಚ್ಚು ಜಪ ಮಾಡು. ಭಗವಂತ ಮತ್ತು ಆತನ ನಾಮ ಎರಡೂ ಒಂದೆ. ಮೊದಲು ಮನಸ್ಸು ಏಕಾಗ್ರವಾಗದೇ ಹೋದರೂ ಕ್ರಮೇಣ ಅದು ಸಿದ್ಧಿಸುವುದು.

ಸನ್ಯಾಸಿ:— ನಾನೆಷ್ಟು ಜಪಮಾಡಬೇಕು? ದಯವಿಟ್ಟು ಹೇಳಿ. ಇದರಿಂದ ನನಗೆ ಏಕಾಗ್ರತೆ ದೊರೆಯಬಹುದು.

ಶ್ರೀಮಾತೆ:— ಹತ್ತುಸಾವಿರ, ಇಪ್ಪತ್ತುಸಾವಿರ, ಅಥವಾ ಎಷ್ಟು ಸಾಧ್ಯವೋ ಅಷ್ಟು.

ಸನ್ಯಾಸಿ:— ತಾಯಿ, ಒಂದು ದಿನ ದೇವರ ಮನೆಯಲ್ಲಿ ಪ್ರಾರ್ಥಿ ಸುತ್ತಿದ್ದೆ. ಆಗ ನೀವು ನನ್ನ ಹತ್ತಿರ ನಿಂತಿರುವಂತೆ ಕಂಡಿತು. ಏನು ಬೇಕೆಂದು ನೀವು ನನ್ನನ್ನು ಕೇಳಿದಿರಿ. ಸುರಥನಿಗೆ ನೀವು ವರ ಕೊಟ್ಟಂತೆ ನನ್ನನ್ನೂ ಆಶೀರ್ವದಿಸಬೇಕೆಂದೆ. ಜೊತೆಗೆ 'ನೀವು ದುರ್ಗಿಯಾಗಿದ್ದಾಗ ಹಾಗೆ ಮಾಡಿದಿರಿ. ಈಗ ನನಗೆ ಅದು ಬೇಡ. ಈಗ ನೀವು ಇರು ವಂತೆಯೇ ನೋಡಬೇಕೆಂದು ಆಸೆ.' ಎಂದೆ. ನಗುತ್ತ ನೀವು ಮಾಯ ವಾದಿರಿ. ನನಗೆ ಇನ್ನೂ ಅಶಾಂತಿಯಾಯಿತು. ಈಗ ನನಗೆ ಯಾವುದೂ ತೃಪ್ತಿ ಇಲ್ಲ. ಜಗನ್ಮಯಿಯನ್ನು ನೋಡದೆ ಇದ್ದರೆ ಈ ಜನ್ಮದಿಂದ ಪ್ರಯೋಜನವೇನೆಂದು ಯೋಚಿಸುವೆನು.

ಶ್ರೀಮಾತೆ :— ಮಗು, ಏತಕ್ಕೆ ಇಷ್ಟು ಅಶಾಂತನಾಗುವೆ? ನಿನಗೆ ಏನು ದೊರಕಿದೆಯೋ ಅದನ್ನೇ ಏಕೆ ಹಿಡಿದುಕೊಳ್ಳಬಾರದು! ಯಾವಾಗಲೂ "ನನಗೆ ಯಾರೂ ಗತಿ ಇಲ್ಲದೇ ಇದ್ದರೂ ತಾಯೊಬ್ಬಳಾದರೂ ಇರುವಳು" ಎಂದು ತಿಳಿ. ಶ್ರೀರಾಮಕೃಷ್ಣರ ಮಾತು ನಿನಗೆ ಗೊತ್ತಿಲ್ಲವೇ? "ಯಾರು ನನ್ನಲ್ಲಿ ಶರಣಾಗತರಾಗುವರೋ ಅವರನ್ನೆಲ್ಲ ಅನುಗ್ರಹಿಸುವೆ, ಕೊನೆಗಾಲದಲ್ಲಾದರೂ ಅನುಗ್ರಹಿಸುವೆ, ಎಲ್ಲರನ್ನೂ ನನ್ನೆಡೆಗೆ ಸೆಳೆದುಕೊಳ್ಳುವೆನು" ಎಂದು.

ಸನ್ಯಾಸಿ :— ನಾನೊಬ್ಬ ಒಳ್ಳೆ ಗೃಹಸ್ಥ ಭಕ್ತನೊಂದಿಗೆ ಇರುವೆ. ಅವನ ಹೆಂಡತಿ ಒಳ್ಳೆ ವಂಶಸ್ಥಳು. ಆಕೆ ನನಗಾಗಿ ತುಂಬಾ ಹಣ ಖರ್ಚು ಮಾಡುವಳು.

ಶ್ರೀಮಾತೆ :— ಅಷ್ಟೊಂದು ಹಣವನ್ನು ಖರ್ಚುಮಾಡಬೇಡವೆಂದು ಹೇಳು. ಗೃಹಸ್ಥಭಕ್ತರ ಹಣ, ಸನ್ಯಾಸಿಗಳ ಯೋಗಕ್ಷೇಮಕ್ಕೆ. ಚಾತುರ್ಮಾಸ್ಯದಲ್ಲಿ ಇದರಿಂದ ಒಂದು ಕಡೆ ಇರುವುದಕ್ಕೆ ಸಹಾಯವಾಗುವುದು. ಆ ಸಮಯದಲ್ಲಿ ಹೊರಗೆ ಹೋಗುವುದಕ್ಕೆ ಬಹಳ ಕಷ್ಟ.

ಸನ್ಯಾಸಿಗಳು ಶ್ರೀಮಾತೆಗೆ ನಮಿಸಿ ಬೀಳ್ಕೊಟ್ಟರು.

೩ ನೇ ಸೆಪ್ಟೆಂಬರ್, ೧೯೧೮.

ಕೆಲವು ದಿನದಿಂದ ನನಗೆ ಆರೋಗ್ಯವಿರಲಿಲ್ಲ. ನನಗೆ ಗುಣವಾದ ಮೇಲೆ ಒಂದು ದಿನ ಶ್ರೀಮಾತೆ ದರ್ಶನಕ್ಕೆ ಹೊರಟೆ. ಮಾತನಾಡುವಾಗ ಶ್ರೀರಾಮಕೃಷ್ಣರ ವಿಷಯವನ್ನು ಕುರಿತು ಹೇಳಿದರು.

ಶ್ರೀಮಾತೆ :— ನೆನ್ನೆ ಎಷ್ಟು ಚೆನ್ನಾಗಿತ್ತು! ಸರಳೆ ಶ್ರೀರಾಮಕೃಷ್ಣರ ಜೀವನವನ್ನು ಓದಿದಳು. ಅವರ ಉಪದೇಶ ಎಷ್ಟು ಸುಂದರವಾಗಿದೆ. ಅದು ಹೀಗೆ ಆಗುತ್ತದೆ ಎಂದು ಆಗ ನಮಗೆ ಹೇಗೆ ಗೊತ್ತಾಗಬೇಕಾಗಿತ್ತು! ಎಂತಹ ಪವಿತ್ರ ಜೀವ ಹುಟ್ಟಿತು. ಎಲ್ಲಾ ಜನರಿಗೂ ಅವರ ವಾಣಿಯಿಂದ ಶಾಂತಿ ದೊರಕಿತು. ಆನಂದವೇ ಮೂರ್ತಿವೆತ್ತಂತೆ ಇದ್ದರು ಅವರು. ದಿನವೆಲ್ಲಾ ಕೀರ್ತನೆ, ಆನಂದ, ನಗು, ಬೋಧನೆ ಮತ್ತು ಕಥೆ ಹೇಳುವುದರಲ್ಲಿ ಕಳೆಯುತ್ತಿತ್ತು. ನಾನು ಕಂಡಂತೆ ಅವರು ಯಾವಾಗಲೂ ವ್ಯಥೆಪಟ್ಟವರಲ್ಲ. ಅನೇಕ ವೇಳೆ ಅವರು ನನಗೆ ಒಳ್ಳೆಯ ಬುದ್ಧಿವಾದವನ್ನು ಕೊಡುತ್ತಿದ್ದರು. ನನಗೆ ಬರೆಯುವುದಕ್ಕೆ ಬಂದಿದ್ದರೆ ಅವನ್ನೆಲ್ಲಾ ಬರೆದಿಡುತ್ತಿದ್ದೆ. ಆಗಲಿ, ಸರಳೆ, ಈ ದಿನವೂ ಏನಾದರೂ ಸ್ವಲ್ಪ ಓದು.

ಸರಳೆ ಕಥಾಮೃತವನ್ನು ಓದಲುಪಕ್ರಮಿಸಿದಳು. ಶ್ರೀಮಾತೆ ಎಂದರು: "ರಾಖಾಲನ ತಂದೆಗೆ ಹೇಳಿದ ಮಾತನ್ನು ಗಮನಿಸಿದೆಯಾ? 'ಒಳ್ಳೆಯ ಸೇಬಿನ ಮರದಿಂದ ಒಳ್ಳೆಯ ಸೇಬಿನಹಣ್ಣೇ ಆಗುವುದು.' ಹೀಗೆ ಹೇಳಿ ಅವರನ್ನು ಮೆಚ್ಚಿಸುತ್ತಿದ್ದರು. ಅವರು ದಕ್ಷಿಣೇಶ್ವರಕ್ಕೆ ಬಂದರೆ ಒಳ್ಳೆಯ ರುಚಿಕರವಾದ ತಿಂಡಿಕೊಡುತ್ತಿದ್ದರು. ಎಲ್ಲಿ ರಾಖಾಲನನ್ನು ಕರೆದುಕೊಂಡು ಹೋಗಿಬಿಡುವರೋ ಎಂದು ಅಂಜುತ್ತಿದ್ದರು. ತಂದೆ ದಕ್ಷಿಣೇಶ್ವರಕ್ಕೆ ಬಂದಾಗ ರಾಖಾಲನಿಗೆ, 'ಅವರಿಗೆ ಎಲ್ಲಾ ತೋರಿಸು. ಚೆನ್ನಾಗಿ ನೋಡಿಕೊ' ಎಂದು ಹೇಳುತ್ತಿದ್ದರು."

ಸರಳೆ ಪರಿಚಾರಕಳಾದ ಬೃಂದೆಯ ವಿಷಯವನ್ನು ಓದುತ್ತಿದ್ದಳು. ಶ್ರೀಮಾತೆ, "ಆಕೆಯೂ ಅಷ್ಟು ಸುಲಭ ಹೆಂಗಸಲ್ಲ. ಬೆಳಗ್ಗೆ ಅವಳ ತಿಂಡಿಗೆ ಇಷ್ಟೇ ಪೂರಿ ಎಂದು ತೆಗೆದಿಡುತ್ತಿದ್ದರು. ಅದು ಕಡಿಮೆಯಾದರೆ ಬೈಗಳ ಮಳೆ ಕರೆಯುತ್ತಿದ್ದಳು. 'ನೋಡಿ, ಈ ಭದ್ರ ಮನುಷ್ಯರ ಹುಡುಗರನ್ನು. ನನ್ನ ಪಾಲನ್ನು ತಿಂದು ಮುಗಿಸಿರುವರು. ನನಗೆ ಸ್ವಲ್ಪ ಸಿಹಿ ತಿಂಡಿಯೂ ಸಿಕ್ಕುವುದಿಲ್ಲ' ಎನ್ನುತ್ತಿದ್ದಳು. ಎಲ್ಲಿ ಈ ಮಾತು ತರುಣ ಭಕ್ತರ ಕಿವಿಗೆ ಮುಟ್ಟುವುದೋ ಎಂದು ಶ್ರೀರಾಮಕೃಷ್ಣರು ಅಂಜುತ್ತಿದ್ದರು. ಒಂದು ದಿನ ಬೆಳಗ್ಗೆ ಅಷ್ಟು ಹೊತ್ತಿಗೇ ನಹಭತ್‍ಖಾನೆಗೆ ಬಂದು 'ಬೃಂದೆಯ ಪೂರಿಯನ್ನು ನಾನು ಇನ್ನೊಬ್ಬರಿಗೆ ಕೊಟ್ಟೆ. ಅವಳಿಗಾಗಿ ಸ್ವಲ್ಪ ಮಾಡು. ಇಲ್ಲದೇ ಇದ್ದರೆ ನಿಂದಿಸಲು ಪ್ರಾರಂಭಿಸುವಳು. ದುಷ್ಟರಿಂದ ದೂರವಿರಬೇಕು' ಎಂದರು. ಬೃಂದೆ ಬಂದ ಮೇಲೆ ನಾನು ಅವಳಿಗೆ 'ನಿನಗೆ ಏನೂ ಇಲ್ಲ. ಈಗತಾನೇ ಮಾಡುತ್ತಿರುವೆ' ಎಂದೆ. ಆಕೆ, 'ಅಯ್ಯೋ, ತೊಂದರೆ ತೆಗೆದುಕೊಳ್ಳಬೇಡಿ. ಸಾಮಾನು ಕೊಟ್ಟರೆ ಸಾಕು' ಎಂದಳು. ಅವಳಿಗೆ ಗೋಧಿಹಿಟ್ಟು, ತುಪ್ಪ, ಆಲೂಗೆಡ್ಡೆ, ತರಕಾರಿ, ಇವುಗಳನ್ನು ಕೊಟ್ಟೆ."

ಒಂದು ಅಧ್ಯಾಯವನ್ನು ಓದಿ ಆದಮೇಲೆ ಸರಳೆ ಅನಾರೋಗ್ಯದಲ್ಲಿದ್ದ ಗುಲಾಬಮಾಳನ್ನು ನೋಡಿಕೊಳ್ಳಲು ಹೋದಳು.

ಶ್ರೀಮಾತೆ ಮೆಲ್ಲಗೆ ಮಾತನಾಡಿದರು: "ಈ ದೇಹವನ್ನು ಗಮನಿಸಿದೆಯಾ? ಇವತ್ತು ಇದೆ. ನಾಳೆ ಇಲ್ಲ. ಪ್ರಪಂಚದಲ್ಲಿ ಬೇಕಾದಷ್ಟು ದುಃಖ ಕಷ್ಟಗಳಿವೆ. ಮತ್ತೊಂದು ಜನ್ಮಕ್ಕೆ ಏಕೆ ಮನುಷ್ಯ ಅಷ್ಟು

ಕಾತುರನಾಗಬೇಕು? ದೇಹ, ಅನಿವಾರ್ಯವಾಗಿ ಬರುವ ರೋಗ ರುಜಿನ ಗಳಿಂದ ಪಾರಾಗಲಾರದು. ನೆನ್ನೆ ವಿಲಾಸ, 'ತಾಯಿ, ಯಾವಾಗಲೂ ನಾವು ಜಾಗರೂಕರಾಗಿರಬೇಕು. ಹೀನ ಆಲೋಚನೆ ಮನಸ್ಸಿಗೆ ಬಾರದಂತೆ ನೋಡಿಕೊಳ್ಳಬೇಕಾಗಿದೆ' ಎಂದ. ಅದು ನಿಜ. ಸನ್ಯಾಸಿ, ಒಗೆದ ಬಿಳಿ ಬಟ್ಟೆಯಂತೆ. ಗೃಹಸ್ಥ, ಕಪ್ಪು ಬಟ್ಟೆಯಂತೆ. ಕಪ್ಪು ಬಟ್ಟೆಯಲ್ಲಿ ಎಷ್ಟು ಕೊಳೆ ಇದ್ದರೂ ಕಾಣುವುದೇ ಇಲ್ಲ. ಆದರೆ ಬಿಳೀ ಬಟ್ಟೆಮೇಲೆ ಇರುವ ಒಂದು ಬೊಟ್ಟು ಮಸಿಕೂಡ ಪ್ರಮುಖವಾಗಿ ಕಾಣುವುದು. ಸನ್ಯಾಸಿಯ ಜೀವನದಲ್ಲಿ ಹಲವು ಆತಂಕಗಳಿವೆ. ಪ್ರಪಂಚವೇ ಕಾಮ ಕಾಂಚನದಲ್ಲಿ ಸಿಕ್ಕಿದೆ. ಯತಿ ಯಾವಾಗಲೂ ವೈರಾಗ್ಯ ಮತ್ತು ಅನಾಸಕ್ತಿಯನ್ನು ಅಭ್ಯಾಸ ಮಾಡಬೇಕು. ಅದಕ್ಕೇ ಶ್ರೀರಾಮಕೃಷ್ಣರು, 'ಯತಿ ಯಾವಾ ಗಲೂ ಜಾಗ್ರತನಾಗಿರಬೇಕು' ಎನ್ನುತ್ತಿದ್ದರು."

ಅಷ್ಟುಹೊತ್ತಿಗೆ ನೈವೇದ್ಯ ಇಡುವುದಕ್ಕೆ ಹರಿಹರ ಮಹಾರಾಜರು ಮಹಡಿಯ ಮನೆಗೆ ಬಂದರು. ಅವರನ್ನು ನೋಡಿ ಶ್ರೀಮಾತೆ, 'ಪ್ರಪಂಚವನ್ನು ತ್ಯಜಿಸಿದ ಈ ಮಗುವನ್ನು ನೋಡು. ಶ್ರೀರಾಮಕೃಷ್ಣರ ಹೆಸರಿನಲ್ಲಿ ಎಲ್ಲವನ್ನೂ ತ್ಯಜಿಸಿರುವನು. ಗೃಹಸ್ಥರು ಸುಮ್ಮನೆ ಲೆಕ್ಕವಿಲ್ಲ ದಷ್ಟು ಮಕ್ಕಳನ್ನು ಹೆರುವರು. ಅದೊಂದು ತಮ್ಮ ಕರ್ತವ್ಯವೆಂದು ತಿಳಿಯುವರು. ಒಂದೆರಡು ಮಕ್ಕಳಾದ ಮೇಲೆ ದಂಪತಿಗಳು ಸಂಯಮಿ ಗಳಾಗಬೇಕು. ಆಂಗ್ಲೇಯರು ತಮ್ಮ ಆಸ್ತಿಗೆ ತಕ್ಕಷ್ಟು ಮಕ್ಕಳನ್ನು ಮಾತ್ರ ಪಡೆಯುವರೆಂದು ಕೇಳಿರುವೆನು. ತಮಗೆ ಬೇಕಾದಷ್ಟು ಮಕ್ಕ ಳನ್ನು ಪಡೆದ ಮೇಲೆ, ಗಂಡಹೆಂಡಿರು ಬೇರೆಯಾಗಿರುವರು. ದಂಪತಿಗಳು ತಮ್ಮ ಕೆಲಸದಲ್ಲಿ ನಿರತರಾಗಿರುವರು. ನಮ್ಮ ದೇಶವನ್ನು ನೋಡಿ!

"ನೆನ್ನೆ ನನ್ನನ್ನು ನೋಡುವುದಕ್ಕೆ ಒಬ್ಬ ಸಣ್ಣವಯಸ್ಸಿನ ಸ್ತ್ರೀ ಬಂದಿದ್ದಳು. ಸೊಂಟದಲ್ಲಿ ಮತ್ತು ಸುತ್ತಮುತ್ತ ಮಕ್ಕಳಿದ್ದರು. ಅವ ರನ್ನು ನೋಡಿಕೊಳ್ಳುವುದಕ್ಕೆ ಸಾಧ್ಯವಿರಲಿಲ್ಲ. ಅವಳೇನು ಹೇಳಿದಳು ಗೊತ್ತೆ? 'ತಾಯಿ, ನನಗೆ ಈ ಪ್ರಪಂಚ ಸುಖ ಇಷ್ಟವೇ ಇಲ್ಲ' ಎಂದಳು. 'ಹಾಗಾದರೆ ಮಗು ಇಷ್ಟೊಂದು ಮಕ್ಕಳು ಏತಕ್ಕೆ ಇವೆ?' ಎಂದೆ. 'ಇದೇ ಕೊನೆಯದು' ಎಂದಳು. 'ಇನ್ನುಮೇಲೆ ನಿನ್ನ ಇಚ್ಛೆಯಂತೆ ನಡೆದುಕೊಂಡರೆ ಚೆನ್ನಾಗಿರುವುದು' ಎಂದೆ, ಎಂದು ಶ್ರೀಮಾತೆ ನಕ್ಕರು.

ಭಕ್ತೆ :– ಹಿಂದೂಶಾಸ್ತ್ರದ ಪ್ರಕಾರ ಪತಿ, ಸ್ತ್ರೀಗೆ ಪೂಜನೀಯ ವ್ಯಕ್ತಿ.

ಪತಿಸೇವೆಯಿಂದ ಸ್ವರ್ಗಪ್ರಾಪ್ತಿ. ದೇವರನ್ನು ಕೂಡ ಪಡೆಯಬಹುದು. ಪತಿಗೆ ವಿರುದ್ಧವಾಗಿ ಸತಿಯು ಪ್ರಾರ್ಥನೆ, ಸಾಧನೆ ಇವುಗಳಿಂದ ಸಂಯಮಿಯಾಗಲು ಯತ್ನಿಸಿದರೆ ಅದು ಪಾಪವೆ?

ಶ್ರೀಮಾತೆ:– ನಿಜವಾಗಿ ಇಲ್ಲ. ದೇವರಿಗಾಗಿ ನೀನು ಏನು ಮಾಡಿದರೂ ಪಾಪವಿಲ್ಲ. ಸಂಯಮ ಅತ್ಯಂತ ಅವಶ್ಯಕ. ಹಿಂದೂ ವಿಧವೆಯರಿಗೆ ವಿಧಿಸಿರುವ ನಿಯಮಗಳೆಲ್ಲ ಇಂದ್ರಿಯ ನಿಗ್ರಹಕ್ಕೆ.

ಶ್ರೀರಾಮಕೃಷ್ಣರು ಮಾಡಿದ್ದೆಲ್ಲ ದೇವರಿಗಾಗಿ. ಒಂದು ಸಲ ನನಗೇ ಷೋಡಶೀ ಪೂಜೆ ಮಾಡಿದರು. ಆಗ 'ನನಗೆ ಕೊಟ್ಟ ಬಳೆ, ಬಟ್ಟೆ, ಪೂಜಾದ್ರವ್ಯ ಇವನ್ನು ಏನು ಮಾಡಲಿ?' ಎಂದೆ. ಸ್ವಲ್ಪ ಆಲೋಚನೆ ಮಾಡಿ, 'ಅವನ್ನೆಲ್ಲಾ ನಿಮ್ಮ ತಾಯಿಗೆ ಕೊಡಬಹುದು' ಎಂದರು. ಆಗ ನಮ್ಮ ತಂದೆ ಬದುಕಿದ್ದರು. 'ನೀನು ತಾಯಿಗೆ ಕೊಡುವಾಗ ಆಕೆಯನ್ನು ಸಾಧಾರಣ ಸ್ತ್ರೀಯಂತೆ ನೋಡಬೇಡ. ಆಕೆ ಜಗನ್ಮಾತೆಯ ಆವಿರ್ಭಾವನೆ ಎಂದು ನೋಡು' ಎಂದರು. ನಾನು ಹಾಗೆಯೇ ಮಾಡಿದೆ. ಅವರ ಬೋಧನೆಯ ಬಗೆ ಇದು.

೪ನೇ ಸೆಪ್ಟೆಂಬರ್, ೧೯೧೮

ಶ್ರೀಮಾತೆ ಆಸನದಮೇಲೆ ಕುಳಿತು ಜಪಮಾಡುತ್ತಿದ್ದರು. ಸಂಜೆ ಮಂಗಳಾರತಿ ಆಗಿತ್ತು. ಶ್ರೀಮಾತೆಯ ಸೋದರ ಸೊಸೆ ಬಂದು, 'ನನ್ನ ಮನಸ್ಸನ್ನು ಸರಿಪಡಿಸಿ. ತುಂಬಾ ಗೊಂಧಲವಾಗಿದೆ. ನಾನೊಂದು ಪತ್ರದಲ್ಲಿ ನನ್ನ ಆಸ್ತಿಯನ್ನೆಲ್ಲಾ ನಿಮಗೆ ಬರೆದು ಇಡುವೆನು. ನನ್ನ ಮರಣಾನಂತರ ನಿಮ್ಮ ಇಚ್ಛೆಯಂತೆ ಮಾಡಿ' ಎಂದಳು. ಶ್ರೀಮಾತೆ ನಗುತ್ತಾ, 'ನೀನು ಯಾವಾಗ ಸಾಯುವೆ?' ಎಂದರು. ತಕ್ಷಣ ಗಂಭೀರ ಭಾವದಿಂದ, 'ಇಂತಹ ಆಲೋಚನೆಗೆ ಕಾರಣ ಸೋಮಾರಿ ಜೀವನ ಮತ್ತು ವೃಥಾ ಆಲೋಚನೆಯಿಂದ ಕಾದಮೆದುಳು' ಎಂದು ಬುದ್ಧಿ ಹೇಳಿದರು.

ನನ್ನನ್ನು ನೋಡುತ್ತ ಶ್ರೀಮಾತೆ, "ಮಗು, ಶ್ರೀರಾಮಕೃಷ್ಣರು ಹೇಗೆ ಆಡಿಸುತ್ತಾರೆಂಬುದು ನಿನಗೆ ಗೊತ್ತೆ? ನನ್ನ ನೆಂಟರನ್ನೇ ನೋಡು! ಸುತ್ತಲೂ ಇರುವ ದುಷ್ಟ ಜನರನ್ನು ನೋಡು. ಒಬ್ಬಳು ಆಗಲೇ ಹುಚ್ಚಾಗಿರುವಳು. ಮತ್ತೊಬ್ಬಳು ಆಗುವ ಸ್ಥಿತಿಯಲ್ಲಿ ಇರುವಳು. ಅವಳನ್ನು ತರಬೇತುಮಾಡಲು ನಾನೆಷ್ಟು ತೊಂದರೆ ತೆಗೆದುಕೊಂಡೆ! ಆದರೆ ಏನೂ

ಪ್ರಯೋಜನವಾಗಲಿಲ್ಲ. ಅವಳಿಗೆ ಸ್ವಲ್ಪವೂ ಬುದ್ಧಿ ಇಲ್ಲ. ಅಲ್ಲಿ ನೋಡು. ಕಟಕಟಿಯುವ್ಮೇಲೆ ಒರಗಿ ನಿಂತು ತನ್ನ ಗಂಡ ಬರುವುದನ್ನೇ ನೋಡು ತ್ತಿರುವಳು. ಸಂಗೀತವಾಗುತ್ತಿರುವ ಕಡೆ ಎಲ್ಲಿ ತನ್ನ ಗಂಡ ಹೋಗಿ ಬಿಡುವನೋ ಎಂದು ಅಂಜುವಳು. ಹಗಲು ರಾತ್ರಿ ಅವನನ್ನು ತನ್ನ ಕಣ್ಣೆದುರಿಗೆ ಇಟ್ಟುಕೊಂಡಿರಲು ಪ್ರಯತ್ನಿಸುವಳು. ಎಂತಹ ಘೋರ ಆಸಕ್ತಿ! ಅವಳು ಇಷ್ಟು ಆಸಕ್ತಳಾಗಿರುವಳೆಂದು ನಾನು ಭಾವಿಸಿರಲಿಲ್ಲ.

ಶ್ರೀಮಾತೆಯ ಬಂಧು ಸ್ತ್ರೀ ದುಃಖದಿಂದ ಹೋಗಿ ಮಲಗಿ ಕೊಂಡಳು.

ಶ್ರೀಮಾತೆ:—" ಮಗು, ನೀನು ತುಂಬಾ ಅದೃಷ್ಟವಂತೆ. ಮನುಷ್ಯ ಜನ್ಮ ಪಡೆದೆ. ದೇವರಮೇಲೆ ತುಂಬಾ ಭಕ್ತಿ ಇರಲಿ. ತುಂಬಾ ಕಷ್ಟಪಟ್ಟು ಕೆಲಸಮಾಡಬೇಕು. ಪ್ರಯತ್ನವಿಲ್ಲದೆ ಏನಾದರೂ ಹೇಗೆ ಸಿಕ್ಕುವುದು ? ತುಂಬಾ ಕೆಲಸವಿದ್ದರೂ, ದಿನದಲ್ಲಿ ಕೆಲವು ಕಾಲ ಪ್ರಾರ್ಥ ನೆಗೆ ಮೀಸಲಾಗಿಡಬೇಕು. ನಾನು ದಕ್ಷಿಣೇಶ್ವರದಲ್ಲಿದ್ದಾಗ ತುಂಬಾ ಕೆಲಸಮಾಡುತ್ತಿದ್ದೆ. ಆದರೂ ಪ್ರಾರ್ಥನೆ ಧ್ಯಾನವನ್ನು ಬಿಡಲಿಲ್ಲ. ಮನಸ್ಸು ಚಂಚಲವಾಗಿದೆ, ಎಂದು ಹೇಳುವ ನನ್ನ ಸೋದರ ಸೊಸೆಯೂ ಹಾಗೇ ಮಾಡಲಿ. ಅವಳು ಅದನ್ನು ಮಾಡುವುದಿಲ್ಲ. ಸುಮ್ಮನೆ ದೂರು ವಳು! ಅವಳಿಗೆ ಏನು ತೊಂದರೆ? ಮನೋವ್ಯಥೆ ಎಂದರೆ ಏನು ಎನ್ನು ವುದೇ ನನಗೆ ಗೊತ್ತಿರಲಿಲ್ಲ. ಈಗ ಹಗಲು ರಾತ್ರಿ ನಾನು ನನ್ನ ನೆಂಟರಿಗೆ ವ್ಯಥೆಪಡುತ್ತಿರುವೆನು. ಈ ನಾದಿನಿ ನಮ್ಮ ಮನೆಗೆ ಬಂದ ಹೊತ್ತು ಒಳ್ಳೆಯದಲ್ಲ. ನನ್ನ ವ್ಯಥೆ ಎಲ್ಲ ಅವಳ ಮಗಳು ರಾಧೆಯನ್ನು ಪೋಷಿಸಿದು ದರಿಂದ. ಅವರೆಲ್ಲ ಹೊರಟುಹೋಗಲಿ. ನನಗೆ ಯಾರೂ ಬೇಡ. ಈ ಹುಡುಗಿಯನ್ನು ನೋಡಿ. ನನ್ನ ಮಾತನ್ನು ಸ್ವಲ್ಪವೂ ಕೇಳುವುದೇ ಇಲ್ಲ. ಎಂತಹ ಅವಿಧೇಯರು!" ಎಂದರು.

ಗುಲಾಬ್‌ಮಾ:— ನೋಡಿ, ಅವರು ಹೇಗೆ ಅಲಂಕಾರಮಾಡಿ ಕೊಳ್ಳುವರು! ಹೀಗೆ ಇದ್ದರೆ ಗಂಡನ ಪ್ರೀತಿ ಸಂಪಾದಿಸಬಹುದೆಂದು ತಿಳಿಯುವರು.

ಶ್ರೀಮಾತೆ:—ಓ! ಎಷ್ಟು ದಯೆಯಿಂದ ಶ್ರೀರಾಮಕೃಷ್ಣರು ನನ್ನನ್ನು ಕಾಣುತ್ತಿದ್ದರು. ಒಂದು ದಿನವಾದರೂ ನನಗೆ ವ್ಯಥೆಯಾಗುವಂತಹ ಮಾತನ್ನು ಆಡುತ್ತಿರಲಿಲ್ಲ. " ಯಾವಾಗಲೂ ಕೆಲಸಮಾಡುತ್ತಿರಬೇಕು.

ಸೋಮಾರಿಯಾಗಿದ್ದರೆ ಮನಸ್ಸಿನಲ್ಲಿ ಯಾವಾಗಲೂ ಕೆಲಸಕ್ಕೆ ಬಾರದ ಹೀನ ಆಲೋಚನೆಗಳೆಲ್ಲ ಅಲ್ಲಿ ನೆರೆಯುವುವು" ಎನ್ನುತ್ತಿದ್ದರು.

"ಮಗು, ಈ ಮನಸ್ಸು ಒಂದು ಕಾಡಾನೆಯಂತೆ. ಗಾಳಿಯೊಂದಿಗೆ ಓಡುವುದು. ಆದಕ್ಕೇ ಯಾವಾಗಲೂ ನಿತ್ಯಾನಿತ್ಯ ವಸ್ತು ವಿವೇಕ ಮಾಡಬೇಕು. ದೇವರನ್ನು ಕಾಣಬೇಕಾದರೆ ಕಷ್ಟಪಟ್ಟು ಸಾಧನೆಮಾಡ ಬೇಕು. ಆಗ ನನ್ನ ಮನಸ್ಸು ಎಂತಹ ಮೇಲಿನ ಮಟ್ಟದಲ್ಲಿತ್ತು! ದಕ್ಷಿ ಣೇಶ್ವರದಲ್ಲಿ ಯಾರೋ ರಾತ್ರಿ ಹೊತ್ತು ಕೊಳಲನ್ನು ಊದುತ್ತಿದ್ದರು. ಅದನ್ನು ಕೇಳಿದಾಗ ದೇವರ ಸಾಕ್ಷಾತ್ಕಾರಕ್ಕೆ ಅತಿ ಕಾತುರಳಾಗುತ್ತಿದ್ದೆ. ಆ ಧ್ವನಿ ಪ್ರತ್ಯಕ್ಷ ದೇವರಿಂದ ಬರುತ್ತಿದೆ, ಎಂದು ಭಾವಿಸುತ್ತಿದ್ದೆ. ಆಗ ನನಗೆ ಸಮಾಧಿಯಾಗುತ್ತಿತ್ತು. ಬೇಲೂರಿನಲ್ಲಿಯೂ ಅದೇ ಆನಂದವಾ ಯಿತು. ಮನಸ್ಸಿನ ಚಂಚಲತೆ ಆಗ ನಿಲ್ಲುತ್ತಿತ್ತು. ನಾನು ಧ್ಯಾನಾವಸ್ಥೆ ಯಲ್ಲಿರುತ್ತಿದ್ದೆ. ಆದಕ್ಕೇ ನರೇಂದ್ರ ನನಗೆ ಅಲ್ಲಿ ಮನೆ ಕಟ್ಟಬೇಕೆಂದು ಇದ್ದ. ಈಗ ಇರುವ ಮನೆಯನ್ನು ಕೇದಾರಬಾಬು ಕೊಟ್ಟನು. ಈಗ ಸ್ಥಳದ ಬೆಲೆ ಬಹಳ ಏರಿದೆ. ಈಗ ಸ್ಥಳ ಕೊಳ್ಳಲು ಸಾಧ್ಯವೇ ಇಲ್ಲ. ಇದೆಲ್ಲ ದೇವರ ದಯೆಯಿಂದ ಸಾಧ್ಯವಾಯಿತು".

ಅಷ್ಟು ಹೊತ್ತಿಗೆ ತಮ್ಮ ತಮ್ಮನ ಮಗಳು "ಮಾಕು" ಎಂಬು ವಳು ಬಂದಳು. ಕಂಕಳಲ್ಲಿ ಮಗು ಇತ್ತು. ಅದನ್ನು ಶ್ರೀಮಾತೆಯ ಹತ್ತಿರ ಬಿಟ್ಟು "ತಾಯಿ, ಏನುಮಾಡಲಿ? ಇದು ಮಲಗುವುದೇ ಇಲ್ಲ" ಎಂದಳು. "ಮಗುವಿನಲ್ಲಿ ಸತ್ವಗುಣವಿದೆ. ಅದಕ್ಕೇ ಅದು ಅಷ್ಟು ಮಲ ಗುವುದಿಲ್ಲ" ಎಂದರು.

ಶ್ರೀಮಾತೆಗೆ ಬೆನ್ನುಗುಳ್ಳೆಯಿಂದ ತುಂಬಾ ನೋವನ್ನು ಅನುಭವಿ ಸುತ್ತಿದ್ದರು. ಅವರ ಅಪ್ಪಣೆಯಂತೆ ತೈಲವನ್ನು ಲೇಪಿಸಿದೆ. * * *

ಒಂದು ದಿನ ಶ್ರೀಮಾತೆ ತಮ್ಮ ಮನೆಯ ಉತ್ತರದ ಅಂಗಳದಲ್ಲಿ ಕುಳಿತಿದ್ದರು. ಗುಳ್ಳೆಯ ನೋವನ್ನು ಇನ್ನೂ ಅವರು ಅನುಭವಿಸುತ್ತಿ ದ್ದರು. ಅನೇಕ ಭಕ್ತರು ಬಂದು ತಮಗೆ ನಮಸ್ಕರಿಸಿದುದರಿಂದ ಅವರ ಪಾಪವನ್ನು ತಾವು ಹೀಗೆ ಅನುಭವಿಸಬೇಕೆಂದು ಹೇಳುತ್ತಿದ್ದರು. ಮಾತು ಶ್ರೀರಾಮಕೃಷ್ಣರಿಗೆ ಸಂಬಂಧಪಟ್ಟ ವಿಷಯಕ್ಕೆ ತಿರುಗಿತು.

ಶ್ರೀಮಾತೆ:- ಒಂದುದಿನ ಶ್ರೀರಾಮಕೃಷ್ಣರು ಕಾಸೀಪುರದ ಉದ್ಯಾನವನದಲ್ಲಿದ್ದಾಗ ಕೆಲವು ಭಕ್ತರು ದಕ್ಷಿಣೇಶ್ವರದ ದೇವಾಲಯಕ್ಕೆ

ಜಗನ್ಮಾತೆಯ ನೈವೇದ್ಯಕ್ಕೆಂದು ಫಲಪುಷ್ಪ ತಂದರು. ಶ್ರೀರಾಮಕೃಷ್ಣರು ಕಾಸೀಪುರದಲ್ಲಿ ಇರುವರೆಂದು ಕೇಳಿ ಅವರ ಭಾವಚಿತ್ರಕ್ಕೆ ಇದನ್ನು ನಿವೇದಿಸಿ ಪ್ರಸಾದವನ್ನು ಸ್ವೀಕರಿಸಿದರು. ಇದನ್ನು ಕೇಳಿ ಶ್ರೀರಾಮ ಕೃಷ್ಣರು, 'ಜಗನ್ಮಾತೆಯ ನೈವೇದ್ಯಕ್ಕೆಂದು ತಂದು ಅದನ್ನೆಲ್ಲ ಇಲ್ಲಿ ಕೊಟ್ಟರಲ್ಲ!' ಎಂದರು. ನನಗೆ ಅಂಜಿಕೆಯಾಯಿತು. 'ಆಗಲೆ ಇವರು ರೋಗದಲ್ಲಿರುವರು. ಮುಂದೆ ಏನಾಗುವುದೊ? ಎಂತಹ ದುರ ದೃಷ್ಟ! ಅವರು ಹೀಗೆ ಏಕೆ ಮಾಡಿದರು?' ಎಂದು ಅಂಜಿದೆ. ಶ್ರೀರಾಮ ಕೃಷ್ಣರು ಇದನ್ನು ಹಲವು ವೇಳೆ ಹೇಳುತ್ತಿದ್ದರು. ಬಹಳ ಹೊತ್ತಾದ ಮೇಲೆ ರಾತ್ರಿ, ಶ್ರೀರಾಮಕೃಷ್ಣರು 'ಕಾಲಕ್ರಮೇಣ ಜನ ನನ್ನನ್ನು ಪ್ರತಿಯೊಂದು ಮನೆಯಲ್ಲಿಯೂ ಆರಾಧಿಸುವುದನ್ನು ನೋಡುವಿ. ಇದು ನಿಜವಾಗಿ ಆಗುವುದು.' ಎಂದು ಹೇಳಿದರು. ತಮ್ಮನು ಕುರಿತು 'ನಾನು' ಎಂದುದು ಇದೇ ಮೊದಲು. ಸಾಧಾರಣವಾಗಿ ನಾನು, ನನ್ನದು ಎಂಬ ಮಾತನ್ನು ಉಪಯೋಗಿಸುತ್ತಿರಲಿಲ್ಲ. 'ಇದಕ್ಕೆ ಸಂಬಂಧಪಟ್ಟ' 'ಈ ದೇಹಕ್ಕೆ' ಎಂದು ಸಂಬೋಧಿಸುತ್ತಿದ್ದರು.

ಶ್ರೀರಾಮಕೃಷ್ಣರು ಕಾಲವಾದಮೇಲೆ ಅವರಿಗೆ ಸೇರಿದ ಕೆಲವು ಬೆಲೆ ಬಾಳುವ ಶಾಲು ಮುಂತಾದುವು ಯಾರಿಗೆ ಸೇರಬೇಕೆಂಬ ವಿವಾದ ವಾಯಿತು. ಭಕ್ತರು ಮಾತ್ರ ಇದನ್ನು ಅಮೂಲ್ಯವಾದುದೆಂದು ಭಾವಿಸಿ ರಕ್ಷಿಸಬೇಕೆಂದರು. ಇದನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿ ರಕ್ಷಿಸಿ ಬಲರಾಮ ಬಾಬುವಿನ ದಿವಾನ ಖಾನೆಯಲ್ಲಿ ಇಟ್ಟರು. ಮಗು! ದೇವರ ಇಚ್ಛೆಯನ್ನು ಯಾರು ಬಲ್ಲರು? ಅವರ ಮನೆಯ ಆಳು ಹಲವು ಬೆಲೆ ಬಾಳುವ ವಸ್ತ್ರ ಗಳನ್ನು ಕದ್ದು ಮಾರಿದನು ಅಥವಾ ಇನ್ನಾರಿಗೊ ಕೊಟ್ಟನು. ಅದನ್ನು ಮನೆಯ ದಿವಾನ ಖಾನೆಯಲ್ಲಿ ಇಡಬಾರದಾಗಿತ್ತು. ಒಳಗಿಡಬೇಕಾ ಗಿತ್ತು. ಕಳೆದುಳಿದ ಬಟ್ಟೆಬರೆಯನ್ನು ಈಗ ಬೇಲೂರಿನ ಮಠದಲ್ಲಿ ಟ್ಟಿರುವರು.

ನಮ್ಮ ಮಾವನವರು ದೈವಭಕ್ತರು. ಯಾರಿಂದಲೂ ಅವರು ದಾನ ವನ್ನು ಸ್ವೀಕರಿಸಲಿಲ್ಲ. ತಾವು ಇಲ್ಲದೇ ಇರುವಾಗ ಯಾರಾದರೂ ದಾನ ಕೊಟ್ಟರೆ ಅದನ್ನು ಸ್ವೀಕರಿಸಬಾರದೆಂದು ಮನೆಯಲ್ಲಿ ಹೇಳುತ್ತಿದ್ದರು. ಆದರೆ ನಮ್ಮ ಅತ್ತೆಯವರು ಯಾರಾದರೂ ಏನನ್ನಾದರೂ ಕೊಟ್ಟರೆ ಅದನ್ನು ಅಡಿಗೆ ಮಾಡಿ, ದೇವರಿಗೆ ನೈವೇದ್ಯಮಾಡಿ ಪ್ರಸಾದವನ್ನು ಎಲ್ಲ

ರಿಗೂ ಹಂಚುತ್ತಿದ್ದರು. ಮಾವನವರಿಗೆ ಇದು ಗೊತ್ತಾದರೆ ಕೋಪಿಸಿ ಕೊಳ್ಳುತ್ತಿದ್ದರು. ಅವರಿಗೆ ತೀವ್ರ ಭಕ್ತಿ ಇತ್ತು. ಅದಕ್ಕೇ ಶ್ರೀಗುರು ಅವರ ಕುಲದಲ್ಲಿ ಹುಟ್ಟಿದರು.

ಹರಿದಾಸಿ ಎಂಬ ಸ್ತ್ರೀ ನವದ್ವೀಪಕ್ಕೆ ಹೋಗಬೇಕೆಂದು ಇದ್ದಳು. ಅವಳು ಅಲ್ಲಿತನಕ ಹೋಗಲಾಗಲಿಲ್ಲ. ಕಮಾರ ಪುಕುರದಲ್ಲೇ ನಿಂತಳು. ಅವಳು ನನ್ನನ್ನು ತುಂಬಾ ಪ್ರೀತಿಸುತ್ತಿದ್ದಳು. ದೈವಭಕ್ತಳು. ಶ್ರೀಗುರು ದೇವರ ಜನ್ಮಸ್ಥಾನದಿಂದ ತಂದ ಪಾದಧೂಳಿಯನ್ನು ತನ್ನ ಹತ್ತಿರ ಇಟ್ಟು ಕೊಂಡಿದ್ದಳು. ಅದನ್ನು ನೋಡುತ್ತ 'ಇದು ನನ್ನ ನವದ್ವೀಪ. ಗೌರಾಂಗದೇವ ಇಲ್ಲಿ ಹುಟ್ಟಿದ. ನಾನು ಏತಕ್ಕೆ ನವದ್ವೀಪಕ್ಕೆ ಹೋಗ ಬೇಕು!' ಎನ್ನುತ್ತಿದ್ದಳು. ಎಂತಹ ಅದ್ಭುತ ಶ್ರದ್ಧೆ!

ಶ್ರೀರಾಮಕೃಷ್ಣರು ಕಾಲವಾದಮೇಲೆ ಒರಿಸ್ಸಾ ದೇಶದ ಸನ್ಯಾಸಿ ಯೊಬ್ಬನು ಕಮಾರ ಪುಕೂರದಲ್ಲಿದ್ದನು. ಬೆಳಗ್ಗೆ ಸಾಯಂಕಾಲ ಅವರ ದರ್ಶನಕ್ಕೆ ಹೋಗುತ್ತಿದ್ದೆನು. 'ಪೂಜ್ಯಸ್ವಾಮಿಜಿ ಹೇಗಿರುವಿರಿ' ಎಂದು ಕೇಳುತ್ತಿದ್ದೆ. ಆತನಿಗೆ ಎಷ್ಟೋ ಕಷ್ಟಪಟ್ಟು ಒಂದು ಗುಡಿಸಲನ್ನು ಕಟ್ಟಿದೆ. ಪ್ರತಿದಿನ ಮೋಡ ಕವಿದು ಇನ್ನೇನು ಮಳೆ ಬೀಳುವುದೋ ಎನ್ನುವಂತಿರುತ್ತಿತ್ತು. ಕೈಮುಗಿದು ದೇವರಿಗೆ, 'ಸ್ವಲ್ಪ ನಿಧಾನಿಸು ದೇವ. ಈ ಗುಡಿಸಲನ್ನು ಪೂರೈಸುವೆನು. ಆ ಮೇಲೆ ಎಷ್ಟು ಜೋರಾಗಿ ಬೇಕಾದರೂ ಮಳೆ ಬರಲಿ' ಎಂದು ಬೇಡುತ್ತಿದ್ದೆ. ಹಳ್ಳಿಯ ಜನ ಗುಡಿಸಲಿಗೆ ಬೇಕಾಗುವ ಗಳು, ಹುಲ್ಲು, ಇವುಗಳನ್ನು ಕೊಟ್ಟರು. ಅಂತೂ ಗುಡಿಸಲನ್ನು ಕಟ್ಟಿ ಆಯಿತು. ಆದರೆ ದುರದೃಷ್ಟವಶಾತ್ ಆ ಸಾಧು ಕೆಲವು ದಿನಗಳಲ್ಲೇ ಕಾಲವಾದನು.

ಶ್ರೀರಾಮಕೃಷ್ಣರು ತಮ್ಮ ದೇಹ ಗಯೆಯಿಂದ ಬಂದಿತೆಂದು ಹೇಳು ತ್ತಿದ್ದರು. ಅವರ ತಾಯಿ ಕಾಲವಾದ ಮೇಲೆ ಗಯೆಯಲ್ಲಿ ನನಗೆ ಪಿಂಡ ಕೊಡುವಂತೆ ಹೇಳಿದರು. ಮಗ ಬದುಕಿರುವಾಗ ಸೊಸೆಗೆ ಪಿಂಡ ಕೊಡುವ ಅಧಿಕಾರವಿಲ್ಲವೆಂದೆ. 'ಇಲ್ಲ, ಇಲ್ಲ. ನಿನಗೆ ಅಧಿಕಾರವಿದೆ. ನನಗೆ ಯಾವರೀತಿಯಲ್ಲೂ ಗಯೆಗೆ ಹೋಗುವುದಕ್ಕೆ ಆಗುವುದಿಲ್ಲ. ನಾನು ಹೋದರೆ ಹಿಂತಿರುಗಿ ಬರಲು ಸಾಧ್ಯವೆಂದು ತಿಳಿಯುವೆಯ?' ಎಂದರು. ಅವರು ಅಲ್ಲಿಗೆ ಹೋಗಲಿಲ್ಲ. ನಾನೇ ಅನಂತರ ಗಯೆಯಲ್ಲಿ ಅದನ್ನು ಸಲ್ಲಿಸಿದೆ.

೨೮ ನೇ ಸೆಪ್ಟೆಂಬರ್, ೧೯೧೮.

ಬೆಳಗ್ಗೆ ಉದ್ಬೋಧನ ಆಫೀಸಿಗೆ ಹೋದೆ. ಶ್ರೀಮಾತೆ ನೈವೇದ್ಯಕ್ಕೆ ಹಣ್ಣನ್ನು ಅಣಿಮಾಡುತ್ತಿದ್ದರು. ಅವರ ದೃಷ್ಟಿ ನನ್ನ ಮೇಲೆ ಬಿದ್ದೊಡ ನೆಯೇ 'ಓ ನಿನ್ನನ್ನು ನೋಡಿ ತುಂಬಾ ಸಂತೋಷ. ಇಂದು ಬೋಧನ-ಪುಣ್ಯದಿನ (ದುರ್ಗಾಪೂಜೆಗೆ ಒಂದು ದಿನ ಹಿಂದೆ). ಈ ಹೂವನ್ನು ಪೂಜೆಗೆ ಅಣಿಮಾಡಿ ಹಣ್ಣಿನ ತಟ್ಟೆಯನ್ನು ಇಲ್ಲಿಡು' ಎಂದರು. ಅವರು ಹೇಳಿದಂತೆ ಮಾಡಿದೆ. ನಾನು ಅವರ ತಲೆಯನ್ನು ಬಾಚಿದೆ. ಆಗ ಕೆಲವು ಕೂದಲು ಉದುರಿತು. 'ಇದನ್ನು ತೆಗೆದುಕೊ. ಇಟ್ಟುಕೊಂಡಿರು' ಎಂದರು. ನಾನು ಧನ್ಯಳೆಂದು ಭಾವಿಸಿದೆ. ಅವರ ಜ್ಞಾಪಕಾರ್ಥವಾಗಿ ಕೆಲವು ಕೂದಲು ನನಗೆ ಬೇಕೆಂದು ಹಿರಿದಾದ ಆಸೆ ಇತ್ತು.

ಪ್ರಖ್ಯಾತ ವೈದ್ಯ ಶ್ಯಾಮದಾಸ್ ಕವಿರಾಜ ರಾಧೆಯನ್ನು ಪರೀಕ್ಷಿಸಲು ಬಂದನು. ಪರೀಕ್ಷಿಸಿದನಂತರ ಶ್ರೀಮಾತೆ ರಾಧೆಗೆ 'ವೈದ್ಯರಿಗೆ ನಮಸ್ಕರಿಸು' ಎಂದು ಹೇಳಿದರು. ರಾಧೆ ಹಾಗೆಯೇ ಮಾಡಿದಳು. ವೈದ್ಯ ಹೋದ ಮೇಲೆ ಯಾರೋ 'ವೈದ್ಯ ಬ್ರಾಹ್ಮಣನೆ?' ಎಂದು ಕೇಳಿದರು.

ಶ್ರೀಮಾತೆ:– ಇಲ್ಲ, ಅವನು ವೈದ್ಯ ಕುಲಕ್ಕೆ ಸೇರಿದವನು.

ಭಕ್ತೆ:– ಹಾಗಾದರೆ ಅವನಿಗೆ ನಮಸ್ಕರಿಸುವಂತೆ ರಾಧೆಗೆ ಹೇಗೆ ಹೇಳಿದ್ದು.

ಶ್ರೀಮಾತೆ:– ಏತಕ್ಕೆ ಹೇಳಬಾರದು? ಆತ ಅಷ್ಟು ಧರ್ಮಿಷ್ಟ. ಬ್ರಾಹ್ಮಣನಿಗೆ ಸಮ. ಅವನಿಗೆ ನಮಸ್ಕರಿಸದೆ ಮತ್ತಾರಿಗೆ ನಮಸ್ಕರಿಸಬೇಕು? ಮಗು, ನೀನು ಹೇಳುತ್ತಿರುವುದೇನು!

೩೦ ನೇ ಸೆಪ್ಟೆಂಬರ್, ೧೯೧೮.

ಇಂದು ಮಹಾಷ್ಟಮಿ ಪುಣ್ಯದಿನ. ಬೆಳಗ್ಗೆ ಹೊತ್ತಿಗೆ ಮುಂಚೆಯೇ ನಾನು ಮತ್ತು ನನ್ನ ಸಹೋದರಿ ಉದ್ಬೋಧನಕ್ಕೆ ಬಂದೆವು ಸ್ವಲ್ಪ ಹೊತ್ತಾದ ಮೇಲೆ ಕೆಲವು ಗೃಹಿಣೀ ಭಕ್ತರು ಹೂವನ್ನು ತಂದರು. ಶ್ರೀಮಾತೆಯನ್ನು ಪೂಜಿಸಿ ಸ್ನಾನಕ್ಕೆ ಗಂಗಾನದಿಗೆ ಹೋದರು. 'ಇಂದು ಇಲ್ಲಿರುವೆಯಾ? ಇವತ್ತು ದುರ್ಗಾಪೂಜೆಯ ಎರಡನೆ ದಿನ. ಮಹಾಷ್ಟಮಿ' ಎಂದರು. ನಾನು ಒಪ್ಪಿದೆ. ಸ್ವಲ್ಪಹೊತ್ತಾದ ಮೇಲೆ ಪೂಜ್ಯ ಸ್ವಾಮಿ ಶಾರದಾನಂದರು ಶ್ರೀಮಾತೆಗೆ ನಮಸ್ಕಾರಮಾಡುವುದಕ್ಕೆ

ಬಂದರು. ನಾವು ಮಗ್ಗುಲ ಕೋಣೆಗೆ ಹೋದೆವು. ಶ್ರೀಮಾತೆ ತಮ್ಮ ಕಾಲನ್ನು ಕೆಳಗೆ ಬಿಟ್ಟುಕೊಂಡು ಮಂಚದಮೇಲೆ ಕುಳಿತಿದ್ದರು. ಕೆಲವು ಭಕ್ತರು ಬಂದು ನಮಿಸಿ ಹೋದರು

ಅನಂತರ ಮಾಕು ಮತ್ತು ಇತರ ಗೃಹಿಣೀಭಕ್ತರೊಂದಿಗೆ ಗಂಗಾ ಸ್ನಾನಕ್ಕೆ ಹೋದೆವು. ಶ್ರೀಮಾತೆ ವಾತರೋಗದಿಂದ ಪ್ರತಿದಿನ ಗಂಗಾ ಸ್ನಾನ ಮಾಡಲಾಗುವುದಿಲ್ಲವೆಂದು ಅಂದು ಮನೆಯಲ್ಲೇ ಸ್ನಾನ ಮಾಡು ತ್ತೇನೆ ಎಂದರು. ನಾವು ಹಿಂತಿರುಗಿ ಬರುವಾಗ ಹಲವು ಗೃಹಿಣೀಭಕ್ತರು ಅವರನ್ನು ಪೂಜಿಸುತ್ತಿದ್ದರು. ಹಲವರು ಸೀರೆಯನ್ನು ಕೊಡಲು ತಂದಿ ದ್ದರು. ಪೂಜೆಯಾದ ಮೇಲೆ ಸೀರೆಯನ್ನು ಅವರಿಗೆ ಹೊದಿಸಿದರು. ಕಾಳೀಘಾಟಿನಲ್ಲಿ ಶ್ರೀ ಕಾಳಿಕಾವಿಗ್ರಹವನ್ನು ಅಲಂಕರಿಸುವಂತೆ ಮಾಡಿ ದರು. ಅನಂತರ ಶ್ರೀಮಾತೆ ಒಂದಾದಮೇಲೊಂದು ಅವನ್ನೆಲ್ಲಾ ತೆಗೆ ದಿಟ್ಟರು. ಕೆಲವು ಭಕ್ತರಿಗೆ 'ಇದು ಒಳ್ಳೆಯ ಸೀರೆ' ಎನ್ನುತ್ತಿದ್ದರು.

ಒಬ್ಬ ಬ್ರಹ್ಮಚಾರಿ ಬಂದು 'ಈಗ ಪುರುಷರು ಬಂದು ತಮಗೆ ನಮಸ್ಕರಿಸುವರು' ಎಂದು ಹೇಳಿದನು. ಎಂತಹ ಚಿತ್ತಾಕರ್ಷಕ ದೃಶ್ಯ! ಕೈಯಲ್ಲಿ ಹೂವು, ಅರಳಿದ ಕಮಲ, ಬಿಲ್ವಪತ್ರ ಇವನ್ನು ಹಿಡಿದುಕೊಂಡು ಒಬ್ಬರಾದ ಮೇಲೊಬ್ಬರು ಬಂದು ಪೂಜಿಸಿ ನಮಿಸಿದರು. ಹೀಗೇ ಸ್ವಲ್ಪ ಹೊತ್ತಾಯಿತು. ಬಲರಾಮನ ಮನೆಯವರೂ ಬಂದರು. ನಾನು ಕೊನೆಗೆ ಹೋದೆ. ಪೂಜೆಯಾದಮೇಲೆ ಅವರಿಗೆ ಸೀರೆ ಹೊದಿಸಿದೆ. ಆಗ ಅವರು 'ಇವತ್ತು ಹೇಗೂ ಹೊಸಬಟ್ಟೆ ಉಡಬೇಕಾಗಿರುವುದರಿಂದ ಈ ಸೀರೆಯನ್ನು ಉಟ್ಟುಕೊಳ್ಳುವೆ' ಎಂದರು. ನಾನು ಕೊಟ್ಟ ಸೀರೆಯನ್ನು ಧರಿಸಿದರು. ನನ್ನ ಕಣ್ಣಿನಲ್ಲಿ ನೀರು ಉಕ್ಕಿತು. ಅದು ಸಾಧಾರಣ ಸೀರೆ. ಎಷ್ಟೋ ಬೆಲೆ ಬಾಳುವ ಸೀರೆ ಸುತ್ತಲೂ ಇದ್ದುವು. ನಾನು ಶ್ರೀಮಾತೆಯ ಬಡ ಮಗಳು. ಅವರು ನನಗೆ ತೋರಿದ ಪ್ರೀತಿಯಿಂದ ನನಗೆ ಲಜ್ಜೆ ಯಾಯಿತು. 'ಈ ಸೀರೆಯ ಅಂಚು ಎಷ್ಟು ಚೆನ್ನಾಗಿದೆ!' ಅಂದರು.

ಕಾವಿ ಬಟ್ಟೆಯುಟ್ಟ ಸ್ತ್ರೀಯೊಬ್ಬಳು ಅವರಿಗೆ ನಮಿಸಿ ಪಾದದ ಬಳಿ ಎರಡು ರೂಪಾಯಿಯನ್ನು ಇಟ್ಟಳು. ಶ್ರೀಮಾತೆ, "ಅಯ್ಯೋ, ದೇವರೆ! ದುಡ್ಡನ್ನು ಏತಕ್ಕೆ ಇಡುವೆ? ಕಾವಿ ಧರಿಸಿರುವೆ, ರುದ್ರಾಕ್ಷಿ ಮಾಲೆ ಹಾಕಿಕೊಂಡಿರುವೆ" ಎಂದರು. ಶ್ರೀಮಾತೆ ಆಕೆಯ ಗುರು ವಿನ ವಿಷಯ ಕೇಳಿದರು. ಆಕೆ ತನಗೆ ಉಪದೇಶವಾಗಿಲ್ಲವೆಂದಳು.

"ಉಪದೇಶವಿಲ್ಲದೆ, ಆಧ್ಯಾತ್ಮಿಕ ಅನುಭವವಿಲ್ಲದೆ ಈ ಬಟ್ಟೆಯನ್ನು ಉಟ್ಟಿರುವೆ. ಇದು ಯೋಗ್ಯವಲ್ಲ. ನೀನು ಧರಿಸಿರುವ ಬಟ್ಟೆ ಅತಿ ಪವಿತ್ರ. ನಾನು ಕೈಮುಗಿದು ನಿನಗೆ ನಮಿಸುವುದರಲ್ಲಿದ್ದೆ. ಎಲ್ಲರೂ ನಿನಗೆ ನಮಿಸುವರು. ಅದನ್ನು ಜೀರ್ಣಿಸಿಕೊಳ್ಳುವ ಶಕ್ತಿಪಡೆಯಬೇಕು" ಎಂದರು. "ತಮ್ಮಿಂದ ಉಪದೇಶಪಡೆಯಬೇಕು" ಎಂದರು ಅವರು.

ಶ್ರೀಮಾತೆ:– ಇದು ಹೇಗೆ ಸಾಧ್ಯ!

ಸ್ತ್ರೀ ಬಲಾತ್ಕರಿಸಿದಳು. ಗುಲಾಬ್‌ಮಾ ಅದನ್ನು ಅನುಮೋದಿಸಿದರು. ಶ್ರೀಮಾತೆ ಸ್ವಲ್ಪ ಸಮ್ಮತಿ ಈಯುವಂತೆ ಕಂಡಿತು. "ಆಮೇಲೆ ಅದನ್ನು ವಿಚಾರಮಾಡೋಣ" ಎಂದರು.

ಗೌರಿಮಾ ತಮ್ಮ ಆಶ್ರಮದ ಬಾಲಿಕೆಯರೊಡನೆ ಬಂದರು. ಶ್ರೀಮಾತೆಯನ್ನು ಪೂಜಿಸಿ ಪ್ರಸಾದ ಸ್ವೀಕರಿಸಿ ಹೊರಟುಹೋದರು.

ಪೂಜಾಗೃಹದಲ್ಲಿ ಪೂಜೆಯಾದ ಮೇಲೆ ವಿಲಾಸ್ ಮಹಾರಾಜರು ಬಂದು ಶ್ರೀಮಾತೆಗೆ ಮೆಲ್ಲಗೆ, "ಇಂದು ಶ್ರೀರಾಮಕೃಷ್ಣರು ನೈವೇದ್ಯ ಸ್ವೀಕರಿಸಿದರೋ ಇಲ್ಲವೋ ತಿಳಿಯದು. ನೈವೇದ್ಯದಮೇಲೆ ಒಂದು ಎಂಜಲ ಎಲೆ ಗಾಳಿಗೆ ಬಂದು ಬಿದ್ದಿತು. ಅದು ಏತಕ್ಕೋ ಗೊತ್ತಿಲ್ಲ. ಎಷ್ಟೋ ಜನ ಇಂದು ಮನೆಯಿಂದ ನೈವೇದ್ಯಕ್ಕೆ ತಂದಿದ್ದರು. ಅಂತು ಏನಾಗಿದೆಯೋ ಗೊತ್ತಿಲ್ಲ" ಎಂದರು. ನೈವೇದ್ಯವಾದಮೇಲೆ ಗಂಗಾಜಲ ಪ್ರೋಕ್ಷಿಸಿದೆಯೆ ಎಂದು ಶ್ರೀಮಾತೆ ಕೇಳಿದರು. "ಹೌದು" ಎಂದು ಹೇಳಿ ಅವರು ಹೊರಟುಹೋದರು. ಇದನ್ನು ಕೇಳಿ ನನ್ನ ಮನಸ್ಸಿಗೆ ಬಹಳ ವ್ಯಾಕುಲವಾಯಿತು.

ಶ್ರೀಮಾತೆಗೆ ಪೂಜೆ ಹಿಂದಿನಂತೆಯೇ ನಡೆದುಬಂತು. ಅರ್ಚಿಸಿದ ಬಿಲ್ವ ಮತ್ತು ಹೂವಿನ ರಾಸಿ ತೆಗೆದೊಡನೆ, ಸ್ವಲ್ಪ ಹೊತ್ತಿನಲ್ಲೇ ಮತ್ತೊಂದು ರಾಸಿ ಅವರ ಪಾದದಡಿ ಸಿದ್ಧವಾಗುತ್ತಿತ್ತು.

ಮಧ್ಯಾಹ್ನದ ಪೂಜೆ ಸಮಯ. ದೂರದೇಶದಿಂದ ಮೂರು ಜನ ಪುರುಷರು ಮತ್ತು ಸ್ತ್ರೀಯೊಬ್ಬಳು ಶ್ರೀಮಾತೆಗೆ ನಮಿಸಲು ಬಂದರು. ಅವರು ತುಂಬಾ ಬಡವರು. ಅವರ ಗಂಟು ಮೂಟೆಯೆಲ್ಲಾ ತಮ್ಮ ಹತ್ತಿರ ಇದ್ದ ಒಂದೊಂದು ಬಟ್ಟೆಮಾತ್ರ. ದಾರಿ ಖರ್ಚಿಗೆ ಭಿಕ್ಷೆ ಬೇಡಿ ಕಲ್ಕತ್ತೆಗೆ ಬಂದಿದ್ದರು. ಅವರ ಪೈಕಿ ಒಬ್ಬ ಗಂಡಸು ಶ್ರೀಮಾತೆಯೊಂದಿಗೆ ಗುಟ್ಟಾಗಿ ಮಾತನಾಡುತ್ತಿದ್ದ. ಅವರ ಸಂಭಾಷಣೆ ಕೊನೆಗಾಣುವಂತೆಯೇ

ಇರಲಿಲ್ಲ. ಮಧ್ಯಾಹ್ನದ ಪೂಜೆಸಮಯ ಆಯಿತು. ಶ್ರೀ ಮಾತೆ ಪೂಜೆಮಾಡಬೇಕಾಗಿತ್ತು. ಉದ್ಬೋಧನದಲ್ಲಿರುವವರಿಗೆ ಸಹನೆ ಮೀರಿತು. ಅವರಲ್ಲಿ ಒಬ್ಬರು ಬಂದು ಆತನಿಗೆ "ಹೆಚ್ಚು ಮಾತನಾಡುವುದಿದ್ದರೆ ಹಿರಿಯ ಸ್ವಾಮಿಗಳ ಹತ್ತಿರ ಮಾತನಾಡಿ" ಎಂದರು. ಶ್ರೀಮಾತೆ ದೃಢವಾಗಿ "ಹೊತ್ತಾದರೆ ಚಿಂತೆ ಇಲ್ಲ. ಅವರು ಏನು ಹೇಳುತ್ತಾರೊ ಅದನ್ನು ನಾನು ಕೇಳಬೇಕು" ಎಂದರು. ತುಂಬಾ ಸಮಾಧಾನದಿಂದ ಅದನ್ನು ಆಲಿಸಿದರು. ಪಿಸುಮಾತಿನಲ್ಲಿ ಅವನಿಗೆ ಏನನ್ನೋ ಬೋಧಿಸಿದರು. ಅನಂತರ ಆತನ ಹೆಂಡತಿಯನ್ನು ಕರೆದರು. ಅವರಿಗೆ ಏನೊ ಕನಸಿನಲ್ಲಿ ಅನುಭವವಾಗಿರಬೇಕೆಂದು ಊಹಿಸಿದೆವು. ಅನಂತರ ಅವರಿಗೆ ಕನಸಿನಲ್ಲಿ . ಉಪದೇಶವಾಗಿತ್ತೆಂದು ಕೇಳಿದೆವು. ಒಂದು 'ಗಂಟೆಯ ನಂತರ ಅವರು ಹೊರಟರು. ಶ್ರೀಮಾತೆ "ಅಯ್ಯೋ! ಅವರು ಕಡು ಬಡವರು. ತುಂಬಾ ಕಷ್ಟಪಟ್ಟುಕೊಂಡು ಇಲ್ಲಿಗೆ ಬಂದಿರುವರು" ಎಂದರು. ಮಧ್ಯಾಹ್ನ ಪೂಜೆಯಾದಮೇಲೆ ಊಟವಾಯಿತು. ಶ್ರೀಮಾತೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಬಯಸಿದರು. ನಾವು ಪಕ್ಕದ ಕೋಣೆಗೆ ಹೋದೆವು.

ಮಧ್ಯಾಹ್ನ ನಾಲ್ಕು ಗಂಟೆ ಆಗಿತ್ತು. ದೇವರ ಪೂಜೆ ಆದಮೇಲೆ ರಾಸಬಿಹಾರಿ ಮಹಾರಾಜರು ಬಂದು 'ಒಬ್ಬ ಆಂಗ್ಲ ಸ್ತ್ರೀ ನಿಮ್ಮ ದರ್ಶನಕ್ಕೆ ಬಂದಿರುವಳು. ಬಹಳ ಹೊತ್ತಿನಿಂದ ಕಾಯುತ್ತಿರುವಳು' ಎಂದರು. ಆಕೆಯನ್ನು ಕರೆತರುವಂತೆ ಹೇಳಿದರು. ಆಕೆ ನಮಸ್ಕರಿಸಿ ಆದಮೇಲೆ ಹಸ್ತಲಾಘವನ್ನು ಕೊಡುವಂತೆ ಅವರ ಕೈಯನ್ನು ಶ್ರೀಮಾತೆ ಹಿಡಿದುಕೊಂಡರು. ಒಬ್ಬರು ಕಾಲದೇಶಕ್ಕೆ ಸರಿಯಾಗಿ ನಡೆದುಕೊಳ್ಳಬೇಕೆಂಬ ಶ್ರೀರಾಮಕೃಷ್ಣರು ಹೇಳುತ್ತಿದ್ದ ಬುದ್ಧಿವಾದವನ್ನು ಅನುಷ್ಠಾನಕ್ಕೆ ತಂದರು. ಆಕೆಯ ಕೆನ್ನೆಗೆ ಕೈಮುಟ್ಟಿ ಮುತ್ತುಕೊಟ್ಟರು. ಆ ಸ್ತ್ರೀಗೆ ಬಂಗಾಳ ಭಾಷೆ ಗೊತ್ತಿತ್ತು. "ನನ್ನ ಬರವಿನಿಂದ ನಿಮಗೆ ತೊಂದರೆಯಾಗಿಲ್ಲವೆಂದು ಭಾವಿಸುತ್ತೇನೆ. ನಿಮ್ಮ ದರ್ಶನಕ್ಕೆ ಕೆಳಗೆ ಬಹಳ ಹೊತ್ತು ಕಾದಿದ್ದೆ. ನಾನು ತುಂಬಾ ಸಂಕಟದಲ್ಲಿರುವೆ. ನನ್ನ ಒಬ್ಬಳೇ ಮಗಳು ತುಂಬಾ ಒಳ್ಳೆಯ ಹುಡುಗಿ—ಖಾಯಿಲೆಯಲ್ಲಿರುವಳು. ಆಕೆಯ ಗುಣವಾಗುವುದಕ್ಕೆ ನಿಮ್ಮ ಆಶೀರ್ವಾದವನ್ನು ಬೇಡುವುದಕ್ಕೆ ಬಂದೆ. ಅವಳು ಗುಣವಾಗುವಂತೆ ಹರಸಿ. ಅವಳು ಅಷ್ಟು ಒಳ್ಳೆಯ ಹುಡುಗಿ. ಈಗಿನ

ಕಾಲದ ಹೆಂಗಸರಲ್ಲಿ ಹಲವರು ದುಷ್ಟಸ್ವಭಾವದವರು. ನನ್ನ ಮಗು ಹಾಗಲ್ಲ. ಬಹಳ ಒಳ್ಳೆಯ ಹುಡುಗಿ. ಅಂತಹ ಸ್ವಭಾವದವರು ಅಪರೂಪ. ದಯವಿಟ್ಟು ನೀವು ಕೃಪೆಮಾಡಬೇಕು" ಎಂದು ಬೇಡಿಕೊಂಡಳು.

ಶ್ರೀಮಾತೆ :— ನಾನು ನಿನ್ನ ಮಗುವಿಗಾಗಿ ಪ್ರಾರ್ಥಿಸುವೆನು. ಅವಳು ಮೇಲಾಗುವಳು.

ಆಂಗ್ಲ ಸ್ತ್ರೀ ಇವರ ಸಮಾಧಾನದಿಂದ ಹರುಷಚಿತ್ತಳಾಗಿ, "ನೀವು ಅವಳನ್ನು ಹುಷಾರಾಗುವಳು ಎಂದರೆ ಹುಷಾರಾಗಲೇಬೇಕು. ಅದರಲ್ಲಿ ಸಂಶಯವೇ ಇಲ್ಲ" ಎಂದಳು. ಒತ್ತಿ ಒತ್ತಿ ಇದನ್ನು ಮೂರಾವರ್ತಿ ಆಕೆ ಹೇಳಿದಳು. ಶ್ರೀಮಾತೆ ಗುಲಾಬ್‌ಮಾಗೆ, "ಅವಳಿಗೆ ದೇವರ ಹತ್ತಿರದಿಂದ ಒಂದು ಹೂವನ್ನು ತೆಗೆದುಕೊಂಡು ಬಾ. ಕಮಲದ ಹೂವನ್ನು ತಾ" ಎಂದರು. ಗುಲಾಬ್‌ಮಾ ಕಮಲ ಮತ್ತು ಒಂದು ಬಿಲ್ವಪತ್ರೆಯನ್ನು ತಂದು ಶ್ರೀಮಾತೆಗೆ ಕೊಟ್ಟರು. ಶ್ರೀಮಾತೆ ಆ ಹೂವನ್ನು ತಮ್ಮ ಕೈಲಿ ಇಟ್ಟುಕೊಂಡು, ಶ್ರೀರಾಮಕೃಷ್ಣರ ಭಾವಚಿತ್ರವನ್ನು ನೋಡಿ, ಸ್ವಲ್ಪ ಹೊತ್ತು ಪ್ರಾರ್ಥಿಸಿ, "ಈ ಹೂವಿನಿಂದ ಮಗುವಿನ ತಲೆಯನ್ನು ಮುಟ್ಟ" ಎಂದು ಆಕೆಗೆ ಕೊಟ್ಟರು. ಆಕೆ ಕೈಮುಗಿದು ಅದನ್ನು ಸ್ವೀಕರಿಸಿ ನಮಿಸಿ ಹೊರಟಳು. ಹೋಗುವಾಗ "ಆಮೇಲೆ ಹೂವನ್ನು ಏನುಮಾಡಲಿ?" ಎಂದು ಕೇಳಿದಳು.

ಗುಲಾಬ್‌ಮಾ :— ಅದು ಒಣಗಿಹೋದಮೇಲೆ ಗಂಗಾನದಿಗೆ ಎಸೆ.

ಸ್ತ್ರೀ :— ಇಲ್ಲ. ಇದು ದೇವರಿಗೆ ಸೇರಿದ್ದು. ಅದನ್ನು ಎಸೆಯುವುದಿಲ್ಲ. ಹೊಸ ಬಟ್ಟೆಯಲ್ಲಿ ಚೀಲಮಾಡಿ ಅದರಲ್ಲಿಡುವೆನು. ಪ್ರತಿ ದಿನ ನನ್ನ ಮಗಳ ತಲೆ ಮತ್ತು ದೇಹವನ್ನು ಇದರಿಂದ ಮುಟ್ಟುವೆನು.

ಶ್ರೀಮಾತೆ :— ಆಗಲಿ. ಹಾಗೆಯೇ ಮಾಡು.

ಸ್ತ್ರೀ :— ದೇವರೆ ಪರಮ ಸತ್ಯ. ಅವನಿರುವನು. ನಾನು ನಿಮಗೆ ಒಂದು ಮಾತನ್ನು ಹೇಳಬೇಕೆಂದಿರುವೆನು. ಕೆಲವು ದಿನದ ಹಿಂದೆ ನಮ್ಮ ಮನೆಯಲ್ಲಿ ಒಂದು ಮಗುವಿಗೆ ಜ್ವರ ಬಂದಿತ್ತು. ನಾನು ಶ್ರದ್ಧೆಯಿಂದ, "ದೇವರೆ! ನೀನಿರುವೆ ಎಂಬುದು ನನಗೆ ಗೊತ್ತು. ಆದರೆ ಅದನ್ನು ದೃಷ್ಟಾಂತವಾಗಿ ತೋರು" ಎಂದು ಬೇಡಿದೆ. ನಾನು ಅಳುತ್ತ ನನ್ನ ಕರವಸ್ತ್ರವನ್ನು ಮೇಜಿನ ಮೇಲಿಟ್ಟೆ. ಸ್ವಲ್ಪ ಹೊತ್ತಿನ ಮೇಲೆ ಅದರಲ್ಲಿ ಮೂರು ಕಡ್ಡಿಗಳನ್ನು ಕಂಡು ಆಶ್ಚರ್ಯವಾಯಿತು. ಆ ಮಗುವನ್ನು

ಈ ಕಡ್ಡಿಗಳಿಂದ ನೂರು ಬಾರಿ ಮುಟ್ಟಿದೆ. ಆ ಮಗು ಗುಣವಾಯಿತು.

ಇದನ್ನು ಹೇಳುವಾಗ ಕಂಬನಿ ಅವಳ ಕಣ್ಣಿನಿಂದ ಬೀಳುತ್ತಿತ್ತು. ಹೋಗುವಾಗ, "ನಿಮ್ಮ ಪ್ರಶಸ್ತಕಾಲವನ್ನು ನಾನು ವ್ಯರ್ಥಮಾಡಿದೆ. ದಯವಿಟ್ಟು ಕ್ಷಮಿಸಿ" ಎಂದು ಬೇಡಿಕೊಂಡಳು. ಶ್ರೀಮಾತೆ, "ಇಲ್ಲ. ನಿನ್ನೊಂದಿಗೆ ಮಾತನಾಡಲು ಸಂತೋಷವಾಯಿತು. ಪುನಃ ಮಂಗಳ ವಾರ ಬಾ" ಎಂದರು. ಆಕೆ ನಮಸ್ಕರಿಸಿ ಹೊರಟಳು.

ಕೆಲವು ದಿನಗಳ ಮೇಲೆ ನಾನು ಶ್ರೀಮಾತೆ ದರ್ಶನಕ್ಕೆ ಹೋದಾಗ ಆಕೆ ಕಳೆದ ಮಂಗಳವಾರ ಬಂದಿದ್ದಳೆಂದು ಕೇಳಿದೆ. ಆಕೆಗೆ ಉಪದೇಶ ಕೊಟ್ಟರಂತೆ. ಅವಳ ಮಗಳೂ ಗುಣವಾಗಿದ್ದಳಂತೆ.

೨೪ನೇ ಮಾರ್ಚಿ, ೧೯೨೦.

ಶ್ರೀಮಾತೆ ಜಯರಾಮವಟಿಯಲ್ಲಿ ತಮ್ಮ ಹಳೇ ಮನೆಯಲ್ಲಿದ್ದರು. ಒಂದು ವರುಷವಾದಮೇಲೆ ವಸಂತಕಾಲದಲ್ಲಿ ಅವರು ಕಲ್ಕತ್ತೆಗೆ ಬಂದರು. ಬಹಳ ದಿನ ಮಲೇರಿಯಾದಿಂದ ನರಳಿ ಅತಿ ನಿತ್ರಾಣರಾಗಿದ್ದರು. ನಾನು ಅವರಿಗೆ ನಮಿಸಿದೆ. ಅವರು ತಮ್ಮ ಕೈಯನ್ನು ನನ್ನ ತಲೆಯ ಮೇಲಿಟ್ಟು ಆಶೀರ್ವದಿಸಿದರು. ನನ್ನನ್ನು ವಿಚಾರಿಸಿದರು. ಅವರ ಖರ್ಚಿಗೆ ಸ್ವಲ್ಪ ಹಣವನ್ನು ಕೊಟ್ಟೆ. ಅವರು ಸ್ವೀಕರಿಸಿದರು. ಅವರ ನಿತ್ರಾಣ ದೇಹ ವನ್ನು ನೋಡಿದಾಗ ನನಗೆ ಮಾತನಾಡಲಾಗಲಿಲ್ಲ. ಅವರನ್ನೇ ನೋಡುತ್ತಾ 'ಎಷ್ಟು ನಿತ್ರಾಣರಾಗಿ ಕಳೆಗುಂದಿರುವರು ?' ಎಂದು ಆಲೋಚಿಸುತ್ತಿದ್ದೆ. ನನ್ನ ಸಹೋದರಿಯ ಪರಿಚಾರಕಳು ಅವರ ಕಾಲನ್ನು ಮುಟ್ಟಿ ನಮಸ್ಕರಿ ಸುವುದರಲ್ಲಿದ್ದಳು. ಶ್ರೀಮಾತೆ, 'ದೂರದಿಂದಲೇ ನಮಸ್ಕರಿಸು' ಎಂದರು. ಅವಳು ಬಾಗಿಲಿನ ಹತ್ತಿರದಿಂದಲೇ ನಮಸ್ಕರಿಸಿ ಹೊರಟು ಹೋದಳು.

ಶ್ರೀಮಾತೆ ತುಂಬಾ ದುರ್ಬಲರಾಗಿದ್ದರು. ಒಂದು ಮಾತನ್ನು ಆಡುವುದಕ್ಕೂ ತ್ರಾಣವಿರಲಿಲ್ಲ. ನಾನು ನೆಲದಮೇಲೆ ಕುಳಿತಿದ್ದೆ. ಆಗ ರಾಸಬಿಹಾರಿ ಮಹಾರಾಜರು ಬಂದು ಹೆಚ್ಚು ಹೊತ್ತು ಶ್ರೀಮಾತೆಯ ಹತ್ತಿರ ಮಾತನಾಡದಂತೆ ಹೇಳಿದರು. ಆದರೆ ಶ್ರೀಮಾತೆ ಮಧ್ಯೆ ಮಧ್ಯೆ ಹಲವು ವಿಷಯಗಳನ್ನು ಕೇಳುತ್ತಿದ್ದರು. ನಾನು ಸಂಕ್ಷೇಪವಾಗಿ ಉತ್ತರ ಕೊಡುತ್ತಿದ್ದೆ. ರಾಧೆ ತನ್ನ ಮಗುವಿನೊಂದಿಗೆ ಬಂದಳು. ಆ ಮಗು ವನ್ನು ಎತ್ತಿಕೊಂಡು ಬಹುಮಾನವಾಗಿ ಹಣಕೊಟ್ಟೆ. ಅದನ್ನು ತೆಗೆದು ಕೊಳ್ಳದಂತೆ ರಾಧೆ ಮಗುವಿಗೆ ಹೇಳಿದಳು. ಶ್ರೀಮಾತೆ 'ರಾಧೆ, ಏತಕ್ಕೆ

ಹಾಗೆ ಹೇಳುವೆ? ಅವಳು ನಿನ್ನ ಸಹೋದರಿ. ಅಷ್ಟು ವಿಶ್ವಾಸದಿಂದ ಅವಳು ಕೊಟ್ಟರೆ ಏತಕ್ಕೆ ಸ್ವೀಕರಿಸಬಾರದು?' ಎಂದರು. ಶ್ರೀಮಾತೆ ಯವರೇ ಹಣವನ್ನು ಸ್ವೀಕರಿಸಿದರು. ಆ ಮಗು, ತನ್ನ ತಾಯಿ ಅಜ್ಜಿಯರ ನಿರ್ಲಕ್ಷ್ಯದಿಂದ ನರಳುತ್ತಿದೆ ಎಂದು ವ್ಯಥೆಪಟ್ಟರು. ರಾಧೆ ಕಟುವಾಗಿ 'ಹಾಗಲ್ಲ' ಎಂದಳು. 'ಅವಳೊಂದಿಗೆ ಮಾತನಾಡಿ ಪ್ರಯೋಜನವಿಲ್ಲ' ಎಂದು ಶ್ರೀಮಾತೆ ಸುಮ್ಮನಾದರು. ಸ್ವಲ್ಪ ಹೊತ್ತಾದಮೇಲೆ ಸರಳೆ ಮತ್ತು ಇನ್ನು ಕೆಲವರು ಗೃಹಿಣೀಭಕ್ತರು ಶ್ರೀಮಾತೆಯ ದರ್ಶನಕ್ಕೆ ಬಂದರು. ಅವರೊಂದಿಗೆ ಮಾತನಾಡಲುಪಕ್ರಮಿಸಿದರು.

೩೦ನೇ ಮಾರ್ಚಿ, ೧೯೨೦.

ಐದಾರು ದಿನಗಳಾದ ಮೇಲೆ ಶ್ರೀಮಾತೆಯ ದರ್ಶನಕ್ಕೆ ಹೊರಟೆ. ಅವರಿಗೆ ಕಳೆದ ಎರಡು ಮೂರು ದಿನಗಳಿಂದ ಜ್ವರ ಬರುತ್ತಿರಲಿಲ್ಲ. ಆದರೆ ರಾಧೆ ವಿಷಯ, ಅವಳು ತನ್ನ ಮಗುವನ್ನು ನೋಡಿಕೊಳ್ಳುತ್ತಿದ್ದರೀತಿ, ಇವುಗಳಿಗೆ ಮರುಗುತ್ತಿದ್ದರು. ಇಂದು ರಾಧೆಯ ಕೈಗೆ ಗಾಯವಾಗಿತ್ತು. ಶ್ರೀಮಾತೆಯನ್ನು ಪರೀಕ್ಷಿಸಲು ಬಂದ ಡಾಕ್ಟರ್ ಕಂಜಿಲಾಲರನ್ನು ನೋಡಲು ಶ್ರೀಮಾತೆಯವರಿದ್ದ ಕೋಣೆಗೆ ಹರಳೆಣ್ಣೆಯಲ್ಲಿ ಅದ್ದಿದ್ದ ಒಂದು ಕೊಳೆ ಬಟ್ಟೆಯನ್ನು ಕೈಗೆ ಕಟ್ಟಿಕೊಂಡು ರಾಧೆ ಬಂದಳು.

ರಾಧೆಯ ಕೈಗೆ ಬ್ಯಾಂಡೇಜನ್ನು ಕಟ್ಟ ಆದ ಮೇಲೆ ಶ್ರೀಮಾತೆ ಹಾಸಿಗೆಯ ಮೇಲೆ ಮಲಗಿದರು. ತಮ್ಮ ಕಾಲನ್ನು ಒತ್ತಲು ಹೇಳಿದರು. ಆಗ, 'ತೊಂದರೆಯಾಗದೇ ಇದ್ದರೆ ನನ್ನ ಮನಸ್ಸಿನ ಕೆಲವು ಸಂದೇಹ ಗಳನ್ನು ಕೇಳಲೆ?' ಎಂದೆ.

ಶ್ರೀಮಾತೆ :– 'ತೊಂದರೆ ಏನೂ ಇಲ್ಲ. ಏನು ಕೇಳಬೇಕೋ ಅದನ್ನು ಕೇಳು' ಎಂದರು. ನನಗೆ ಆದ ಒಂದು ಅನುಭವವನ್ನು ಹೇಳಿದೆ. 'ಮಗಳೆ ಪ್ರತಿದಿನ ಅಂತಹ ಆನಂದ ಸಾಧ್ಯವೆ? ಎಲ್ಲಾ ಸತ್ಯ. ಯಾವುದೂ ಅಸತ್ಯವಲ್ಲ. ಶ್ರೀ ಗುರುದೇವರೇ ಸರ್ವಸ್ವವೂ. ಅವರೇ ಪ್ರಕೃತಿ, ಅವರೇ ಪುರುಷ. ಅವರ ಮೂಲಕ ನೀನು ಎಲ್ಲವನ್ನು ಪಡೆದೆ' ಎಂದರು.

ಭಕ್ತೆ :– ತಾಯಿ, ನಾನೊಂದು ದಿನ ಏಕಾಗ್ರವಾಗಿ ಜಪಮಾಡು ವಾಗ ಬಹಳ ಹೊತ್ತಾಗಿ, ಕಾಲ ಅರಿವಿಲ್ಲದೆಯೇ ಕಳೆದು ಹೋಯಿತು. ಮನೆ ಕೆಲಸಕ್ಕೆ ಹೊತ್ತಾಗಿದ್ದುದರಿಂದ ನೀವು ನನಗೆ ಹೇಳಿದ ಬೇರೆ ಸಾಧನೆ

ಯನ್ನು ಮಾಡಲು ಸಾಧ್ಯವಾಗಲಿಲ್ಲ. ಹಾಗೆ ಮಾಡಿದ್ದು ತಪ್ಪಾಯಿತೆ?

ಶ್ರೀಮಾತೆ:– ಇಲ್ಲ, ಅದರಲ್ಲಿ ತಪ್ಪೇನೂ ಇಲ್ಲ.

ಭಕ್ತೆ:– ಧ್ಯಾನ ಮಾಡುವಾಗ ಅರ್ಧರಾತ್ರಿಯ ಸಮಯದಲ್ಲಿ ಅನಾಹತ ಧ್ವನಿ ಕೇಳುವುದಂತೆ. ಸಾಧಾರಣವಾಗಿ ಅದು ದೇಹದ ಬಲಗಡೆಯಿಂದ ಬರುವುದಂತೆ. ಕೆಲವು ವೇಳೆ ಮನಸ್ಸು ಕೆಳಮುಖವಾಗಿರುವಾಗ ಎಡಗಡೆಯಿಂದ ಬರುವುದಂತೆ.

ಶ್ರೀಮಾತೆ:–( ಸ್ವಲ್ಪ ಹೊತ್ತು ಯೋಚಿಸಿ ) ಧ್ವನಿ ಬಲಗಡೆಯಿಂದ ಬರುವುದು ನಿಜ. ದೇಹಬುದ್ಧಿ ಇರುವಾಗ ಎಡಗಡೆಯಿಂದ ಬರುವುದು. ಕುಂಡಲಿನಿ ಜಾಗ್ರತವಾದಾಗ ಇವೆಲ್ಲಾ ಆಗುವುವು. ಬಲಗಡೆಯಿಂದ ಬರುವ ಧ್ವನಿ ನಿಜ. ಕ್ರಮೇಣ ಒಬ್ಬನ ಮನಸ್ಸೇ ಗುರುವಾಗುವುದು. ಏಕಾಗ್ರತೆಯಿಂದ ಕೆಲವು ಕ್ಷಣ ಪ್ರಾರ್ಥನೆ, ಧ್ಯಾನಮಾಡುವುದು, ಏಕಾಗ್ರತೆ ಇಲ್ಲದೆ ಬಹಳ ಹೊತ್ತು ಮಾಡುವುದಕ್ಕಿಂತ ಮೇಲು.

‘ ದೇಹಬುದ್ಧಿಯನ್ನು ’ ಕುರಿತು ಅವರೊಂದಿಗೆ ಮಾತನಾಡಲು ಅವಕಾಶವಾಗಲಿಲ್ಲ. ಶ್ರೀಮಾತೆಯವರು ಆರೋಗ್ಯವಾಗಿರಲಿಲ್ಲ.

ನಾನು ಹೊರಡುವುದರಲ್ಲಿದ್ದೆ. ಅವರು ತಲೆದಿಂಬಿನ ಮೇಲಿನಿಂದ ತಲೆ ಎತ್ತಿ “ ಮಗು, ನಾನು ತಲೆ ಎತ್ತಿದೆ ” ಎಂದರು. ಮಲಗಿರುವಾಗ ನಮಸ್ಕಾರ ಸ್ವೀಕರಿಸುವುದು ರೂಢಿಯಲ್ಲವೆಂದು ಅವರು ಹಾಗೆ ಮಾಡಿದರು. ನಾನು ಅವರಿಗೆ ನಮಸ್ಕರಿಸಿದಾಗ “ ಪುನಃ ಬಾ, ಸಂಜೆ ಸ್ವಲ್ಪ ಹೊತ್ತಿಗೆ ಮುಂಚೆ ಬಾ. ನಿನ್ನ ಮನೆ ಕೆಲಸ ಸ್ವಲ್ಪ ಹೊತ್ತಿಗೆ ಮುಂಚೆ ಮುಗಿಸಿಕೊಂಡು ಬರುವುದಕ್ಕೆ ಆಗುವುದಿಲ್ಲವೇ? ಎಂದರು. ನನ್ನ ರಕ್ಷಣೆಗೆ ಶ್ರೀ ದುರ್ಗಾನಾಮವನ್ನು ಉಚ್ಚರಿಸುತ್ತ ಬೀಳ್ಕೊಟ್ಟರು. ನಾನು ಅಂಗಳಕ್ಕೆ ಬರುವಾಗಲೂ ಅವರು ಬಹಳ ದಯೆಯಿಂದ ದುರ್ಗಾನಾಮವನ್ನು ಉಚ್ಚರಿಸುತ್ತಿರುವುದು ಕೇಳಿಬರುತ್ತಿತ್ತು. ಎಂತಹ ಅಪಾರ ಪ್ರೇಮ! ಅವರ ಸಮೀಪದಲ್ಲಿರುವತನಕ ಪ್ರಪಂಚದ ಕಷ್ಟನಷ್ಟಗಳ ಅರಿವೇ ಇರುವುದಿಲ್ಲ. * * * *

ಶ್ರೀಮಾತೆಯವರ ಖಾಯಿಲೆ ಗುಣಮುಖವಾಗುವ ಚಿಹ್ನೆ ಕಾಣಲಿಲ್ಲ. ದೇಹ ಕ್ರಮೇಣ ದುರ್ಬಲವಾಯಿತು. ಒಂದು ದಿನ ಮಧ್ಯಾಹ್ನ ಅವರ ದರ್ಶನಕ್ಕೆ ಹೋದೆ. ಏಳುವುದಕ್ಕೆ ಸಹಾಯಮಾಡೆಂದರು. “ ಪ್ರತಿ ದಿನ ಜ್ವರ ಬರುತ್ತಿದೆ. ದೇಹ ತುಂಬಾ ದುರ್ಬಲವಾಗುತ್ತಿದೆ ” ಎಂದರು.

೧೪ ನೇ ಮಾರ್ಚಿ, ೧೯೨೦.

ಸಂಜೆ, ದೇವರ ಮನೆಯಲ್ಲಿ ಮಂಗಳಾರತಿ ಆಯಿತು. ಶ್ರೀಮಾತೆಗೆ ಜ್ವರವಿತ್ತು. ರಾಸಬಿಹಾರಿ ಮಹಾರಾಜರು ಅವರ ಕೈಯನ್ನೂ, ಬ್ರಹ್ಮ ಚಾರಿಯೊಬ್ಬನು ಅವರ ಕಾಲನ್ನೂ ಉಜ್ಜುತ್ತಿದ್ದರು. ಜ್ವರ ಎಷ್ಟು ಇದೆ ಎಂದು ನೋಡುತ್ತಿದ್ದರು. ಶ್ರೀಮಾತೆ ಕಣ್ಣುಮುಚ್ಚಿಕೊಂಡಿದ್ದರು. ಒಂದು ಸಾರಿ "ಯಾರಲ್ಲಿ" ಎಂದು ಕೇಳಿದರು. ರಾಸ್‌ಬಿಹಾರಿ ಮಹಾ ರಾಜರು ಮೆಲು ಧ್ವನಿಯಲ್ಲಿ ಹೇಳಿದರು. ಜ್ವರ ೧೦೦·೧° ಇತ್ತು.

ಹೊಸ ವರ್ಷವಾದುದರಿಂದ ಸೋದರಿ ಸುಧೀರಾ ನಿವೇದಿತಾ ಶಾಲೆಯ ಬಾಲಕಿಯರಿಗೆ ಔತಣವನ್ನೇರ್ಪಡಿಸಿದ್ದಳು. ಶ್ರೀಮಾತೆಯನ್ನು ನೋಡಿಕೊಳ್ಳುತ್ತಿದ್ದ ಸರಳೆ ಅಲ್ಲಿಗೆ ಹೋಗಿದ್ದಳು. ಶ್ರೀಮಾತೆ, ಬ್ರಹ್ಮ ಚಾರಿ ವರದನಿಗೆ ಅಲ್ಲಿಂದ ಸರಳೆಯನ್ನು ಕರೆದುಕೊಂಡು ಬಾ ಎಂದರು. ರಾಧೆ ಮಗುವಿಗೆ ಆಹಾರ ಕೊಡಬೇಕಾಗಿತ್ತು. ಆದಕ್ಕೆ ಆಹಾರ ಕೊಡುವ ಸಮಯವಾಗಿರಲಿಲ್ಲ. ಆದರೆ ಅದು ಅಳುತ್ತಿದ್ದುದರಿಂದ ರಾಧಾ ಅದಕ್ಕೆ ಆಹಾರವನ್ನು ಕೊಡಬೇಕೆಂದು ಇದ್ದಳು. ಶ್ರೀಮಾತೆ ಬೇಡವೆಂದು ಎಷ್ಟೋ ಹೇಳಿದರು. ತಕ್ಷಣ ಇದರಿಂದ ರಾಧೆಗೆ ಕೋಪಬಂದು ನಿಂದಿ ಸಲು ಪ್ರಾರಂಭಿಸಿದಳು. "ನೀನು ಸಾಯಿ, ನಾನು ನಿನ್ನ ಚಿತೆ ಹತ್ತಿಸು ತ್ತೇನೆ" ಎಂದಳು. ಇದನ್ನು ಕೇಳಿ ನಮಗೆ ತುಂಬಾ ವ್ಯಥೆಯಾಯಿತು. ಶ್ರೀಮಾತೆಯವರ ಆರೋಗ್ಯ ಉಲ್ಬಣಾವಸ್ಥೆಯಲ್ಲಿತ್ತು. ಅಂತಹ ಸಮ ಯದಲ್ಲಿ ರಾಧ ಹಾಗೆ ಬೈಯುತ್ತಿದ್ದಳು! ಇನ್ನೂ ಬೈಗಳ ಮಳೆಯನ್ನು ಕರೆ ಯುತ್ತಾ ಹೋದಳು. ಅವಳು ಈ ರೀತಿ ಅನೇಕ ವೇಳೆ ಇರುತ್ತಿದ್ದಳು. ಎಲ್ಲಾ ಸಮಯದಲ್ಲಿಯೂ ಅಪಾರ ಕರುಣೆಯಿಂದ ಶ್ರೀಮಾತೆ ಎಲ್ಲವನ್ನೂ ಸಹಿಸುತ್ತಿದ್ದರು. ಆದರೆ ಈ ಸಲ ಬಹಳ ದಿನದ ಖಾಯಿಲೆಯ ಪರಿಣಾಮ ವಾಗಿ ಸ್ವಲ್ಪ ಕೋಪದಿಂದ, "ಇದರ ಪ್ರತಿಫಲ ನಿನಗೆ ಅನಂತರ ಗೊತ್ತಾಗುವುದು. ನನ್ನ ಕಾಲವಾದಮೇಲೆ ನೀನು ಯಾವ ಸ್ಥಿತಿಯಲ್ಲಿ ರುವೆ ಎಂಬುದು ನಿನಗೇ ಗೊತ್ತಾಗುವುದು. ಬರಲಿನಿಂದ ಎಷ್ಟು ಪೆಟ್ಟು ನಿನಗೆ ಕಾದಿದೆಯೋ ನನಗೆ ಗೊತ್ತಿಲ್ಲ" ಎಂದರು.

ಇದನ್ನು ಕೇಳಿ ರಾಧೆಗೆ ಮತ್ತೂ ಕೋಪವಾಯಿತು. ಸರಳೆ ಬಂದು ಮಗುವಿಗೆ ಆಹಾರ ಕೊಟ್ಟಳು. ಅಂದಿನ ಅನುಭವ ಮನಸ್ಸಿಗೆ ತುಂಬಾ ವ್ಯಥೆ ಯುಂಟುಮಾಡಿತು. ಶ್ರೀಮಾತೆ ತಮ್ಮ ಕಾಲನ್ನು ಒತ್ತುವಂತೆಹೇಳಿದರು.

ಆಗ ರಾಸ್‌ಬಿಹಾರಿ ಮಹಾರಾಜರು ಕೋಣೆಗೆ ಪ್ರವೇಶಿಸಿ ಸೊಳ್ಳೆ ಪರದೆ ಕಟ್ಟಿದರು. ನಾನು ಶ್ರೀಮಾತೆಗೆ ನಮಸ್ಕರಿಸಿ ಬೀಳ್ಕೊಟ್ಟೆ. ಅವರು 'ಬಾ' ಎಂದು ಬೀಳ್ಕೊಟ್ಟರು. ಅವರಿಂದ ಕೇಳಿದ ಕೊನೆಯ ಮಾತಿದು, ಕೊನೆಯ ಆಣತಿ ಇದು.

ನಾನು ಆವತ್ತು ಕಾಳಿಘಾಟಿಗೆ ಹೋಗಬೇಕಾಗಿತ್ತು. ಇದಾದ ಮೇಲೆ ಹಲವು ದಿನ ಅವರ ದರ್ಶನಕ್ಕೆ ಅವಕಾಶವೇ ಸಿಕ್ಕಲಿಲ್ಲ. ಮನೆಯಲ್ಲಿ ಹಲವರು ಖಾಯಿಲೆ ಇದ್ದರು, ಇನ್ನೂ ಹಲವಾರು ಅನಿವಾರ್ಯಗಳ ದೆಸೆಯಿಂದ ಬರಲಾಗಲಿಲ್ಲ. ಅವರ ದೇಹಸ್ಥಿತಿಯ ವಿಷಯವಾಗಿ ಪ್ರತಿದಿನ ನನಗೆ ಸುದ್ದಿ ಬರುತ್ತಿತ್ತು. ಕ್ರಮೇಣ ಅವರು ಕುಗ್ಗಿ ಹೋಗುತ್ತಿದ್ದರು. ಸಮಯ ಸಿಕ್ಕಿದೊಡನೆಯೇ ಅವರ ದರ್ಶನಕ್ಕೆ ಹೊರಟೆ. ಅವರನ್ನು ನೋಡಿದಾಗ ಬಹಳ ಬೇಗ ನಮ್ಮ ಅಮೂಲ್ಯ ಆಸ್ತಿ ಮಾಯವಾಗಬಹುದೆಂಬ ಅಂಜಿಕೆ ಆಯಿತು. ಆದರೂ ನಿರಾಸೆಯಲ್ಲಿ ಆಸೆಯನ್ನು ನೆಚ್ಚಿದೆ.

---

## ಎರಡನೆಯ ಭಾಗ

ಜಯರಾಮವಟಿ, ೧೯೦೯ ನೇ ಇಸವಿ.

"ಶ್ರೀಮಾತೆಯವರಿಂದ ನಿನಗೆ ಕರೆ ಬಂದಿದೆ" ಎಂದು ವರದಾನಾಮ ಹೇಳಿದರು.

ಒಳಗಣ ಕೋಣೆಯೊಳಕ್ಕೆ ನಾನು ಪ್ರವೇಶಿಸಿದೆ. ಕೋಣೆಯ ಬಾಗಿಲಲ್ಲಿ ಶ್ರೀಮಾತೆ ನನಗಾಗಿ ಕಾಯುತ್ತಾ ನಿಂತಿದ್ದರು. ನಾನು ನಮಸ್ಕರಿಸಿದ ನಂತರ ಶ್ರೀಮಾತೆ 'ನೀನು ಎಲ್ಲಿಂದ ಬಂದೆ?' ಎಂದು ಕೇಳಿದರು. ನನ್ನ ಊರು ಇರುವ ಜಿಲ್ಲೆಯ ಹೆಸರನ್ನು ಹೇಳಿದೆ.

ಶ್ರೀಮಾತೆ:—ಶ್ರೀರಾಮಕೃಷ್ಣರ ಉಪದೇಶವನ್ನು ನೀನು ಓದುತ್ತಿರಬಹುದಲ್ಲವೆ?

ನಾನು ಮೌನವಾಗಿದ್ದೆ. ಎಷ್ಟೋದಿನದಿಂದಲೂ ಬಾಂಧವ್ಯ ಇರುವಂತೆ ನನ್ನೊಡನೆ ಮಾತಾಡಿದರು. ಈಗಲೂ ಅವರ ಕರುಣಾಪೂರಿತ ಮುಖದಾವರೆ ಕಣ್ಣಿಗೆ ಕಟ್ಟಿದಂತಿದೆ.

ಶ್ರೀಮಾತೆ:— ನೀವು ಕಾಯಸ್ಥರೇ ?

ಶಿಷ್ಯ:— ಹೌದು.

ಶ್ರೀಮಾತೆ:— ನಿನಗೆಷ್ಟು ಮಂದಿ ಸಹೋದರರು ?

ಶಿಷ್ಯ :– ನಾಲ್ಕು ಮಂದಿ.

ಶ್ರೀಮಾತೆ :– ಕುಳಿತುಕೊ. ಸ್ವಲ್ಪ ಉಪಹಾರ ತೆಗೆದುಕೊಳ್ಳುವೆಯಂತೆ.

ಹೀಗೆ ಹೇಳಿ ಶ್ರೀಮಾತೆ ಒಂದು ಸಣ್ಣ ಜಮಖಾನವನ್ನು ವರಾಂಡದಲ್ಲಿ ಹಾಸಿ ನನಗೆ ಹಿಂದಿನ ರಾತ್ರಿ ನೈವೇದ್ಯಮಾಡಿದ ಸ್ವಲ್ಪ ಪೂರಿ ಮತ್ತು ಮಿಠಾಯಿ ಕೊಟ್ಟರು. ನಾನು ಹಿಂದಿನ ದಿನ ಹರಿಪಾಲ್ ನಿಲ್ದಾಣದಲ್ಲಿ ಸಿಕ್ಕಿದ ತರುಣನೊಬ್ಬನ ಮನೆಯಲ್ಲಿ (ಜಯರಾಮವಟಿಯ ಉತ್ತರಕ್ಕಿರುವ ದೇಶ್ರ ಎಂಬ ಹಳ್ಳಿಯಲ್ಲಿ) ರಾತ್ರಿಯನ್ನು ಕಳೆದು ತಾರಕೇಶ್ವರದಿಂದಲೂ ಅಲ್ಲಿಗೆ ನಡೆದು ಬಂದಿದ್ದೆ. ಶ್ರೀಮಾತೆ ಎಲ್ಲವನ್ನೂ ಕೇಳಿ ನಾನು ತಿಂಡಿ ಮುಗಿಸಿದ ನಂತರ 'ಈಗ ನೀನು ಸ್ನಾನಮಾಡಬೇಡ. ತುಂಬಾದೂರ ನಡೆದು ಬಂದಿರುವೆ' ಎಂದರು. ನಂತರ ಕೊಂಚ ಎಲೆ ಅಡಿಕೆ ಅಗಿಯಲು ಕೊಟ್ಟರು.

ಮಧ್ಯಾಹ್ನದ ಪೂಜಾವೇಳೆಗೆ ಮತ್ತೆ ಶ್ರೀಮಾತೆ ನನಗೆ ಹೇಳಿಕಳುಹಿದರು. ನೈವೇದ್ಯವಾದಮೇಲೆ ಅವರ ಕೋಣೆಯ ಕೈಸಾಲೆಯಲ್ಲಿ ಎಲೆ ಹಾಕಿ ತಾವೇ ನನಗೆ ಮೊದಲು ಬಡಿಸಿದರು. 'ಚೆನ್ನಾಗಿ ಊಟಮಾಡು. ದಾಕ್ಷಿಣ್ಯಬೇಡ' ಎಂದು ಹೇಳಿ ಊಟವಾದಮೇಲೆ ಎಲೆ ಅಡಿಕೆ ಕೊಟ್ಟರು.

ಮಧ್ಯಾಹ್ನ ನಾಲ್ಕು ಗಂಟೆಗೆ ನಾನು ಪುನಃ ಮಾತೆಯವರಲ್ಲಿಗೆ ಹೋದೆ. ಶ್ರೀಮಾತೆ ರೊಟ್ಟಿಮಾಡಲು ಹಿಟ್ಟನ್ನು ನಾದುತ್ತಿದ್ದರು. ಅವರು ಮಂಡಿ ನೀಡಿ ಪೂರ್ವಾಭಿಮುಖವಾಗಿ ನೆಲದಮೇಲೆ ಕುಳಿತಿದ್ದರು. ಒಲೆ ಪಕ್ಕದಲ್ಲೇ ಇತ್ತು. ಮಾತೆ ಕರುಣಾಪೂರಿತ ದೃಷ್ಟಿಯಿಂದ ನನ್ನನ್ನು ನೋಡಿ 'ನಿನಗೇನು ಬೇಕು' ಎಂದರು.

ಶಿಷ್ಯ :– ನಿಮ್ಮೊಡನೆ ಮಾತನಾಡಲು ಬಯಸುವೆ.

ಶ್ರೀಮಾತೆ :– ಏನುವಿಷಯ ಮಾತಾಡಬೇಕು? ಇಲ್ಲಿ ಕುಳಿತುಕೊ ಬಾ. ನನಗೆ ಚಾಪೆ ಕೊಟ್ಟರು.

ಶಿಷ್ಯ :– ತಾಯಿ, ಜನರು ಗುರುಮಹಾರಾಜರನ್ನು ಪರಮೇಶ್ವರನೆಂದು ಹೇಳುವರು. ನೀವೇನು ಹೇಳುವಿರಿ?

ಶ್ರೀಮಾತೆ :– ಹೌದು. ಅವರು ನನಗೆ ಈಶ್ವರ ಸಮಾನರು.

ಶ್ರೀಮಾತೆ 'ನನಗೆ' ಎಂದು ಒತ್ತಿಹೇಳಿದ್ದರಿಂದ ನಾನು 'ನಿಜ, ಹೆಂಗಸಿಗೆ ಗಂಡನೇ ಪರದೈವ. ನಾನು ಆ ಭಾವನೆಯಿಂದ ಇದನ್ನು ಕೇಳ

ಲಿಲ್ಲ' ಎಂದೆ.

ಮಾತೆ:– ಹೌದು, ಅವರು ನನಗೆ ಸ್ವಾಮಿ, ಆದುದರಿಂದ ಪೂರ್ಣ ಬ್ರಹ್ಮಸನಾತನರು ; ಬೇರೆ ಯಾವ ಭಾವದಲ್ಲಿಯೂ ಕೂಡ ಅವರು ಅಂತೆಯೆ.

ನಾನು ಶ್ರೀ ರಾಮಕೃಷ್ಣಪರಮಹಂಸರು ಈಶ್ವರಸ್ವರೂಪರಾದರೆ ಶ್ರೀಮಾತೆಯವರೂ ಭಗವತಿ ಜಗನ್ಮಾತೆಯೇ ಆಗಿರಬೇಕೆಂದು ಯೋಚಿಸಿದೆ. ರಾಮಸೀತೆ, ರಾಧಾಕೃಷ್ಣರು ಹೇಗೋ ಹಾಗೇ ಮಾತೆಯೂ ಭಗವಂತನ ಒಡನಾಡಿಯಾಗಿರಬೇಕು. ನಾನು 'ಇದು ಹೀಗಿದ್ದ ಪಕ್ಷಕ್ಕೆ ನಾನೇಕೆ ಹೀಗೆ ನಿಮ್ಮನ್ನು ಒಬ್ಬ ಸಾಧಾರಣ ಹೆಂಗಸು ಹಿಟ್ಟು ಕಲಸುತ್ತಿರುವಂತೆ ನೋಡುತ್ತಿರುವೆ? ಇದು ಮಾಯೆ ಇರಬೇಕು. ಅಲ್ಲವೆ?' ಎಂದೆ.

ಶ್ರೀಮಾತೆ:– ಇದು ಖಂಡಿತ ಮಾಯೆ. ಇಲ್ಲದಿದ್ದಲ್ಲಿ ನಾನೇಕೆ ಈ ಸ್ಥಿತಿಯಲ್ಲಿರುತ್ತಿದ್ದೆ? ಆದರೆ ಭಗವಂತನಿಗೆ ನರಲೀಲೆಯಲ್ಲಿ ಬಹಳ ಇಷ್ಟ. ಕೃಷ್ಣನು ಗೋಪಾಲನಂತೆ, ಶ್ರೀ ರಾ ಮ ನು ದಶರಥನ ಮಗನಾಗಿ ಜನಿಸಿದರು.

ಶಿಷ್ಯ:– ನಿಮಗೆ ನಿಮ್ಮ ನಿಜಸ್ಥಿತಿಯ ನೆನಪು ಯಾವಾಗಲಾದರೂ ಬರುವುದೆ?

ಶ್ರೀಮಾತೆ:– ಹೌದು, ನಾನು ಆಗಾಗ ಜ್ಞಾಪಿಸಿಕೊಳ್ಳುವೆ. ಆಗ ನಾನೇ ಹೇಳಿಕೊಳ್ಳುವೆ, 'ನಾನೇನು ಮಾಡುತ್ತಿರುವೆ? ಇದೆಲ್ಲಾ ಏನು?' ಆಗ ನಾನು ಈ ಮನೆ ಮಠ, ಮಕ್ಕಳು ಎಲ್ಲವನ್ನೂ ನೆನಸಿಕೊಂಡು ನನ್ನ ನಿಜಸ್ವರೂಪವನ್ನು ಮರೆಯುವೆ.

ನಾನು ಪ್ರತಿದಿನವೂ ಶ್ರೀಮಾತೆಯವರ ಕೋಣೆಯಲ್ಲಿ ಅವರ ದರ್ಶನಪಡೆಯುತ್ತಿದ್ದೆ. ಅವರು ಹಾಸಿಗೆಯ ಮೇಲೆ ಕುಳಿತುಕೊಂಡು ಮಾತಾಡುತ್ತಿದ್ದರು. ರಾಧು ಅವರ ಪಕ್ಕದಲ್ಲೇ ಮಲಗಿರುತ್ತಿದ್ದಳು. ಒಂದು ಹಣತೆಯ ಮುಂದೆ ಬೆಳಕು ಬೀಳುತ್ತಿತ್ತು. ಅವರಿಗೆ ವಾತ ರೋಗವಿದ್ದುದರಿಂದ ಒಂದೊಂದು ದಿನ ಕೆಲಸದವಳು ಅವರ ಪಾದವನ್ನು ಎಣ್ಣೆಯಿಂದ ನೀವುತ್ತಿದ್ದಳು.

ಒಂದು ದಿನ ಮಾತನಾಡುತ್ತಿರುವಾಗ ಮಧ್ಯೆ ಶ್ರೀಮಾತೆ ಹೇಳಿದರು: 'ನನಗೆ ಯಾವಾಗ ಒಬ್ಬ ಶಿಷ್ಯನ ನೆನಪು ಬಂದು ಅವನನ್ನು ನೋಡಬೇಕೆನ್ನಿಸುವುದೋ ಆಗ ಆತನೇ ಇಲ್ಲಿಗೆ ಬರುವನು. ಅಥವಾ ಕಾಗದ

ಬರುವುದು. ನೀನು ಯಾವುದೋ ಪ್ರೇರೇಪಣೆಯಿಂದ ಇಲ್ಲಿಗೆ ಬಂದಿರ ಬೇಕು. ನಿನ್ನ ಮನಸ್ಸಿನಲ್ಲಿ ಜಗನ್ಮಾತೆಯು ನೆನಪಿರಬೇಕು.

ಶಿಷ್ಯ :– ನೀವು ಲೋಕಮಾತೆಯೆ ?

ಶ್ರೀಮಾತೆ :– ಹೌದು.

ಶಿಷ್ಯ :– ಮನುಷ್ಯಾತೀತವಾದ ಪ್ರಾಣಿಗಳು, ಹಕ್ಕಿಗಳು, ಕ್ರಿಮಿ ಕೀಟಗಳೆಲ್ಲದರ ತಾಯಿಯೆ ?

ಶ್ರೀಮಾತೆ :– ಹೌದು, ಇವೆಲ್ಲಕ್ಕೂ ನಾನೇ ತಾಯಿ.

ಶಿಷ್ಯ :– ಹಾಗಾದರೆ ಅವುಗಳಿಗೆಲ್ಲಾ ಇಷ್ಟೊಂದು ಕಷ್ಟವೇಕೆ?

ಶ್ರೀಮಾತೆ:– ಈ ಜನ್ಮದಲ್ಲಿ ಅವುಗಳಿಗೆ ಈ ಅನುಭವವಾಗಲೇ ಬೇಕು.

ಒಮ್ಮೆ ಸಂಜೆ ಶ್ರೀಮಾತೆಯವರ ಕೋಣೆಯಲ್ಲಿ ಸಂಭಾಷಣೆಗೆ ಮೊದಲಾಯಿತು.

ಶ್ರೀಮಾತೆ :–ನೀವೆಲ್ಲ ನನ್ನ ಮಕ್ಕಳಾದುದರಿಂದ ಇಲ್ಲಿಗೆ ಬಂದಿದ್ದೀರಿ.

ಶಿಷ್ಯ :– ನಾನು ನಿಮ್ಮವನೆ ?

ಶ್ರೀಮಾತೆ :– ಹೌದು, ಆ ವಿಷಯದಲ್ಲಿ ಸಂದೇಹವುಂಟೆ? ಒಬ್ಬನು ಇನ್ನೊಬ್ಬನಿಗೆ ಸಂಪೂರ್ಣವಾಗಿ ಸೇರಿದ್ದರೆ ಅವರು ನಿರಂತರವಾಗಿ ಕಾಲ ಚಕ್ರದಲ್ಲಿ ಎಡೆಬಿಡದೆ ಒಂದಾಗಿರುವರು.

ಶಿಷ್ಯ :– ಎಲ್ಲರೂ ನಿಮ್ಮನ್ನು 'ನೀವು' ಎನ್ನುವರು. ನನಗೆ ಹಾಗೆ ಹೇಳಲಾಗುವುದಿಲ್ಲ. ನಾನು ನಿಮ್ಮನ್ನು 'ನೀನು' ಎನ್ನುವೆ.

ಶ್ರೀಮಾತೆ :– ಅದು ಒಳ್ಳೆಯದೇ. ನಮ್ಮ ನಿಕಟ ಬಾಂಧವ್ಯವನ್ನು ವ್ಯಕ್ತಪಡಿಸುವುದು.

ಶಿಷ್ಯ :–(ಮಾತಿನ ಮಧ್ಯೆ ನಾನೊಮ್ಮೆ ಶ್ರೀಮಾತೆಯನ್ನು) 'ನೀವು ಮಂತ್ರೋಪದೇಶಕೊಟ್ಟವರ ಜವಾಬ್ದಾರಿಯನ್ನೆಲ್ಲಾ ನೀವೇ ವಹಿಸಿದ್ದ ಮೇಲೆ, ನೀವೇಕೆ ನಾವು ನಿಮ್ಮನ್ನು ನಮ್ಮಿಚ್ಛಾ ಪೂರ್ತಿಗೆಂದು ಬೇಡಿದಾಗ 'ಗುರುದೇವನೊಂದಿಗೆ ಈ ವಿಷಯ ಮಾತನಾಡುವೆ' ಎನ್ನುವಿರಿ. ನೀವೇ ನಮ್ಮ ಜವಾಬ್ದಾರಿ ಹೊತ್ತುಕೊಳ್ಳಲಾಗುವುದಿಲ್ಲವೆ ?'

ಶ್ರೀಮಾತೆ:– ನಾನು ನಿಜವಾಗಿ ನಿಮ್ಮ ಜವಾಬ್ದಾರಿ ಹೊತ್ತಿರುವೆ.

ಶಿಷ್ಯ :– ದಯವಿಟ್ಟು ಹರಸಿ ತಾಯಿ. ನನಗೆ ಜೊತೆಗಾರನೊಬ್ಬ ನಿದ್ದಾನೆ. ಅವನ ಮೇಲಿರುವ ನನ್ನ ಪ್ರೇಮದ ಕಾಲುಭಾಗವನ್ನಾದರೂ ನಾನು ಶ್ರೀರಾಮಕೃಷ್ಣರ ಕಡೆ ತಿರುಗಿಸಬಲ್ಲೆನಾದರೆ ತುಂಬಾ

ಕೃತಜ್ಞನಾಗಿರುವೆ.

ಶ್ರೀಮಾತೆ :– ಅಹಾ ಅದು ನಿಜ. ಆಗಲಿ, ನಾನು ಗುರುಮಹಾರಾಜ ರೊಡನೆ ಮಾತಾಡುವೆ.

ಶಿಷ್ಯ :– ನೀವೇಕೆ ಗುರುದೇವನೊಡನೆ ಮಾತಾಡುವೆನೆಂದು ಮಾತ್ರ ಹೇಳುವಿರಿ? ನೀವು ಅವರಿಗಿಂತ ಬೇರೆಯೆ? ಕೇವಲ ನಿಮ್ಮ ಆಶೀರ್ವಾದ ದಿಂದಲೇ ನನ್ನ ಇಚ್ಛೆ ಪೂರ್ಣಗೊಳ್ಳುವುದು.

ಶ್ರೀಮಾತೆ :– ಮಗು ನನ್ನ ಆಶೀರ್ವಾದದಿಂದ ನಿನಗೆ ಪೂರ್ಣಜ್ಞಾನ ವುಂಟಾಗುವ ಹಾಗಿದ್ದರೆ ಹೃತ್ಪೂರ್ವಕ ಹರಸುವೆ. ಸಹಾಯವಿಲ್ಲದೆ ತನಗೆ ತಾನೆ ಮಾಯೆಯಿಂದ ಪಾರಾಗಲು ಸಾಧಾರಣ ಮನುಷ್ಯನಿಗೆ ಸಾಧ್ಯವೆ? ಇದಕ್ಕೇ ಗುರುದೇವನು ಕಠಿಣವಾದ ಆಧ್ಯಾತ್ಮಿಕ ತಪಶ್ಚರ್ಯೆ ಯನ್ನು ಮಾಡಿ ಅದರ ಫಲವನ್ನು ಮಾನವರ ಉದ್ಧಾರಕ್ಕಾಗಿ ಎರೆದರು.

ಶಿಷ್ಯ :– ಶ್ರೀರಾಮಕೃಷ್ಣರನ್ನು ನೋಡದೆ ಅವರನ್ನು ಪ್ರೀತಿಸುವುದು ಹೇಗೆ?

ಶ್ರೀಮಾತೆ :– ಅದು ನಿಜ. ಕೇವಲ ಕಾಲ್ಪನಿಕವ್ಯಕ್ತಿಯೊಂದಿಗೆ ನಿಕಟ ಸಂಬಂಧಸಾಧ್ಯವೆ?

ಶಿಷ್ಯ :– ನನಗೆ ಗುರುಮಹಾರಾಜರ ದರ್ಶನವೆಂದಾಗುವುದು?

ಶ್ರೀಮಾತೆ :– ನೀನು ಖಂಡಿತ ಅವರನ್ನು ನೋಡುವೆ, ಯೋಗ್ಯ ಕಾಲದಲ್ಲಿ ನಿನಗೆ ಅವರ ದರ್ಶನ ಲಭಿಸುವುದು. * * *

ಒಂದು ದಿನ ಶ್ರೀಮಾತೆ ಹಾಸಿಗೆಯಲ್ಲಿ ಮಲಗಿದ್ದರು. ಕಾಮಿನಿ ಅವರ ಪಾದವನ್ನು ತೈಲದಿಂದ ನೀವುತ್ತಿದ್ದಳು.

ಶ್ರೀಮಾತೆ :– ಶರೀರ ಬೇರೆ, ಆತ್ಮ ಬೇರೆ; ಆತ್ಮ ಶರೀರವನ್ನೆಲ್ಲಾ ವ್ಯಾಪಿಸಿರುವುದು. ಅದಕ್ಕೇ ನನಗೆ ಈ ಕಾಲಿನ ಬಾಧೆಯುಂಟಾಗಿದೆ. ನಾನು ಈ ಪಾದದಿಂದ ಮನಸ್ಸನ್ನು ಬೇರ್ಪಡಿಸಿದರೆ ನನಗೆ ಅಲ್ಲಿನ ನೋವಿನ ಅರಿವೇ ಇರುವುದಿಲ್ಲ.

ಮಂತ್ರೋಪದೇಶದ ವಿಚಾರ ಮಾತನಾಡುತ್ತಿರುವಾಗ ನಾನು, "ತಾಯಿ, ಗುರುವಿನಿಂದ ಉಪದೇಶಪಡೆಯುವುದರ ಆವಶ್ಯಕತೆಯೇನು? ಒಬ್ಬ ಮನುಷ್ಯ ಮಂತ್ರಜಪ ಮಾಡುವುದೇ ಇಲ್ಲ. ಕೇವಲ 'ಕಾಲಿ ಮಾತೆ, ಕಾಲಿಮಾತೆ' ಎಂದು ಸುಮ್ಮನೆ ಹೇಳಿದರೆ ಆಗುವುದಿಲ್ಲವೆ?"

ಶ್ರೀಮಾತೆ :– ಮಂತ್ರದಿಂದ ದೇಹ ಪರಿಶುದ್ಧವಾಗುವುದು; ದೇವರ

ಮಂತ್ರೋಚ್ಚಾರಣೆಯಿಂದ ಮನುಷ್ಯ ಪವಿತ್ರನಾಗುವನು. ಈ ಕಥೆಯನ್ನು ಕೇಳು. ಒಮ್ಮೆ ನಾರದರು ವೈಕುಂಠಕ್ಕೆ ಹೋಗಿ ನಾರಾಯಣನ ಹತ್ತಿರ ಬಹಳ ಹೊತ್ತು ಸಂಭಾಷಣೆ ನಡೆಸುತ್ತಿದ್ದರು. ಆಗ ನಾರದರಿಗೆ ಇನ್ನೂ ಉಪದೇಶವಾಗಿರಲಿಲ್ಲ. ನಾರದರು ಅಲ್ಲಿಂದ ಹೋದಮೇಲೆ ವಿಷ್ಣು ಲಕ್ಷ್ಮಿಗೆ, "ಸಗಣಿ ನೀರಿನಿಂದ ಆ ಸ್ಥಳವನ್ನು ಶುಚಿಮಾಡು" ಎಂದನು. ಲಕ್ಷ್ಮಿ "ಏಕೆ ನಾಥ, ನಾರದರು ನಿಮ್ಮ ಮಹಾಭಕ್ತರಲ್ಲವೆ? ಇದೇಕೆ ಹೀಗೆ ಹೇಳುವಿರಿ" ಎಂದುದಕ್ಕೆ ವಿಷ್ಣು, "ನಾರದನಿಗಿನ್ನೂ ಉಪದೇಶವಾಗಿಲ್ಲ. ಉಪದೇಶವಿಲ್ಲದೆ ದೇಹ ಪರಿಶುದ್ಧವಾಗುವುದಿಲ್ಲ."

ಗುರುವಿನಿಂದ ದೇಹದ ಪವಿತ್ರತೆಗಾದರೂ ಉಪದೇಶಪಡೆಯಬೇಕು. ವೈಷ್ಣವನು ಶಿಷ್ಯನಿಗೆ ಉಪದೇಶಕೊಟ್ಟಾದಮೇಲೆ "ಈಗ ಎಲ್ಲವೂ ನಿನ್ನ ಮನಸ್ಸನ್ನವಲಂಬಿಸಿರುವುದು" ಎನ್ನುವನು. "ಮಾನವ ಗುರು ಕಿವಿಯಲ್ಲಿ ಮಂತ್ರವನ್ನುಚ್ಚರಿಸುವನು. ಆದರೆ ದೇವರು ಆತ್ಮದಲ್ಲಿ ಸ್ಫೂರ್ತಿಯನ್ನುಂಟುಮಾಡುವನು" ಎನ್ನುವರು. ಮನಸ್ಸಿನಮೇಲೆ ಎಲ್ಲವೂ ನಿಂತಿದೆ. ಮನಸ್ಸು ಪವಿತ್ರವಾಗದೆ ಯಾವ ಕೆಲಸವೂ ಆಗುವುದಿಲ್ಲ. "ಸಾಧಕನಿಗೆ ಗುರುಕೃಪೆ ಇರಬಹುದು, ದೇವರ, ವೈಷ್ಣವನ ಅನುಗ್ರಹವಿರಬಹುದು. 'ಒಂದ'ರ ಅನುಗ್ರಹವಿಲ್ಲದಿದ್ದರೆ ಅವನು ದುಃಖಿಯಾಗುವನು" ಎಂದು ಹೇಳುವರು. ಆ 'ಒಂದು' ಎನ್ನುವುದೇ ಮನಸ್ಸು. ಸಾಧಕನ ಮನಸ್ಸು ಆತನನ್ನು ಅನುಗ್ರಹಿಸಬೇಕು.

ಮುಂದುವರಿಸುತ್ತಾ ಶ್ರೀಮಾತೆ ಹೇಳಿದರು:– ಗುರುಮಹಾರಾಜರು ಸ್ವರ್ಗಸ್ಥರಾದಮೇಲೆ ನಾನೂ ಹೋಗಬೇಕೆಂದು ಬಯಸಿದೆ. ಅವರು ನನಗೆ ಪ್ರತ್ಯಕ್ಷರಾಗಿ, "ನೀನು ಇಲ್ಲೇ ಇರಬೇಕು. ಇನ್ನೂ ಬಹಳ ಕೆಲಸಮಾಡಬೇಕಾಗಿದೆ" ಎಂದರು. ನನಗೆ ಆಮೇಲೆ ಇದರ ಸತ್ಯ ಗೋಚರವಾಯಿತು. ಗುರುಮಹಾರಾಜರು "ಕಲಿಕತ್ತೆಯ ಜನ ಕತ್ತಲೆಯಲ್ಲಿ ಹುಳುಗಳಂತೆ ಒದ್ದಾಡುತ್ತಿದ್ದಾರೆ. ನೀನು ಅವರನ್ನು ನೋಡಿಕೊಳ್ಳಬೇಕು" ಎನ್ನುತ್ತಿದ್ದರು. ತಾವು ಸೂಕ್ಷ್ಮದೇಹದಲ್ಲಿ ಇನ್ನೂ ಮುನ್ನೂರು ವರ್ಷಗಳ ಕಾಲ ಭಕ್ತರ ಹೃದಯದಲ್ಲಿ ಜೀವಿಸಿರುವರೆಂದೂ, ಬಿಳೀ ಜನರಲ್ಲಿ ಅನೇಕರು ತಮ್ಮ ಶಿಷ್ಯರಾಗುವರೆಂದೂ ಅವರು ಹೇಳುತ್ತಿದ್ದರು.

ಗುರುಮಹಾರಾಜರ ಕಾಲಾನಂತರ ಮೊದಮೊದಲು ನನಗೆ ಬಹು

ಅಂಜಿಕೆಯಾಯಿತು. ಏಕೆಂದರೆ ನಾನು ಕೆಂಪು ಅಂಚಿನ ಸೀರೆಯುಡುತ್ತಿದ್ದೆ. ಕೈಯಲ್ಲಿ ಚಿನ್ನದ ಕಡಗವಿತ್ತು. ಇದರಿಂದ ಜನರ ಟೀಕೆಗಳಿಗೆ ಗುರಿಯಾಗಬೇಕೆಂದು ಹೆದರಿದೆ. ಕ್ರಮೇಣ ಆ ಹೆದರಿಕೆ ಹೋಯಿತು. ಒಂದು ದಿನ ಶ್ರೀ ಗುರುದೇವರು ನನ್ನ ಮುಂದೆ ಬಂದು ಕಿಚಡಿಬೇಕೆಂದು ಕೇಳಿದರು. ನಾನು ಕಿಚಡಿಮಾಡಿ ದೇವಸ್ಥಾನದ ರಘುವೀರನ ಮುಂದೆ ನೀಡಿದೆ. ಅನಂತರ ಅದನ್ನು ಮನಸ್ಸಿನಲ್ಲೇ ಗುರುವಿಗೆ ಉಣಬಡಿಸಿದೆ.

ತಮ್ಮ ವಿಷಯ ಹೇಳುತ್ತಾ ಶ್ರೀಮಾತೆ ಹೀಗೆಂದರು: ಬಲರಾಮ ಬಾಬು ನನ್ನ ವಿಷಯ ಹೇಳುತ್ತಾ, "ದೊಡ್ಡ ತಪಸ್ವಿನಿ, ಕರುಣಾಮಯಿ" ಎನ್ನುತ್ತಿದ್ದ. ದಯೆಯಿಲ್ಲದವನು ಮನುಷ್ಯನೆ? ಅವನೊಬ್ಬ ಶುದ್ಧ ಮೃಗ. ಎಷ್ಟೋ ಬಾರಿ ನನಗೆ ಕರುಣೆ ಉಕ್ಕಿ ಬಂದು ಮೈಮರೆಯುವೆನು. ಆಗ ನಾನಾರೆಂಬುದೂ ನನಗೆ ಮರೆತುಹೋಗುವುದು.

ಕೊನೆಗೆ ಶ್ರೀಮಾತೆ ನನಗೆ, "ನಿನ್ನೊಡನೆ ಮಾತಾಡಲು ನನಗೆ ಬಹಳ ಸಲಿಗೆಯುಂಟಾಗಿದೆ. ನನ್ನನ್ನು ಕಲಿಕತ್ತೆಯಲ್ಲಿ ನೋಡು. ನನ್ನೊಡನೆ ವಾಸಿಸು" ಎಂದರು.

ಆಗ ನನಗೆ ಸನ್ಯಾಸಿಯಾಗಬೇಕೆಂಬ ಇಚ್ಛೆ ಬಲವಾಗಿದ್ದರೂ ನನ್ನ ಬಂಧುಗಳೊಡನೆ ಸಂಸಾರದಲ್ಲಿದ್ದೆ. ಆಗ ನನ್ನಲ್ಲಿಯೇ ಅಂದುಕೊಂಡೆ, "ಬಹುಶಃ ಆಕೆಯ ಕೃಪೆಯಿಂದ ಭವಿಷ್ಯದಲ್ಲಿ ಸನ್ಯಾಸಿಯಾಗಿ ಅವರೊಡನೆ ವಾಸಿಸಬಹುದು" ಎಂದು.

ನಾನು ಜಯರಾಮವಟಿಯಲ್ಲಿದ್ದಾಗ ರಾಧುವಿನತಾಯಿಗೆ ಹುಚ್ಚು ಹಿಡಿಯಿತು. ಆಕೆ ತನ್ನ ತಂದೆ ಮನೆಗೆ ರಾಧುವಿನ ಒಡೆವೆಗಳನ್ನೆಲ್ಲಾ ಎತ್ತಿಕೊಂಡು ಓಡಿಹೋಗಿದ್ದಳು. ತಂದೆ ಅವುಗಳನ್ನು ಅಪಹರಿಸಿದ. ಅದು ಅವಳ ಸ್ಥಿಮಿತವನ್ನು ಮತ್ತೂ ಕೆಡಿಸಿತು. ಜಯರಾಮವಟಿಗೆ ಹಿಂತಿರುಗಿ ಆಕೆ ಸಿಂಹವಾಹಿನಿ ದೇವಾಲಯದಲ್ಲಿ ಅತ್ತಳು. ಆಗ ಕತ್ತಲೆಯಾಗಿತ್ತು. ನಾನು ಶ್ರೀಮಾತೆಯವರೊಡನೆ ಅವರ ಕೋಣೆಯಲ್ಲಿ ಮಾತನಾಡುತ್ತಿದ್ದೆ. ಇದ್ದಕ್ಕಿದ್ದಂತೆ ಅವರು ಹೇಳಿದರು. "ಮಗು, ನಾನೀಗಲೇ ಹೋಗಬೇಕು. ಆ ಹುಚ್ಚಿ ಅತ್ತಿಗೆಗೆ ನನ್ನ ಹೊರತು ಮತ್ತಾರೂ ಇಲ್ಲ. ಅವಳು ದೇವರ ಮುಂದೆ ಒಡವೆಗಾಗಿ ಅಳುತ್ತಿದ್ದಾಳೆ" ಹೀಗೆ ಹೇಳುತ್ತಾ ಶ್ರೀಮಾತೆ ಹೊರಟರು. ಆದರೆ ನನಗೆ ಅಳುವಿನ ಶಬ್ದ ಸ್ವಲ್ಪ ಕೂಡ ಕೇಳಿಸಲಿಲ್ಲ. ಅಷ್ಟು ದೂರದಿಂದ ಕೇಳಿಸುವಹಾಗೂ ಇರ

ಲಿಲ್ಲ. ಆದರೂ ಶ್ರೀಮಾತೆಗೆ ಆ ಧ್ವನಿ ಪರಿಚಯವಾಯಿತು. ರಾಧುವಿನ ತಾಯೊಡನೆ ಹಿಂತಿರುಗಿದಾಗ ಶ್ರೀಮಾತೆಗೆ ಆ ಅತ್ತಿಗೆ "ಓ! ಅತ್ತಿಗೆ, ನೀನು ನನ್ನ ಒಡವೆಗಳನ್ನೆಲ್ಲಾ ತೆಗೆದುಕೊಂಡಿರುವೆ. ನನಗವು ಇಲ್ಲದಂತೆ ಮಾಡಿರುವೆ" ಎಂದಳು. ಶ್ರೀಮಾತೆ "ಆ ಒಡವೆ ನನ್ನದಾಗಿದ್ದರೆ ಕಾಗೆಯ ಹೇಸಿಗೆಯಂತೆ ಅವನ್ನು ಬಿಸಾಡುತ್ತಿದ್ದೆ" ಎಂದರು. ರಾಧುವಿನ ತಾಯಿಯ ವಿಚಾರ ಮಾತಾಡುತ್ತಾ ಶ್ರೀಮಾತೆ ನಗುತ್ತಾ "ಗಿರೀಶ ಇವಳನ್ನು ನನ್ನ ಹುಚ್ಚಿಗೆಳತಿ ಎನ್ನುತ್ತಿದ್ದ" ಎಂದರು.

ಮೊದಲು ನಾನು ಶ್ರೀಮಾತೆಯವರನ್ನು 'ಅಮ್ಮಾ' ಎನ್ನಲು ಹಿಂಜರಿಯುತ್ತಿದ್ದೆ. ನನ್ನ ಸ್ವಂತ ತಾಯಿ ಚಿಕ್ಕಂದಿನಲ್ಲೇ ಸತ್ತು ಹೋಗಿದ್ದಳು. ಒಂದು ದಿನ ಬೆಳಿಗ್ಗೆ ಶ್ರೀಮಾತೆ ಯಾವುದೋ ಕೆಲಸಕ್ಕಾಗಿ ಒಬ್ಬರ ಬಳಿಗೆ ನನ್ನನ್ನು ಕಳುಹಿಸಿದರು. ನಾನು ಹೊರಡುತ್ತಿರುವಾಗ ಶ್ರೀಮಾತೆ ನನ್ನನ್ನು 'ನೀನು ಅವನಿಗೆ ಏನೆಂದು ಹೇಳುವೆ' ಎಂದರು. ನಾನು 'ಆಕೆ ನಿಮಗೆ ಇದನ್ನು ಹೇಳುವಂತೆ ಹೇಳಿದರು ಎನ್ನುವೆ' ಎಂದೆ. "ಇಲ್ಲ ಮಗು, ಹಾಗೆ ಹೇಳಬೇಡ, 'ಮಾತೆ ಇದನ್ನು ನಿನಗೆ ಹೇಳುವಂತೆ ಹೇಳಿದರು' ಎಂದು ಹೇಳು" ಎಂದರು. 'ಮಾತೆ' ಎಂಬುದನ್ನು ಆಗ ಒತ್ತಿಹೇಳಿದರು.

ಒಂದು ದಿನ ಶ್ರೀಮಾತೆಯವರ ಕೊಠಡಿಯ ಕೈಸಾಲೆಯಲ್ಲಿ ಶ್ರೀಮಾತೆಯವರಿಗೂ, ಇತರ ಭಕ್ತಾದಿಗಳಿಗೂ 'ಶ್ರೀರಾಮಕೃಷ್ಣ ಪುಂಥಿ' ಎಂಬ ಪದ್ಯಪುಸ್ತಕಗಟ್ಟಿಯಾಗಿ ಓದುತ್ತಿದ್ದೆ. ಶ್ರೀರಾಮಕೃಷ್ಣರ ಮದುವೆ ವಿಚಾರ ಓದುತ್ತಿದ್ದಾಗ ಗ್ರಂಥಕರ್ತ ಶ್ರೀಮಾತೆಯವರನ್ನು ಸ್ತುತಿಸುತ್ತಾ ಜಗನ್ಮಾತೆ ಎಂದು ಬರೆದಿದ್ದನು. ಅದನ್ನು ನಾನು ಓದಿದಾಗ ಶ್ರೀಮಾತೆ ಆ ಸ್ಥಳವನ್ನು ಬಿಟ್ಟಿದ್ದರು. ಕೆಲವು ನಿಮಿಷಗಳ ಹಿಂದೆ ನಾನು ಮಹೇಂದ್ರನಾಥಗುಪ್ತರು ಬರೆದಿರುವ ಶ್ರೀರಾಮಕೃಷ್ಣ ವಚನಾಮೃತದ ಸ್ವಲ್ಪಭಾಗ ಪ್ರಕಟವಾಗಿದ್ದ ಉದ್ಬೋಧನವನ್ನು ಓದುತ್ತಿದ್ದೆ. ಆಗ ಮತ್ತಾರೂ ಅಲ್ಲಿರಲಿಲ್ಲ. ಈ ಕೆಳಗಿನ ಭಾಗವನ್ನು ಓದುತ್ತಿದ್ದೆ:

ಗಿರೀಶ್ :– ನನಗೊಂದು ಆಸೆಯಿದೆ.

ಗುರು :– ಅದೇನು ?

ಗಿರೀಶ್ :– ನನಗೆ ಪ್ರೀತಿಗೋಸ್ಕರ ದೇವರ ಪ್ರೀತಿಬೇಕು.

ಗುರು :– ಆ ಬಗೆಯ ಪ್ರೇಮ ಕೇವಲ ಈಶ್ವರ ಕೋಟಿಗಳಿಗೆ ಮಾತ್ರ ಸಾಧ್ಯ. ನಾನು ಸಾಮಾನ್ಯ ಮಾನವರಿಗೆ ಅದನ್ನು ಸಾಧಿಸಲಸಾಧ್ಯ.

ಶ್ರೀಮಾತೆಯವರನ್ನು 'ಗುರುಮಹಾರಾಜರು ಇದನ್ನು ಹೇಳಿದುದರ ಉದ್ದಿಶ್ಯವೇನು?' ಎಂದು ಕೇಳಿದೆ.

ಶ್ರೀಮಾತೆ :– ಈಶ್ವರ ಕೋಟಿಗಳ ಆಸೆಯೆಲ್ಲಾ ದೇವರಲ್ಲಿ ಪೂರ್ಣಗೊಳ್ಳುವುದು. ಆದ್ದರಿಂದ ಅವರಿಗೆ ಪ್ರಾಪಂಚಿಕತೆಯ ಮೇಲೆ ಆಸೆಯಿಲ್ಲ. ಮನುಷ್ಯನಿಗೆ ಎಲ್ಲಿಯವರೆಗೆ ಒಂದು ಆಸೆಯಾದರೂ ಉಳಿದಿದೆಯೋ ಅಲ್ಲಿಯವರೆಗೂ ಪ್ರೇಮಕ್ಕೋಸುಗ ಪ್ರೇಮ ಹೊಂದುವುದು ಅಸಾಧ್ಯ.

ಶಿಷ್ಯ :– ತಾಯಿ, ನಿಮ್ಮ ಸಹೋದರರು ಈಶ್ವರಕೋಟಿಗಳ ಸಮಕ್ಕೆ ಬರುವರೆ?

ಶ್ರೀಮಾತೆಯವರೊಡನೆ ಹುಟ್ಟಿದವರಾದ್ದರಿಂದ ಶ್ರೀರಾಮಕೃಷ್ಣರ ಸನ್ಯಾಸಿ ಶಿಷ್ಯರ ಆಧ್ಯಾತ್ಮಿಕ ಶಕ್ತಿಯನ್ನೇ ಅವರೂ ಪಡೆದಿರಬಹುದೆಂದು ನಾನು ಭಾವಿಸಿದ್ದೆ. ಆಗ ಶ್ರೀಮಾತೆ ತಿರಸ್ಕಾರ ದೃಷ್ಟಿಯಿಂದ 'ಎಂತಹ ಹೋಲಿಕೆ! ಕೇವಲ ನನ್ನ ಸಹೋದರನಾದ ಮಾತ್ರಕ್ಕೆ ಏನನ್ನು ಸಾಧಿಸಬಹುದು? ಗುರುದೇವನ ಅಂತರಂಗ ಶಿಷ್ಯರಾಗುವುದಕ್ಕೆ ಬಹಳ ಅಂತರವಿದೆ,' ಎಂದು ಹೇಳುವಂತೆ ನೋಡಿದರು.

ಒಂದು ದಿನ ಬೆಳಗ್ಗೆ ಶ್ರೀಮಾತೆ ಬತ್ತ ಕುಟ್ಟುವುದಕ್ಕೆ ಸಹಾಯ ಮಾಡುತ್ತಿದ್ದರು. ಅದು ಅವರ ನಿತ್ಯಕೆಲಸವಾಗಿತ್ತು. 'ತಾಯಿ ನೀವೇಕೆ ಇಷ್ಟು ಕಷ್ಟಪಡಬೇಕು?' ಎಂದೆ. ಉತ್ತರವಾಗಿ ಶ್ರೀಮಾತೆ 'ಮಗು, ನಾನು ನನ್ನ ಜೀವನ ಮಾದರಿಯಾಗಲು ಅವಶ್ಯಕವಾದುದಕ್ಕಿಂತ ಹೆಚ್ಚಾಗಿ ಮಾಡಿದ್ದೇನೆ' ಎಂದರು.

ಒಂದು ರಾತ್ರಿ ಶ್ರೀಮಾತೆಯವರ ಮನೆಯಲ್ಲಿ ಎಲ್ಲರೂ ನಿದ್ರಾಸಕ್ತರಾಗಿದ್ದಾರೆ. ಇದ್ದಕ್ಕಿದ್ದಂತೆ ಶ್ರೀಮಾತೆಯವರ ತಮ್ಮನ ಮಗಳಾದ ನಳಿನಿಯನ್ನು ಅವಳ ಗಂಡ ಕರೆದೊಯ್ಯಲು ಎತ್ತಿನ ಬಂಡಿಯಲ್ಲಿ ಅಲ್ಲಿಗೆ ಬಂದ. ನಳಿನಿ ಗಂಡನ ಮನೆಯಿಂದ ಹಿಂತಿರುಗಿ ಬಂದಿದ್ದಳು. ವಾಪಸ್ಸು ಹೋಗಲು ಇಷ್ಟಪಡಲಿಲ್ಲ. ಗಂಡನ ಇಚ್ಛೆಯನ್ನು ಕೇಳಿ ತನ್ನ ಕೊಠಡಿಯ ಬಾಗಿಲನ್ನು ಮುಚ್ಚಿ ಅವನೇನಾದರೂ ತನ್ನೊಡನೆ ಬರಬೇಕೆಂದು ಬಲವಂತ ಮಾಡಿದರೆ ಆತ್ಮಹತ್ಯ ಮಾಡಿಕೊಳ್ಳುವೆನೆಂದು ಹೇಳಿದಳು. ಆದರೂ ಶ್ರೀಮಾತೆ ಅವಳು ಗಂಡನ ಮನೆಗೆ ಹೋಗಬೇಕಾದ್ದೇನೂ ಇಲ್ಲವೆಂದು ಒತ್ತಿ ಹೇಳಿ ಬಾಗಿಲು ತೆರೆಯುವಂತೆ ಮಾಡಿದರು. ರಾತ್ರಿಯೆಲ್ಲಾ ಮನೆಯಲ್ಲಿ ಗಲಾಟೆಯೋ ಗಲಾಟೆ. ಇಡೀ ರಾತ್ರಿ ಶ್ರೀಮಾತೆ ನಳಿನಿಯ ಕೊಠ

ಡಿಯ ಕೈಸಾಲೆಯಲ್ಲಿ ಕುಳಿತಿದ್ದರು. ಬೆಳಗಿನ ಜಾವ ದೀಪ ಆರಿಸಿ, 'ಗಂಗಾ, ಗೀತಾ, ಗಾಯತ್ರಿ, ಭಾಗವತ, ಭಕ್ತ' ಭಗವಾನ್, ಶ್ರೀರಾಮ ಕೃಷ್ಣ' ಎಂದು ನುಡಿದರು.

ಒಂದು ದಿನ ಶ್ರೀಮಾತೆ ನನ್ನನ್ನು ಒಬ್ಬ ಹಳೆ ಸೇವಕನೊಡನೆ ಹುಚ್ಚಿ ಅತ್ತಿಗೆಯ ತಂದೆ ಮನೆಗೆ, 'ಅವನು ಜಯರಾಮುವಟಿಗೆ ಬರಲಿ. ಇಲ್ಲದಿದ್ದರೆ ಒಡವೆ ಹಿಂತಿರುಗಿ ಕೊಡಲಿ' ಎಂದು ಹೇಳಿ ಕಳುಹಿಸಿದರು. ಎಷ್ಟೋ ಹೊತ್ತು ತರ್ಕಿಸಿದ ಮೇಲೆ ಆತ ನಮ್ಮೊಡನೆ ಬರಲೊಪ್ಪಿದನು. ಆದರೆ ಒಡವೆಗಳನ್ನು ಮಾತ್ರ ತರಲಿಲ್ಲ. ಶ್ರೀಮಾತೆ ಅವನನ್ನು ಒಡವೆ ಗಳನ್ನು ಕೊಟ್ಟು ಹುಚ್ಚಿಯ ಮಾನಸಿಕ ವೇದನೆಯನ್ನು ಹೋಗಲಾಡಿಸ ಬೇಕೆಂದು ಬೇಡಿದರು. ಆದರೆ ಆ ದುರಾಶಾಗ್ರಸ್ತ ಬ್ರಾಹ್ಮಣ ಆಕೆಯ ಬೇಡಿಕೆಗೆ ಕೊಂಚವೂ ಕಿವಿಗೊಡಲಿಲ್ಲ.

ಶಿವರಾತ್ರಿಯಾದ ಎರಡು ದಿನಗಳಿಗೇ ಬೇಲೂರು ಮಠದಲ್ಲಿ ನಡೆ ಯುವ ಶ್ರೀರಾಮಕೃಷ್ಣ ಜನ್ಮೋತ್ಸವಕ್ಕೆ ಹೋಗಬೇಕೆಂದು ನನಗೆ ಅಭಿ ಲಾಷೆಯಿತ್ತು. ಆದಕ್ಕೇ ಶಿವರಾತ್ರಿಯ ಹಿಂದಿನದಿನ ಮನೆಗೆ ಹಿಂತಿರುಗ ಬೇಕೆಂದಿದ್ದೆ. ಶ್ರೀಮಾತೆಗೆ ತಿಳಿಸಿದಾಗ ಮಾತೆ ಮೊದಲು ಕಾಮಾರ ಪುಕೂರಕ್ಕೆ ಹೋಗಲು ಹೇಳಿದರು. ಶ್ರೀಮಾತೆಯುವರ ದರ್ಶನಕ್ಕಾಗಿ ಹಾತೊರೆದು ಬರುವ ಸಂಭ್ರಮದಲ್ಲಿ ನಾನು ಛತ್ರಿ ಅಥವಾ ಮತ್ತಾವ ಬಟ್ಟೆಯನ್ನೂ ತರಲು ಮರೆತಿದ್ದೆ. ಶ್ರೀಮಾತೆಯ ಹೇಳಿಕೆಯುಂತೆ ಗುರು ಮಹಾರಾಜರ ಜನ್ಮಸ್ಥಳವನ್ನು ಸಂದರ್ಶಿಸಲೊಪ್ಪಿದೆ. ಶ್ರೀಮಾತೆ ನನಗೆ ಹೊಸ ಬಟ್ಟೆಯೊಂದನ್ನು ಕೊಟ್ಟು ತೆಗೆದುಕೊಳ್ಳಲು ಹೇಳಿದರು.

ಶ್ರೀಮಾತೆ:– ನಿನ್ನ ಹತ್ತಿರ ದುಡ್ಡಿದೆಯೆ? ಗಾಡಿಬಾಡಿಗೆ ಕೊಡ ಬೇಕಾಗಿರುವುದು. ನಾನು ಸ್ವಲ್ಪ ದುಡ್ಡು ಕೊಡುವೆ.

ಶಿಷ್ಯ:– ನನ್ನ ಹತ್ತಿರ ಇದೆ. ನಿಮ್ಮಿಂದ ತೆಗೆದುಕೊಳ್ಳಬೇಕಾಗಿಲ್ಲ.

ಶ್ರೀಮಾತೆ:– ನೀನು ಮನೆ ಸೇರಿದ ಮೇಲೆ ಪತ್ರ ಬರೆ. ಓ! ನನ್ನ ಮಗುವಿಗೆ ಸರಿಯಾಗಿ ಬಡಿಸಲಾರದೆ ಹೋದೆ. ರುಚಿಕರವಾದ ಪದಾರ್ಥ ಗಳೇನನ್ನೂ ಮಾಡಲಾಗಲಿಲ್ಲ. ಮನೆಯಲ್ಲಿ ಈ ನಳಿನಿ ಹುಚ್ಚಿಯ ವಿಚಾರ ವಾಗಿ ಗಲಾಟೆಯಾಗಿ ಗಡಿಬಿಡಿಯಲ್ಲಿದ್ದೆ.

ಶ್ರೀಮಾತೆಯುವರಿಗೆ ವಂದಿಸಿ ಕಂಬನಿದುಂಬಿ ಅಲ್ಲಿಂದ ಹೊರಟೆ. ಶ್ರೀಮಾತೆ ನಮ್ಮೊಡನೆ ಸ್ವಲ್ಪ ದೂರದವರೆಗೆ ಬಂದು ನಾವು ಕಣ್ಮರೆ

ಯಾಗುವವರೆಗೂ ನನ್ನನ್ನು ನೋಡುತ್ತಿದ್ದರು. ಕಾಮಾರ ಪುಕೂರವನ್ನು ಸೇರುವವರೆಗೂ ನಾನು ಇನ್ನೂ ಅಳುತ್ತಲಿದ್ದೆ.

ಕಾಮಾರಪುಕೂರವನ್ನು ಸೇರಿದ ಮೇಲೆ ಶ್ರೀಮಾತೆ ಇರುತ್ತಿದ್ದ ಕೋಣೆಯನ್ನು ನೋಡಿದೆವು. ಅಲ್ಲಿ ಶ್ರೀಮಾತೆಯ ಭಾವಚಿತ್ರವಿತ್ತು. ಅದನ್ನು ನೋಡಿದೊಡನೆ ಪುನಃ ಶ್ರೀಮಾತೆಯುವರನ್ನು ಕಾಣಲು ಮನ ಹಾತೊರೆಯಿತು.

ಮಾರನೆಯ ದಿನ ಮಹೇಂದ್ರನಾಥಗುಪ್ತ ಮತ್ತು ಪ್ರಬೋಧ ಬಾಬು ಕಾಮಾರ ಪುಕೂರದಲ್ಲಿ ಕೆಲವು ಗಂಟೆಗಳಿದ್ದು ನಂತರ ಜಯರಾಮ ವಟಿಗೆ ಹೋದರು. ಸಂಜೆ ಶ್ರೀಮಾತೆಯುವರ ಶಿಷ್ಯರಾದ ಲಲಿತಬಾಬು ಪೇಟ, ಶರಾಯಿ, ವಲ್ಲಿ ಧರಿಸಿ ಅಲ್ಲಿಗೆ ಬಂದರು. ಕಲಿಕತ್ತೆಗೆ ನಾನೊಬ್ಬನೇ ಹೋಗಲು ಕಷ್ಟವಾಗುವುದರಿಂದ ಕೆಲವು ಭಕ್ತರು ನಾನು ಲಲಿತಬಾಬು ವಿನೊಡನೆ ಅವನು ಜಯರಾಮವಟಿಯಿಂದ ಹಿಂತಿರುಗಿದಮೇಲೆ ಹೋಗ ಬೇಕೆಂದು ಸೂಚಿಸಿದರು. ಆದ್ದರಿಂದ ಮತ್ತೊಮ್ಮೆ ಜಯರಾಮವಟಿಗೆ ಹಿಂತಿರುಗಿ 'ನಾನು ಪುನಃ ಬಂದಿರುವೆ' ಎಂದು ಶ್ರೀಮಾತೆಗೆ ಹೇಳಿದೆ. ಶ್ರೀಮಾತೆಗೆ ಬಹುಸಂತೋಷವಾಗಿ 'ಬಹಳ ಚಲೋ ಆಯಿತು. ನೀನು ಲಲಿತನೊಡನೆ ಕಲಿಕತ್ತೆಗೆ ಹೋಗುವೆಯಂತೆ' ಎಂದರು.

ಶಿವರಾತ್ರಿ ಹಬ್ಬವಾದ ಮೇಲೆ ಭಕ್ತರೆಲ್ಲಾ ಊಟಕ್ಕೆ ಕುಳಿತರು. ಎಲೆಯ ಮೇಲೆ ಅವರಿಗೆ ಮೊದಲು ಪ್ರಸಾದವನ್ನು ಬಡಿಸಲಾಯಿತು. ನಾನು ಅದೇನೆಂದು ಕೇಳಿದೆ. ಅದು ಶ್ರೀಮಾತೆಯ ಪ್ರಸಾದವೆಂದು ಹೇಳಿದರು. ಸ್ವಲ್ಪ ಭಾಗವನ್ನು ನಾನೂ ತೆಗೆದುಕೊಂಡೆ. ಸ್ವಲ್ಪ ಹೊತ್ತಿನಮೇಲೆ ಶ್ರೀಮಾತೆಗೆ 'ಎಲ್ಲರೂ ನಿಮ್ಮ ಪ್ರಸಾದವನ್ನು ಸಂತೋಷ ದಿಂದ ಉಂಡರು. ನನಗೆ ಮಾತ್ರ ನೀವೆಂದೂ ಕೊಡಲಿಲ್ಲ' ಎಂದೆ. ಶ್ರೀಮಾತೆ, 'ಮಗು, ನೀನಾವಾಗಲೂ ಕೇಳಲಿಲ್ಲ. ನಾನು ಹೇಗೆ ಅದನ್ನು ಹೇಳಲಿ!' ಎಂದರು. ಎಷ್ಟೊಂದು ದೀನಭಾವ ಎಂದು ನಾನು ಯೋಚಿಸಿದೆ.

ಮರುದಿನ ಲಲಿತಬಾಬು ಪಲ್ಲಕ್ಕಿಯಲ್ಲಿ ರಾಧುವಿನ ಒಡವೆ ಗಳನ್ನು ತರಲು ಅವಳ ಅಜ್ಜನ ಮನೆಗೆ ಹೋದರು. ಲಲಿತಬಾಬು ಒಬ್ಬ ದೊಡ್ಡ ಗವರ್ನ್ಮೆಂಟ್ ಆಫೀಸರ ಹಾಗೆ ಕಲ್ಕತ್ತೆಯ ಒಬ್ಬ ದೊಡ್ಡ ಪೋಲೀಸ್ ಅಧಿಕಾರಿಯಿಂದ ಪತ್ರ ತೆಗೆದುಕೊಂಡು ಬಂದಿರುವಂತೆ

ನಟಿಸಿದರು. ಶ್ರೀಮಾತೆ ಮಹೇಂದ್ರನಾಥಗುಪ್ತರನ್ನು ಜೊತೆಯಲ್ಲಿ ಕಳುಹಿಸಿದರು. ಕಾರಣ, ಲಲಿತಬಾಬುವಿಗೆ ಇನ್ನೂ ಚಿಕ್ಕವಯಸ್ಸು; ಒಡವೆಗಳು ದೊರಕದಿದ್ದರೆ, ಆ ವೃದ್ಧ ಬ್ರಾಹ್ಮಣನಿಗೆ ಅವಮಾನಕರವಾದ ಮಾತುಗಳನ್ನಾಡಬಹುದೆಂದು. ಅಂತೂ ಮಧ್ಯಾಹ್ನದ ವೇಳೆಗೆ ಜಯರಾಮವಟಿಗೆ ಅಜ್ಜನನ್ನು ಒಡವೆಗಳೊಡನೆ ಕರೆತಂದಾಯಿತು. ಬೆಳಗಿನಝಾವೆ ಎರಡು ಗಂಟೆಗೆ ಶ್ರೀಮಾತೆ ನಿದ್ರಿಸುತ್ತಿಲ್ಲವೆಂದು ನನಗೆ ತಿಳಿಯಿತು. ಅವರು ಬಹಳ ಹೆದರಿದ್ದಂತೆ ಕಾಣುತ್ತಿದ್ದರು. ನಾನು ಮತ್ತು ಮಹೇಂದ್ರನಾಥಗುಪ್ತರು ಒಳಗಣಕೋಣೆಗೆ ಹೋಗಿ ನೋಡಿದೆವು. ಎಲ್ಲರೂ ಔಷಧಿಗಾಗಿ ಹುಡುಕುತ್ತಿದ್ದಾಗ ನಾನು ಶ್ರೀಮಾತೆಯವರನ್ನು ಅವರ ನೋವಿಗೆ ಕಾರಣ ಕೇಳಿದೆ. "ಒಡವೆಗಳನ್ನು ಅವರು ತರಲು ಹೋದಮೇಲೆ ಅವರೆಲ್ಲ ಆ ವಯಸ್ಸಾದ ಬ್ರಾಹ್ಮಣನನ್ನು ಎಲ್ಲಿ ಅವಮಾನಮಾಡುವರೋ ಎಂದು ನನಗೆ ಬಹಳ ಯೋಚನೆಯಾಗಿತ್ತು. ಇದರಿಂದ ನನಗೆ ಹೀಗಾಗಿದೆ" ಎಂದರು. ಈ ಎಲ್ಲಾ ತೊಂದರೆಗಳಿಗೂ ಮೂಲಕಾರಣನಾದ ಆ ಬ್ರಾಹ್ಮಣನಮೇಲೂ ಶ್ರೀಮಾತೆಗೆ ಎಷ್ಟೊಂದು ಅನುತಾಪ ಎಂದು ನನಗೆ ಬಹಳ ಆಶ್ಚರ್ಯವಾಯಿತು.

ಮರುದಿನ ಮಧ್ಯಾಹ್ನ ನಾನು ಆ ಗುಂಪಿನೊಡನೆ ಕಲ್ಕತ್ತೆಗೆ ಹೊರಟೆ. ಶ್ರೀಮಾತೆ ಲಲಿತಬಾಬುವಿನೊಡನೆ, "ಆತನಿಗೆ ದೇವರಲ್ಲಿ ಬಹು ಭಕ್ತಿ. ಅವನನ್ನು ನಿನ್ನೊಡನೆ ದಯವಿಟ್ಟು ಕರೆದುಕೊಂಡು ಹೋಗು" ಎಂದಿದ್ದರು. ನಾವೆಲ್ಲಾ ಶ್ರೀಮಾತೆಗೆ ವಂದಿಸಿದೆವು. ಶ್ರೀಮಾತೆಗೆ ಕಣ್ಣೀರು ಉಕ್ಕಿಬಂತು. ಮನೆಯ ಬಾಗಿಲಿನವರೆಗೂ ಅವರು ಅಳುತ್ತಾ ಬಂದು ನಮ್ಮನ್ನು ಬೀಳ್ಕೊಟ್ಟರು. ಕಲ್ಕತ್ತೆಗೆ ಹೋಗುವ ದಾರಿಯಲ್ಲಿ ವಿಷ್ಣುಪುರದಲ್ಲಿ ಜಗನ್ಮಾತೆಯ ಮೃಣ್ಮಯಿ ಎಂಬ ವಿಗ್ರಹವನ್ನು ಮಹೇಂದ್ರನಾಥಗುಪ್ತ, ಪ್ರಬೋಧಬಾಬು ಮತ್ತು ಇತರರೂ ಸಂದರ್ಶಿಸಿದರು. ಆದರೆ ಲಲಿತಬಾಬು ಮತ್ತು ನಾನು ಮಾತ್ರ ಗಾಡಿಯಲ್ಲೇ ಕುಳಿತಿದ್ದೆವು. ಮಹೇಂದ್ರನಾಥರು ಪ್ರಬೋಧಬಾಬುವಿನೊಡನೆ ನಮ್ಮನ್ನೂ ಬರುವಂತೆ ಹೇಳಿ ಕಳುಹಿಸಿದರು. ಆದರೆ ಚಿನ್ಮಯಿ (ಜೀವಂತ ತಾಯಿ) ಯನ್ನು ನೋಡಿದಮೇಲೆ ಆ ಮೃಣ್ಮಯಿ (ಮಣ್ಣಿನ ವಿಗ್ರಹ) ಯನ್ನು ನೋಡಲು ನಾವು ಇಚ್ಛಿಸಡಲಿಲ್ಲ. ನಾನು ಬೇಲೂರು ಮಠಕ್ಕೆ ಬಂದು ಶ್ರೀರಾಮಕೃಷ್ಣಜನ್ಮೋತ್ಸವವನ್ನು ನೋಡಿಕೊಂಡು

ಮನೆಗೆ ಹಿಂತಿರುಗಿದೆ.

ಉದ್ಬೋಧನ ಆಫೀಸು, ೧೯೧೯ ನೇ ಇಸವಿ.

ಶ್ರೀಮಾತೆಯವರನ್ನು ನಾನು ಪುನಃ ಮುಂದಿನ ಚಳಿಗಾಲ ಕಲ್ಕತ್ತೆಯ ಬಲರಾಮಬೋಸರ ಮನೆಯಲ್ಲಿ ಕಂಡೆ. ಮುಂದೆ ಅವರನ್ನು ನೋಡುವಾಗ ಅವರು ಕಲ್ಕತ್ತೆಯ ಹೊಸ ಮನೆಗೆ [ಉದ್ಬೋಧನ ಆಫೀಸು] ಬದಲಾಯಿಸಿದ್ದರು. ಮನೆಯನ್ನು ಪ್ರವೇಶಿಸಿದ ಕೂಡಲೇ ನಾನು ಡಾಕ್ಟರ್ ಕಂಜೀಲಾಲರು ಒಂದು ವರ್ತಮಾನ ಪತ್ರಿಕೆ ಓದುತ್ತಿರುವುದನ್ನು ಕಂಡೆ. ನನ್ನ ಪ್ರಶ್ನೆಗೆ ಅವರು, "ಶ್ರೀಮಾತೆಯವರಿಗೆ ಸಿಡುಬು ತಗುಲಿತ್ತು. ಇನ್ನೂ ಪೂರ್ಣ ಗುಣವಾಗಿಲ್ಲ. ನೀನು ಇನ್ನೆರಡು ವಾರ ಬಿಟ್ಟು ನೋಡಬಹುದು" ಎಂದರು. ಅವರಿಗೆ ಖಾಯಿಲೆಯಾದ ಸಮಾಚಾರವೇ ನನಗೆ ತಿಳಿದಿರಲಿಲ್ಲ. ಸ್ವಾಮಿ ಶಾರದಾನಂದರು, "ನಾಳೆ ಬಾ. ನೀನು ಅವರನ್ನು ನೋಡಬಹುದು. ಇಲ್ಲೇ ಊಟಕ್ಕೆ ಇರುವೆಯಂತೆ" ಎಂದರು. ನಾನು ಮರುದಿನ ಬಂದಾಗ ಶ್ರೀಮಾತೆ ಸಿಡುಬಿನ ಕಲೆಯನ್ನು ನನಗೆ ತೋರಿಸಿದರು. ಸುಮಾರಾಗಿ ಎಲ್ಲವೂ ಅಳಿಸಿಹೋಗಿತ್ತು. ಅವರ ಆಶೀರ್ವಾದದಿಂದ ಮತ್ತು ಶಾರದಾನಂದರ ಸಹಾಯದಿಂದ ನನಗೆ ಬೇಲೂರು ಮಠದಲ್ಲಿರಲು ಸಾಧ್ಯವಾಯಿತು. ಇದನ್ನು ಕೇಳಿದ ಶ್ರೀಮಾತೆ, "ಅದು ಬಹಳ ಒಳ್ಳೆಯದು. ಆತ ಸನ್ಯಾಸಿ ಜೀವನದ ಆಕರ್ಷಣೆಗೆ ಬಲಿಯಾಗಿದ್ದಾನೆ. ಬೇಲೂರು ಮಠದಲ್ಲೇ ವಾಸಿಸು. ನಿನಗೆ ಗುರು ಮಹಾರಾಜರಲ್ಲಿ ಪ್ರೀತಿಯುಂಟಾಗಲಿ. ನಾನು ನಿನಗೆ ಆಶೀರ್ವದಿಸುವೆ" ಎಂದರು.

ನಾನು ಶ್ರೀಮಾತೆಯವರಿಗೆ ಆಗಾಗ್ಗೆ ಬೇಲೂರು ಮಠದಿಂದ ಹಾಲು ತೆಗೆದುಕೊಂಡು ಹೋಗುತ್ತಿದ್ದೆ. ಶ್ರೀಮಾತೆಗೆ ವಂದಿಸುವ ಸುಯೋಗ ಸಿಗುತ್ತಿತ್ತು. ಒಂದು ದಿನ ನಾನು ಬಂದಾಗ ಶ್ರೀಮಾತೆ ನಳಿನಿಯೊಡನೆ ಎಲೆಯಡಿಕೆಯನ್ನು ಸಿದ್ಧಪಡಿಸುತ್ತಿದ್ದರು. ನಳಿನಿ ನನ್ನನ್ನು ನೋಡಿದೊಡನೆ ಹೋಗಲು ಎದ್ದಳು. ಶ್ರೀಮಾತೆ ಅವಳನ್ನು ತಡೆದು, "ಹೋಗಬೇಡ, ಅವನು ನನ್ನ ಮಗ. ಕುಳಿತುಕೊ" ಎಂದರು. ಮಾತಿನಮಧ್ಯೆ ಶ್ರೀಮಾತೆ ಮಾಕುವಿನ (ಇನ್ನೊಬ್ಬ ಅಣ್ಣನ ಮಗಳು) ಪತಿಯ ವಿಚಾರ ಮಾತಾಡುತ್ತಾ "ನಾನು ಅವರ ವಿಚಾರಕ್ಕೆ ಪ್ರತ್ಯೇಕ ಗಮನಕೊಡಬೇಕಾಯಿತು. ಇಲ್ಲದಿದ್ದರೆ ಅವರು ಅಸಮಾ

ಧ್ಯಾನಪಟ್ಟು ಗೊಣಗುತ್ತಿದ್ದರು. ಆದರೆ ನೀವೆಲ್ಲಾ ನನ್ನ ಮಕ್ಕಳು ನಾನೇನುಮಾಡಿದರೂ ನಿಮಗೆ ತೃಪ್ತಿ ಇದೆ. ನಾನು ನಿಮ್ಮ ಕಡೆ ಗಮನ ಕೊಡದಿದ್ದರೂ ನೀವೇನೂ ತಿಳಿದುಕೊಳ್ಳುವುದಿಲ್ಲ. ಆದರೆ ಆ ಬಂಧು ಗಳು ಮಾತ್ರ ಅವರಿಗೆ ಎಲ್ಲವನ್ನು ಕೊಡದಿದ್ದರೆ ಅಥವಾ ಸ್ವಲ್ಪ ಗಮನ ಕೊಡದಿದ್ದರೆ ಸಾಕು ಅಸಮಾಧಾನ ಹೊಂದುತ್ತಾರೆ" ಎಂದರು. ಸ್ವಲ್ಪ ಹೊತ್ತಿನಮೇಲೆ ನಾನು "ಮನಸ್ಸಿನ ಪವಿತ್ರತೆ, ದೇವರಲ್ಲಿ ನಿಜವಾದ ವ್ಯಾಕುಲ ಹೇಗೆ ಹುಟ್ಟುವುದು" ಎಂದು ಕೇಳಿದೆ.

ಶ್ರೀಮಾತೆ :– ಓ! ನಿನಗೆ ಖಂಡಿತ ಇವೆಲ್ಲಾ ಇದೆ. ನೀನು ಗುರು ಮಹಾರಾಜರಲ್ಲಿ ಶರಣಾಗತನಾಗಿರುವೆ. ನೀನು ಎಲ್ಲವನ್ನೂ ಪಡೆಯುವೆ. ಮನಃಪೂರ್ವಕ ಪ್ರಾರ್ಥಿಸು.

ಶಿಷ್ಯ :– ಅದು ನನಗೆ ಮಾಡಲಾಗುತ್ತಿಲ್ಲ. ನನಗಾಗಿ ಪ್ರಾರ್ಥಿಸಿ.

ಶ್ರೀಮಾತೆ:– ನಾನು ಯಾವಾಗಲೂ ರಾಮಕೃಷ್ಣರ ಹತ್ತಿರ ನಿನ್ನ ಮನಸ್ಸು ಪರಿಶುದ್ಧವಾಗುವಂತೆ ಪ್ರಾರ್ಥಿಸುವೆ.

ಶಿಷ್ಯ:– ಹೌದು ತಾಯಿ, ನೀವು ಪ್ರಾರ್ಥಿಸಿದರೆ ನನಗೆ ಎಲ್ಲಾ ಲಭಿಸುವುದು.

ಕೆಲವು ತಿಂಗಳ ನಂತರ ನಾನು ಜಯರಾಮವಟಿಯ ಹತ್ತಿರ ಇರುವ ಘಾಟಾಲ್ ಎಂಬ ಸ್ಥಳಕ್ಕೆ ಅಲ್ಲಿ ಪ್ರವಾಹದ ಅನಾಹುತದಿಂದ ತೊಂದರೆ ಗೊಳಗಾದವರ ಸಹಾಯಕ್ಕೆ ಹೋಗಬೇಕಾಗಿ ಬಂತು. ನಾನು ಮೂರು ದಿನ ರಜೆ ಪಡೆದು ಜಗದ್ಧಾತ್ರಿ ಪೂಜೆಯ ಸಮಯದಲ್ಲಿ ಶ್ರೀಮಾತೆಯವರ ದರ್ಶನವನ್ನು ಜಯರಾಮವಟಿಯಲ್ಲಿ ಪಡೆದೆ. ಅತುಲ ನನ್ನೊಡನೆ ಬಂದಿದ್ದ. ಇದೇ ಆತನಿಗೆ ಶ್ರೀಮಾತೆಯವರ ಪ್ರಥಮ ದರ್ಶನ. ನಾವು ಕಾಮಾರಪುಕುರದ ಮೂಲಕ ಜಯರಾಮವಟಿಗೆ ಹೋದೆವು. ನಾನು ಮನೆ ಸೇರಿದ ಒಡನೆಯೆ ಆಶುಮಹಾರಾಜರು, 'ನೀವು ಬಂದಿದ್ದು ಬಹಳ ಒಳ್ಳೆಯದಾಯಿತು. ಸ್ವಲ್ಪ ದಿನಗಳಿಂದೀಚೆಗೆ ಯಾವ ಶಿಷ್ಯನನ್ನೂ ನೋಡದೆ ಶ್ರೀಮಾತೆ ವ್ಯಾಕುಲದಿಂದಿದ್ದರು' ಎಂದರು. ಶ್ರೀಮಾತೆ ನಮ್ಮನ್ನೂ ಊಟಕ್ಕೆ ನಿಲ್ಲಿಸಿಕೊಂಡು ಹೊಟ್ಟೆತುಂಬ ಭೋಜನ ಮಾಡಿಸಿ ದರು. ಮರುದಿನ ಮುಂಜಾನೆಯೇ ನಾನು ಪರಿಹಾರದ ಕೆಲಸಕ್ಕೆ ಹೊರಡಬೇಕಾಗಿತ್ತು. ಶ್ರೀಮಾತೆಯನ್ನು ಬೀಳ್ಕೊಡುವಾಗ 'ನಾನು ಹೋಗಿ ಬರುವೆ' ಎಂದೆ. ಅತುಲ ಶಾಲೆಯ ಹುಡುಗನಂತೆ 'ದಯ

ವಿಟ್ಟು ನಮ್ಮನ್ನು ನೆನಪಿನಲ್ಲಿಡಿ' ಎಂದ.

ಘಾಟಾಲ್ ಪರಿಹಾರ ಕೆಲಸ ಮುಗಿದ ಕೂಡಲೇ ನಾನು ಜಯರಾಮ ವಟಿಗೆ ಹಿಂತಿರುಗಿದೆ. ಆಗ ಚಳಿಗಾಲ. ಸಂಜೆ ಶ್ರೀಮಾತೆಯುವರ ಮನೆ ಸೇರಿದಾಗ ಶ್ರೀಮಾತೆ ತಮ್ಮ ಕಾಲಿಗೆ ತೈಲ ಹಚ್ಚುತ್ತಾ ವರಾಂಡದಲ್ಲಿ ಕುಳಿತಿರುವುದನ್ನು ಕಂಡೆ. ಅವರು ಮಂಡಿ ನೋವಿನಿಂದ ನರಳುತ್ತಿದ್ದರು.

ಶಿಷ್ಯ:— ಇದು ಯಾವ ಮದ್ದು?

ಶ್ರೀಮಾತೆ:— ಯಾರೋ ಈ ಹಸುರನ್ನು ಸೂಚಿಸಿದರು. ನೀನು ದಿನವೆಲ್ಲಾ ಉಪವಾಸವಿದ್ದೀಯಾ?

ಶಿಷ್ಯ:— ಇಲ್ಲ, ಆದರೆ ನಾನು ಹಾದಿಯಲ್ಲಿ ಏನನ್ನೂ ತೆಗೆದುಕೊಳ್ಳ ಲಿಲ್ಲ.

ಶ್ರೀಮಾತೆ:— ಏನಾದರೂ ಉಪಾಹಾರವನ್ನು ಏಕೆ ತೆಗೆದುಕೊಳ್ಳ ಲಿಲ್ಲ? ಹಾದಿಯಲ್ಲಿ ಅಂಗಡಿಗಳಿತ್ತಲ್ಲ.

ನನ್ನ ಬಳಿ ಒಂದು ರೂಪಾಯಿ ಮಾತ್ರ ಇತ್ತು. ಅದನ್ನು ಬೇಲೂರು ಮಠಕ್ಕೆ ಅರ್ಪಿಸಬೇಕೆಂದಿದ್ದೆ. ಆದರೆ ಅದನ್ನು ನಾನು ಶ್ರೀಮಾತೆಗೆ ಹೇಳಲಿಲ್ಲ. ಶ್ರೀಮಾತೆ ನನಗೆ ಬಿಸಿ ಬಿಸಿ ಅಡಿಗೆ ಬಡಿಸಿದರು. ನಾನು ಸಂತೋಷದಿಂದ ಹೊಟ್ಟೆತುಂಬಾ ಉಂಡೆ. ಶ್ರೀಮಾತೆ ನನಗೆ ಒಂದು ಹೊದಿಕೆಕೊಟ್ಟು ಅದನ್ನು ಉಪಯೋಗಿಸುವಂತೆ ಹೇಳಿದರು. 'ಇದು ಯಾರ ಹೊದಿಕೆ?' ಎಂದು ನಾನು ಕೇಳಿದೆ. 'ಇದು ನನ್ನದೇ. ನಾನೇ ಅದನ್ನು ಉಪಯೋಗಿಸುವೆ' ಎಂದರು ಶ್ರೀಮಾತೆ.

ಮರುದಿನ ಟಪ್ಪಾಲಿನಲ್ಲಿ ಶ್ರೀಮಾತೆಗೆ ನನ್ನ ಸಹೋದರನೊಬ್ಬನಿಂದ ನನ್ನನ್ನು ಮನೆಗೆ ವಾಪಸ್ಸು ಕಳುಹಿಸಲು ಒಪ್ಪಿಸುವಂತೆ ಪತ್ರ ಬಂತು. ಚಿಕ್ಕದಾಗಿದ್ದರೂ ಆ ಪತ್ರ ಒಳ್ಳೆಯ ಶೈಲಿ ಮತ್ತು ಸುಂದರ ಭಾವನೆ ಗಳನ್ನೊಳಗೊಂಡಿತ್ತು. ಶ್ರೀಮಾತೆ: 'ಓ! ಎಂತಹ ಸುಂದರ ಪತ್ರ!' ಎಂದರು. 'ನೀನೇಕೆ ಮನೆಗೆ ಹಿಂತಿರುಗಿ ಹೋಗುವುದಿಲ್ಲ. ಪ್ರಪಂಚ ದಲ್ಲಿರು. ಹಣ ಸಂಪಾದಿಸಿ ಸಂಸಾರ ಮಾಡು' ಎಂದರು. ಶ್ರೀಮಾತೆ ನನ್ನನ್ನು ಪರೀಕ್ಷಿಸುತ್ತಿದ್ದರು. 'ತಾಯಿ, ಅದನ್ನು ಮಾತ್ರ ದಯವಿಟ್ಟು ಹೇಳಬೇಡಿ' ಎಂದೆ.

ನಾನು ಅಳಲು ಪ್ರಾರಂಭಿಸಿದೆ. ಶ್ರೀಮಾತೆ ಆಗ ಕನಿಕರದಿಂದ, 'ಮಗು, ಅಳಬೇಡ. ನೀನು ಜೀವಂತ ದೇವರು. ಯಾರು ಆತನಿಗಾಗಿ

ಎಲ್ಲವನ್ನೂ ತ್ಯಜಿಸಬಲ್ಲರು? ದೇವರಲ್ಲಿ ಶರಣಾದವನಿಗೆ ವಿಧಿ ಬರಹವೂ ಬದಲಾಯಿಸುವುದು. ಅಂತಹ ಮನುಷ್ಯನ ಹಣೆಯಲ್ಲಿ ಬರೆದುದನ್ನು ಬ್ರಹ್ಮನೇ ಬಂದು ಅಳಿಸುವನು. ದೇವರ ಸಾಕ್ಷಾತ್ಕಾರ ಪಡೆದವನು ಏನಾಗುವನು? ಆತನಿಗೆ ಎರಡು ಕೊಂಬು ಬೆಳೆಯುವುದೆ? ಇಲ್ಲ. ಆತನಿಗೆ ನಿತ್ಯಾನಿತ್ಯ ವಿವೇಕಜ್ಞಾನ ಬೆಳೆದು ಆಧ್ಯಾತ್ಮಿಕ ಪ್ರವೃತ್ತಿಯುಂಟಾಗಿ ಜೀವನ ಮರಣಾತೀತ ಸ್ಥಿತಿ ಲಭಿಸುವುದು. ದೇವರನ್ನು ಆತ್ಮದಲ್ಲಿ ಸಾಕ್ಷಾತ್ಕರಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ದೇವರನ್ನು ನೋಡುವುದು ಹೇಗೆ? ದೇವರು ದೈವೋನ್ಮಾದವಿಲ್ಲದವನ ಕೂಡ ಮಾತನಾಡುವನೆ? ದೇವರನ್ನು ಆಧ್ಯಾತ್ಮಿಕ ಭಾವಪ್ರಪಂಚದಲ್ಲಿ ನೋಡುವೆವು, ಮಾತನಾಡುವೆವು, ಆತ್ಮಪೂರ್ವಕವಾದ ಸಂಬಂಧ ಬೆಳೆಸುವೆವು.

ಶಿಷ್ಯ:– ಇಲ್ಲ ತಾಯಿ, ಇದಲ್ಲದೆ ಬೇರೊಂದಿದೆ. ದೇವರ ಪ್ರತ್ಯಕ್ಷ ದರ್ಶನಪಡೆಯಬಹುದು.

ಶ್ರೀಮಾತೆ:– ಅದನ್ನು ನರೇಂದ್ರ [ಸ್ವಾಮಿ ವಿವೇಕಾನಂದ] ಮಾತ್ರ ಪಡೆದ. ನರೇಂದ್ರನ ಮೋಕ್ಷದ ಬೀಗದಕೈಯನ್ನು ಗುರುಮಹಾರಾಜರು ತಮ್ಮಲ್ಲಿಯೇ ಇಟ್ಟುಕೊಂಡಿದ್ದರು. ಗುರುದೇವನಲ್ಲಿ ಪ್ರಾರ್ಥನೆ, ಆತನ ನಾಮೋಚ್ಚಾರಣೆ ಮತ್ತು ಧ್ಯಾನ ಇದಲ್ಲದೆ ಆಧ್ಯಾತ್ಮಿಕ ಜೀವನ ಎಂದರೆ ಮತ್ತೇನು? [ನಗುತ್ತಾ] ಮತ್ತು ಗುರುಮಹಾರಾಜರು? ಅವರಲ್ಲಿ ಮತ್ತೇನು ಇತ್ತು? ಅವರು ಯಾವಾಗಲೂ ನಮ್ಮವರೇ.

ಶಿಷ್ಯ:– ತಾಯಿ, ನನಗೆ ಸತ್ಯ ಸಾಕ್ಷಾತ್ಕಾರವಾಗುವಂತೆ ಅನುಗ್ರಹಿಸಿ, ಶ್ರೀರಾಮಕೃಷ್ಣರನ್ನು ಕೇವಲ ನನ್ನವರೆಂದು ನೋಡುವಂತೆ ಮಾಡಿ.

ಶ್ರೀಮಾತೆ:– ನಾನು ಪುನಃ ಹೇಳಬೇಕೆ? (ದೃಢವಾಗಿ) ನೀನು ಖಂಡಿತ ಸಾಕ್ಷಾತ್ಕಾರಪಡೆವೆ. ಇದು ಸತ್ಯ.

ಮರುದಿನ ಸಂಜೆ ನಾನು ಶ್ರೀಮಾತೆಯವರೊಡನೆ ಅವರ ಕೊಠಡಿಯಲ್ಲಿ ಮಾತನಾಡುತ್ತಿದ್ದೆ. ಶ್ರೀಮಾತೆ ಹಾಸಿಗೆಯಮೇಲೆ ಮಲಗಿದ್ದರು. ವೇದಾಂತದ ವಿಚಾರ ಬಂತು. ನಾನು "ನಾಮರೂಪ ಇವೆರಡೇ ಈ ಜಗತ್ತಿನಲ್ಲಿರುವುದು. ವಸ್ತು ಇದೆ ಎಂದು ಪ್ರಮಾಣಿಸಲಾಗುವುದಿಲ್ಲ. ಆದ್ದರಿಂದ ದೇವರು ಮತ್ತು ಅಂತಹ ಇತರ ವಸ್ತುಗಳು ಇಲ್ಲವೆಂದು ಸಿದ್ಧಾಂತವಾಗುತ್ತದೆ" ಎಂದೆ.

ನನ್ನ ಭಾವನೆ ಏನಿತ್ತೆಂದರೆ ಗುರುಮಹಾರಾಜರು ಮತ್ತು ಶ್ರೀಮಾತೆ ಕೂಡ ಮಾಯೆ ಎಂದು. ಆಕೆಗೆ ತಕ್ಷಣ ನನ್ನ ಯೋಚನೆ ಅರ್ಥವಾಗಿ, "ನರೇಂದ್ರ ಒಮ್ಮೆ ನನಗೆ ಹೇಳಿದ 'ತಾಯಿ, ಯಾವಜ್ಞಾನ ಗುರುನಿನ ಪಾದಪದ್ಮವನ್ನು ವಿವರಿಸುವುದಿಲ್ಲವೊ ಅದು ಅಜ್ಞಾನವಲ್ಲದೆ ಬೇರೆಯಲ್ಲ. ಗುರುವಿಲ್ಲವೆಂದು ಹೇಳುವ ಜ್ಞಾನಕ್ಕೆ ಬೆಲೆಯೆಲ್ಲಿದೆ?' ಈ ಒಣತರ್ಕ, ಹುಚ್ಚನ್ನು ಬಿಡು. ಯಾರಿಗೆ ಬುದ್ಧಿಯ ಮೂಲಕ ದೇವರು ಲಭಿಸಿರುವನು? ಶುಕ, ವ್ಯಾಸ, ಶಿವನಂಥಹವರು ಕೂಡ ದೊಡ್ಡ ಇರುವೆಗೆ ಸಮಾನವಾಗಬಹುದು.

ಶಿಷ್ಯ:—ನನಗೆ ತಿಳಿದುಕೊಳ್ಳಲು ಇಚ್ಛೆ. ನನಗೆ ಕೊಂಚ ಅರ್ಥವಾಗುವುದು. ಯಾವರೀತಿ ತರ್ಕವನ್ನು ನಿಲ್ಲಿಸಲು ಸಾಧ್ಯ?

ಶ್ರೀಮಾತೆ:— ಸಂಪೂರ್ಣ ಜ್ಞಾನ ಲಭಿಸುವವರೆಗೆ ತರ್ಕ ಮಾಯವಾಗುವುದಿಲ್ಲ.

ಶಿಷ್ಯ:— ತಾಯಿ, ದೇವರು ಚಿಕ್ಕದು ದೊಡ್ಡದು ಮುಂತಾದ ಅಸಂಖ್ಯಾತ ಪ್ರಾಣಿಗಳನ್ನು ಒಂದೇ ಬಾರಿ ಸೃಷ್ಟಿಸಿದನೆ?

ಮಾತೆ:— ಏನು? ದೇವರು ಪ್ರತಿಯೊಬ್ಬರನ್ನೂ ಒಬ್ಬ ಚಿತ್ರಗಾರನು ತನ್ನ ಕುಂಚದಿಂದ ತಲೆ ಕಣ್ಣು ಮೂಗು ಎಲ್ಲವನ್ನೂ ಬರೆಯುವಂತೆ ಒಂದೊಂದಾಗಿ ಸೃಷ್ಟಿಸಿದನೆ? ಅಥವಾ ಮಣ್ಣಿನಗೊಂಬೆ ತಯಾರುಮಾಡುವವನು ಒಂದೊಂದು ಅಂಗವನ್ನೂ ತಿದ್ದಿ ಗೊಂಬೆಯನ್ನು ಸೃಷ್ಟಿಸುವಂತೆ ಮಾಡಿದನೊ? ಇಲ್ಲ. ಅದು ಹಾಗಿಲ್ಲ. ದೇವರಿಗೆ ಅಮಾನುಷ ಶಕ್ತಿ ಇದೆ. ಅವನ ಇಚ್ಛಾಮಾತ್ರದಿಂದ ಈ ಪ್ರಪಂಚವೆಲ್ಲಾ ಸೃಷ್ಟಿಯಾಗುವುದು. ಆತನು ಒಮ್ಮೆ 'ಬೇಡ' ಎಂದರೆ ಅದೆಲ್ಲಾ ಮಾಯವಾಗುವುದು. ಇಲ್ಲಿರುವುದೆಲ್ಲಾ ಒಂದೇ ಬಾರಿಗೆ ಸೃಷ್ಟಿಯಾದುವು; ಒಂದೊಂದಾಗಿ ಅಲ್ಲ.

ಆ ಕೊಠಡಿಯಲ್ಲಿ ಅನೇಕ ಇರುವೆಗಳು ಆಹಾರಕ್ಕಾಗಿ ಓಡಿಯಾಡುತ್ತಿದ್ದುವು. "ಈ ಇರುವೆಯೊಂದೇಕೆ ಹಿಂದೆ ಬಿತ್ತು?" ಎಂದು ನಾನು ಕೇಳಿದೆ. 'ಈ ಇರುವೆ ಮನುಷ್ಯನಾಗಲು ಯುಗಗಳು ಬೇಕು' ಎಂದೆ.

ಶ್ರೀಮಾತೆ:— ಹೌದು ಅದು ನಿಜ. ಎಲ್ಲರೂ ಕಾಲಚಕ್ರದ ಅಂತ್ಯದಲ್ಲಿ ಗಾಢ ನಿದ್ರೆಯಿಂದ ಏಳುವಂತೆ ಜಾಗ್ರತರಾಗುವರು.

ನಾನು ಜಪ ಮತ್ತು ಆಧ್ಯಾತ್ಮಿಕ ಸಾಧನೆಯ ವಿಚಾರವಾಗಿ ಕೇಳಿದೆ. ಶ್ರೀಮಾತೆ "ಈ ಆಧ್ಯಾತ್ಮಿಕ ಸಾಧನೆಯಿಂದ ಪೂರ್ವಜನ್ಮದ ಕರ್ಮ

ಬಂಧನ ಕತ್ತರಿಸಲ್ಪಡುವುದು. ಆದರೆ ದೇವರ ಸಾಕ್ಷಾತ್ಕಾರವಾಗಬೇಕಾದರೆ ಭಗವಂತನಲ್ಲಿ ಪ್ರೇಮಭಕ್ತಿಯಿಲ್ಲದೆ ಅಸಾಧ್ಯ. ಜಪ ಮತ್ತು ಸಾಧನೆಯ ಮಹತ್ವವೇನೆಂದು ಗೊತ್ತೆ? ಇವುಗಳಿಂದ ಇಂದ್ರಿಯಾಸಕ್ತಿ ಕಡಿಮೆಯಾಗುವುದು"

ಲಲಿತಬಾಬುವಿಗೆ ಬಹಳ ಖಾಯಿಲೆಯಾಗಿತ್ತು. ಆ ವಿಚಾರ ಮಾತನಾಡುತ್ತಾ, ಶ್ರೀಮಾತೆ 'ಲಲಿತ ನನಗೆ ಬಹಳ ಹಣ ಸಹಾಯ ಮಾಡುತ್ತಿದ್ದ. ಅವನು ನನ್ನನ್ನು ಗಾಡಿಯಲ್ಲಿ ಕರೆದೊಯ್ಯುತ್ತಿದ್ದ. ಜಯರಾಮವಟಿ, ಕಾಮಾರಪುಕೂರದ ದೇವಸ್ಥಾನಗಳಿಗೆ ಅವನು ಬಹು ಹಣ ಸಹಾಯ ಮಾಡಿದ್ದಾನೆ. ನನ್ನ ಲಲಿತನಿಗೆ ಲಕ್ಷರೂಪಾಯಿ ಬೆಲೆಯ ಹೃದಯವಿದೆ. ಎಷ್ಟೋ ಮಂದಿ ಹಣವಂತರಾಗಿದ್ದರೂ ಜಿಪುಣರು. ಐಶ್ವರ್ಯವಂತರು ಭಗವದ್ಭಕ್ತರನ್ನು ಆ ಹಣದಿಂದ ಸೇವಿಸುವುದರ ಮೂಲಕ ದೇವರನ್ನು ಸೇವಿಸಬೇಕು. ಬಡವರು ದೇವರ ನಾಮೋಚ್ಚಾರಣೆಯಿಂದ ದೇವರನ್ನು ಪ್ರಾರ್ಥಿಸಬೇಕು.'

ಪ್ರೇಮದ ತನ್ಮಯಾವಸ್ಥೆಯ ವಿಚಾರ ಮಾತಾಡುತ್ತಾ, ಶ್ರೀಮಾತೆ, 'ಬೃಂದಾವನದ ಗೋಪಾಲಕರು ಜಪಧ್ಯಾನದ ಮೂಲಕ ಶ್ರೀಕೃಷ್ಣನನ್ನು ತಮ್ಮವನನ್ನಾಗಿ ಮಾಡಿಕೊಂಡರೆ? ಅವರು ಆನಂದೋನ್ಮಾದ ಪ್ರೇಮದಿಂದ ಅವನನ್ನು ಪಡೆದರು. ನಿಕಟ ಸ್ನೇಹಿತನೊಂದಿಗೆ ಹೇಳುವಂತೆ ಅವರು ಕೃಷ್ಣನನ್ನು, 'ಇಲ್ಲಿಬಾ, ಓ! ಕೃಷ್ಣಾ, ಇದನ್ನು ತಿನ್ನು. ಅದನ್ನು ತೆಗೆದುಕೊ' ಎನ್ನುತ್ತಿದ್ದರು.

ಶಿಷ್ಯ :– ಭಗವಂತನ ಪ್ರೀತಿ ಕಣ್ಣಾರೆ ಕಾಣದಿದ್ದರೆ ಹೇಗೆ ಅವನಲ್ಲಿ ವ್ಯಾಕುಲ ಹುಟ್ಟುವುದು?

ಶ್ರೀಮಾತೆ :– ಹೌದು, ನೀನು ಹಾಗೂ ಮಾಡಬಹುದು. ಇದಕ್ಕೆ ದೇವರ ಕೃಪೆಬೇಕು.

ಜಯರಾಮವಟಿ, ಡಿಸೆಂಬರ್, ೧೯೧೯

ಬೆಳಗ್ಗೆ ಒಂಭತ್ತು ಘಂಟೆ ಸಮಯ. ಶ್ರೀಮಾತೆಯವರನ್ನು ನೋಡಲು ಹೋದಾಗ ಅವರು ಎಲೆ ಅಡಿಕೆ ಸಿದ್ಧಪಡಿಸುತ್ತಿದ್ದರು. ಸಂಭಾಷಣೆ ಪ್ರಾರಂಭವಾಯಿತು.

ಶಿಷ್ಯ :– ತಾಯಿ, ನಾನು ಎಷ್ಟೋ ನೋಡಿರುವೆ, ಕೇಳಿರುವೆ! ಆದರೂ ನನಗೆ ನಿಮ್ಮನ್ನು ನನ್ನ 'ಸ್ವಂತ ತಾಯಿ' ಎಂದು ಭಾವಿಸಲಾಗಿಲ್ಲ.

ಶ್ರೀಮಾತೆ:–ಹಾಗಿಲ್ಲದಿದ್ದಲ್ಲಿ ನೀನೇಕೆ ಇಷ್ಟು ಬಾರಿ ಇಲ್ಲಿಗೆ ಬರುವೆ. ಕ್ರಮೇಣ ನಿನ್ನ 'ಸ್ವಂತತಾಯಿ'ಯನ್ನು ನೀನೇ ಅರಿಯುವೆ.

ಸ್ವಲ್ಪಹೊತ್ತಿನ ಮೇಲೆ ನನ್ನ ಸಹೋದರರು ತಂದೆತಾಯಿಗಳ ವಿಚಾರ ಮಾತನಾಡುತ್ತಾ, ನಾನು 'ನನ್ನ ಮಾತಾಪಿತೃಗಳು ನನ್ನನ್ನು ಸಾಕಿದರು. ಈಗ ಸತ್ತಮೇಲೆ ಅವರೆಲ್ಲಿರುವರು, ಹೇಗೆ ಜೀವಿಸುತ್ತಿರುವರು ಎಂದು ನನಗೆ ಗೊತ್ತಿಲ್ಲ. ನನ್ನ ಸಹೋದರರೂ ಕೂಡ ಒಳ್ಳೆಯ ಸಂಸ್ಕಾರ ಹೊಂದುವಂತೆ ಆಶೀರ್ವದಿಸಿ.'

ಶ್ರೀಮಾತೆ:– ಮುಕ್ಕಾಲು ಪಾಲು ಜನರಿಗೆ ದೇವರು ಬೇಕೇನು? ಈ ಸಂಸಾರದಲ್ಲೇ ಎಷ್ಟು ಮಂದಿ ಇದ್ದಾರೆ ನೋಡು. ಅವರೆಲ್ಲರಿಗೂ ದೇವರು ಬೇಕೆ?

ಕೆಲವು ನಿಮಿಷಗಳ ತರುವಾಯ ಶ್ರೀಮಾತೆ, 'ಯೋಚನೆ ಪಡಬೇಡ. ನೀನು ಬ್ರಹ್ಮಚಾರಿಯಾಗಿರುವವರೆಗೂ ಏನು ಭಯ? ನೀನು ಎಲ್ಲಿದ್ದರೂ ಬಂಧನ ರಹಿತನಾಗಿರುವೆ' ಎಂದರು.

ಶಿಷ್ಯ:– ತಾಯಿ, ನಾನು ಹೆದರುವೆ.

ಶ್ರೀಮಾತೆ:– ಬೇಡ, ಹೆದರಿಕೆ ಬೇಡ. ಎಲ್ಲ ಗುರುದೇವನ ಇಚ್ಛೆಯಿದ್ದಂತಾಗುವುದು.

ಶಿಷ್ಯ:– ಮನಸ್ಸೇ ಎಲ್ಲಕ್ಕೂ ಮೂಲ. ಇದೊಂದು ಪರಿಶುದ್ಧವಾಗಿದ್ದರೆ ನಾನೆಲ್ಲಿದ್ದರೂ ಏನೂ ಆಗುವುದಿಲ್ಲ. ತಾಯಿ, ನನ್ನ ಮನಸ್ಸು ಯಾವಾಗಲೂ ಪವಿತ್ರವಾಗಿರುವಂತೆ ಅನುಗ್ರಹಿಸಿ.

ಶ್ರೀಮಾತೆ:– ಹಾಗೇ ಆಗಲಿ.

ಅಂದು ಶ್ರೀಮಾತೆಯವರ ಜನ್ಮದಿನ. ಕೆಲವುದಿನಗಳ ಹಿಂದೆ ಪ್ರಬೋಧಬಾಬು ಜಯರಾಮವಟಿಗೆ ಬಂದು ಶ್ರೀಮಾತೆಯವರ ಸಹೋದರರಿಗೆ ಶ್ರೀಮಾತೆಯವರ ಜನ್ಮದಿನದ ಪ್ರತ್ಯೇಕ ಪೂಜೆಗಾಗಿ ಐದುರೂಪಾಯಿಗಳನ್ನು ಕೊಟ್ಟಿದ್ದರು. ಶ್ರೀಮಾತೆ ಅವರಿಗೆ ಹೇಳಿದರು, 'ನೀವು ಇಂದು ವಿಶೇಷವೇನನ್ನೂ ಮಾಡಬೇಕಾದ್ದಿಲ್ಲ. ನಾನು ಹೊಸಬಟ್ಟೆ ಧರಿಸುವೆ. ಗುರುಮಹಾರಾಜರಿಗೆ ಮಿಠಾಯಿಯನ್ನು ಅರ್ಪಿಸಿ ಆ ಪ್ರಸಾದ ಸ್ವೀಕರಿಸುವೆ. ಈ ಸಂದರ್ಭದಲ್ಲಿ ಇಷ್ಟೇ ಸಾಕು' ಎಂದರು.

ಮಂದಿರದಲ್ಲಿ ಪೂಜೆಯಾದ ನಂತರ ಶ್ರೀಮಾತೆ ಕುರ್ಚಿಯ ಮೇಲೆ ಕುಳಿತಿದ್ದರು. ಹೊಸ ಸೀರೆ ಧರಿಸಿದ್ದರು. ಪ್ರಬೋಧಬಾಬು ಸ್ವಲ್ಪ

ಪುಷ್ಪಗಳನ್ನು ಶ್ರೀಮಾತೆಯವರ ಪಾದಗಳಿಗರ್ಪಿಸಿದರು. ನಾನು ವರಾಂಡದ ಬಾಗಿಲಿನಲ್ಲಿ ನಿಂತಿದ್ದೆ. ಶ್ರೀಮಾತೆ 'ಏನು? ನೀನು ಕೆಲವು ಹೂಗಳನ್ನರ್ಪಿಸುವುದಿಲ್ಲವೇನು? ಇಲ್ಲಿದೆ, ತೆಗೆದುಕೊ' ಎಂದರು. ಆಗ ನಾನು ಪುಷ್ಪಗಳಿಂದ ಶ್ರೀಮಾತೆಯವರ ಪಾದಗಳನ್ನು ಪೂಜಿಸಿದೆ. ಮಧ್ಯಾಹ್ನ ನಮಗೆಲ್ಲಾ ಪುಷ್ಕಳ ಭೋಜನವಾಯಿತು. ಪ್ರಬೋಧಬಾಬು ಕಲಿಕತ್ತೆಗೆ ತೆರಳಿದರು. ನಾನು ಅಸ್ವಸ್ಥನಾಗಿದ್ದ ಕಾರಣ ಜಯರಾಮ ವಟಿಯಲ್ಲೇ ಉಳಿದೆ.

ಡಿಸೆಂಬರ್, ೧೯೦೯

ಶ್ರೀಮಾತೆ:- ಯಾರಿಗಾದರೂ ದೇವರನ್ನು ಬಂಧಿಸಲು ಸಾಧ್ಯವೆ? ತಾಯಿ ಯಶೋದೆ ಕೃಷ್ಣನನ್ನು ಕಟ್ಟಿಹಾಕುತ್ತಿದ್ದಳು. ಏಕೆಂದರೆ ಕೃಷ್ಣನೇ ಅದಕ್ಕೆ ಅನುಮತಿಯಿತ್ತಿದ್ದ. ಬೃಂದಾವನದ ಗೋಪ ಗೋಪಿಯರೂ ಭಗವತ್ಸಾಕ್ಷಾತ್ಕಾರ ಮಾಡಿಕೊಂಡಿದ್ದರು.

ಎಲ್ಲಿಯವರೆಗೆ ಮನುಷ್ಯನಲ್ಲಿ ಆಸೆ ಇರುವುದೋ ಅಲ್ಲಿಯವರೆಗೆ ಆತನ ಹುಟ್ಟು ಸಾವುಗಳಿಗೆ ಕೊನೆಯೇ ಇಲ್ಲ. ಆಸೆಯೇ ಅವನು ಅನೇಕ ಬಾರಿ ಹುಟ್ಟಿ ಸಾಯುವುದಕ್ಕೆ ಕಾರಣ. ಕೇವಲ ಒಂದು ಚೂರು ಕಲ್ಲು ಸಕ್ಕರೆ ತಿನ್ನಬೇಕೆಂಬ ಆಸೆ ಇದ್ದರೂ ಆತನು ಪುನರ್ಜನ್ಮ ಪಡೆಯ ಬೇಕು. ಅದಕ್ಕೇ ಅನೇಕ ಬಗೆಯ ಆಹಾರ ಪದಾರ್ಥಗಳನ್ನು ಬೇಲೂರು ಮಠಕ್ಕೆ ತರುವರು. ಈ ವಾಸನೆಯನ್ನು ಒಂದು ಚಿಕ್ಕ ಬೀಜಕ್ಕೆ ಹೋಲಿಸ ಬಹುದು. ಒಂದು ಸಾಸುವೆಯಂತಿರುವ ಆಲದ ಬೀಜದಿಂದ ದೊಡ್ಡ ಆಲದಮರ ಏಳುವಂತೆ ಈ ಆಸೆಯೂ ಕೂಡ. ಆಸೆ ಇರುವವರೆಗೂ ಪುನರ್ಜನ್ಮ ಅನಿವಾರ್ಯ. ಆತ್ಮನನ್ನು ಒಂದು ದಿಂಬಿನ ಚೀಲದಿಂದ ಮತ್ತೊಂದಕ್ಕೆ ಬದಲಾಯಿಸಿದಂತೆ. ಎಲ್ಲಾ ಆಸೆಗಳಿಂದಲೂ ಪಾರಾದ ವರು ಎಲ್ಲೋ ಒಬ್ಬಿಬ್ಬರು ಮಾತ್ರ ಸಿಗಬಹುದು. ಆದರೆ ಯಾವುದೋ ಒಂದು ಆಸೆಯಿಂದ ಹುಟ್ಟಿಬಂದ ಮಾತ್ರಕ್ಕೇ ಎಷ್ಟೋ ಜನ್ಮಗಳಿಂದಲೂ ಬೆಳೆದು ಬಂದ ಒಳ್ಳೆಯ ಸಂಸ್ಕಾರಗಳಿದ್ದಲ್ಲಿ ಆಧ್ಯಾತ್ಮಿಕ ಮನೋಭಾವ ವನ್ನು ಕಳೆದುಕೊಳ್ಳುವುದಿಲ್ಲ. ಬೃಂದಾವನದ ಗೋವಿಂದ ಮಂದಿರದ ಒಬ್ಬ ಪೂಜಾರಿ ತನ್ನ ಪ್ರೇಯಸಿಗೆ ದೇವರ ನೈವೇದ್ಯವನ್ನು ಉಣಿಸುತ್ತಿದ್ದ. ಈ ಪಾಪದ ಫಲವಾಗಿ ಅವನು ಸತ್ತಮೇಲೆ ಒಂದು ಭೂತವಾದ. ಆದರೆ ದೇವರನ್ನು ಅವನು ಸೇವಿಸಿದ್ದ. ಆದ್ದರಿಂದ, ಒಂದು ದಿನ ಅವನು

ಭೌತಿಕ ದೇಹದಲ್ಲಿ ಎಲ್ಲರ ಮುಂದೆ ಕಾಣಿಸಿಕೊಂಡ. ಅವನ ಹಿಂದಿನ ಒಳ್ಳೆಯ ಸಂಸ್ಕಾರದ ಫಲವಾಗಿ ಹೀಗೆ ಮಾಡಲು ಅವನಿಗೆ ಸಾಧ್ಯವಾಯಿತು. ಅವನು ತನ್ನ ಹೀನರೂಪಕ್ಕೆ ಕಾರಣವನ್ನು ಜನರಿಗೆ ತಿಳಿಸಿ "ನನ್ನ ಆತ್ಮದ ಉದ್ಧಾರಕ್ಕಾಗಿ ಭಜನೆ, ಉತ್ಸವವನ್ನು ಮಾಡಿ. ಅದರಿಂದ ನಾನು ಮುಕ್ತನಾಗುವೆ" ಎಂದು ತಿಳಿಸಿದ.

ಶಿಷ್ಯ:– ಹಾಗಾದರೆ ಭಜನೆ, ಉತ್ಸವಾದಿಗಳಿಂದ ಈ ಅವಸ್ಥೆಯಿಂದ ಪಾರಾಗಬಹುದೆ?

ಶ್ರೀಮಾತೆ:– ಹೌದು, ವೈಷ್ಣವರಿಗೆ ಇಷ್ಟೇ ಸಾಕು. ಅವರು ಶ್ರಾದ್ಧವೇ ಮುಂತಾದ ಕರ್ಮಾಂತರಗಳನ್ನು ಮಾಡುವುದಿಲ್ಲ. ಒಮ್ಮೆ ರಥೋತ್ಸವದ ಸಮಯದಲ್ಲಿ ನಾನು ಪೂರಿಗೆ ಜಗನ್ನಾಥನ ದರ್ಶನಕ್ಕೆ ಹೋಗಿದ್ದೆ. ಅಷ್ಟೊಂದು ಮಂದಿ ದೇವರ ದರ್ಶನ ಮಾಡುತ್ತಿದ್ದುದನ್ನು ನೋಡಿ ಆನಂದಾಶ್ರುಗಳು ಉಕ್ಕಿಬಂದಿತು. ಆಗ ನಾನು 'ಇದೆಷ್ಟು ಒಳ್ಳೆಯದು, ಅವರೆಲ್ಲಾ ಮುಕ್ತರಾಗುವರು' ಎಂದುಕೊಂಡೆ. ಆದರೆ ಮುಂದೆ ಇದರ ಸತ್ಯ ನನಗೆ ಅರಿವಾಯಿತು. ಆಶಾರಹಿತರಾದ ಅಲ್ಪ ಮಂದಿ ಮಾತ್ರ ಮುಕ್ತಿಪಡೆಯಬಹುದು. ನಾನು ಈ ವಿಷಯವನ್ನು ಯೋಗಿನ್‌ಮಾಗೆ ಹೇಳಿದಾಗ ಆಕೆ, 'ಹೌದು ತಾಯಿ, ಆಶಾರಹಿತರಾದ ಜನರು ಮಾತ್ರ ಮುಕ್ತಿಗಳಿಸುವರು' ಎಂದು ಸಮರ್ಥಿಸಿದರು.

ಬೆಳಗ್ಗೆ ಶ್ರೀಮಾತೆಯವರ ಕೋಣೆಯ ವರಾಂಡದಲ್ಲಿ ನಾವೆಲ್ಲಾ ಉಪಾಹಾರ ತೆಗೆದುಕೊಳ್ಳುತ್ತಿದ್ದೆವು. ನಾನು, 'ತಾಯಿ, ನಾನು ಬೇಲೂರು ಮಠದಲ್ಲಿ ವಾಸಿಸುತ್ತಿದ್ದರೆ ನನಗೆ ಸನ್ಯಾಸಿ ದೀಕ್ಷೆಕೊಡುವರೆ?' ಎಂದು ಕೇಳಿದೆ.

ಶ್ರೀಮಾತೆ:– ಹೌದು ಮಗು.

ಶಿಷ್ಯ:– ಆದರೆ ಸನ್ಯಾಸಿ ಜೀವನ ಬಹು ಗರ್ವವನ್ನುಂಟು ಮಾಡುವುದು.

ಶ್ರೀಮಾತೆ:– ಅದು ನಿಜ. ಸನ್ಯಾಸಿ ದುರಭಿಮಾನಿಯಾಗಬಹುದು. ಅವನು 'ನೋಡು ಅವನು ನನಗೆ ಮನ್ನಣೆ ಕೊಡುತ್ತಿಲ್ಲ. ಅವನು ನನಗೆ ಬಗ್ಗಿ ನಡೆಯುತ್ತಿಲ್ಲ.' ಎಂದು ಯೋಚಿಸಬಹುದು. [ತಮ್ಮ ಬಿಳಿಬಟ್ಟೆಯ ಕಡೆ ತೋರಿಸಿ] ಅದಕ್ಕೆ ಬದಲು ಹೀಗೆ ಜೀವಿಸಬಹುದು [ಎಂದರೆ ಮಾನಸಿಕ ತ್ಯಾಗ]. ಗೌರ್ ಶಿರೋಮಣಿ ತನ್ನ ಮುದಿವಯಸ್ಸಿನಲ್ಲಿ, ಅವನ

ಇಂದ್ರಿಯಗಳು ಶಕ್ತಿಹೀನವಾದಮೇಲೆ ಸನ್ಯಾಸ ದೀಕ್ಷೆ ತೆಗೆದುಕೊಂಡ. ಮಗು, ಈ ದುರಭಿಮಾನವನ್ನು–ಸೌಂದರ್ಯಮದ, ಶೀಲಮದ, ಜ್ಞಾನಮದ, ಮತ್ತು ಪವಿತ್ರಜೀವನ ನಡೆಸುತ್ತಿರುವೆನೆಂಬ ಮದವನ್ನು ತ್ಯಜಿಸಲು ಸಾಧ್ಯವೆ?

ಶ್ರೀಮಾತೆ ತ್ಯಾಗಮಯ ಜೀವನಕ್ಕೆ ಸಿದ್ಧನಾಗುವಂತೆ ನನ್ನನ್ನು ಎಚ್ಚರಿಸಿದರು. ಶ್ರೀಮಾತೆ, "ಮನೆಗೆ ಹೋಗು, ನಿನ್ನ ಸಹೋದರರಿಗೆ ಕೊನೆಯ ಬಾರಿ ಹೇಳು, 'ನಾನು ಯಾವ ಕೆಲಸಕ್ಕೂ ಸೇರುವುದಿಲ್ಲ. ನನ್ನ ತಾಯಿ ಸತ್ತಮೇಲೆ ನಾನು ಆರಿಗೂ ಗುಲಾಮನಾಗಿಲ್ಲ. ನಾನು ಅಂತಹ ಕೆಲಸವೇನನ್ನೂ ಮಾಡುವುದಿಲ್ಲ. ನೀವು ನಿಮ್ಮ ಗೃಹಸ್ಥರ ಕರ್ತವ್ಯದಲ್ಲಿ ಸುಖವಾಗಿರಿ' ಎಂದು ಹೇಳು" ಎಂದರು.

ಅನಂತರ ಸಂಭಾಷಣೆ ಸನ್ಯಾಸಿ ಜೀವನದ ಕಠಿಣತರ ಸಂಯಮದ ಕಡೆ ತಿರುಗಿತು. ಶ್ರೀಮಾತೆ ಹೇಳಿದರು "ಮಠದಲ್ಲಿ ನನ್ನ ಮಕ್ಕಳ ಜೀವನ ಎಷ್ಟು ಕಠೋರವಾಗಿದೆ! ಅವರಿಗೆ ಹೊಟ್ಟೆ ತುಂಬಾ ತಿನ್ನಲು ಆಹಾರವಿಲ್ಲ, ಉಡುಪಿಲ್ಲ, ಜೀವನದ ಯಾವ ಸುಖವನ್ನೂ ಆನಂದಿಸುವುದಕ್ಕಿಲ್ಲ. ನಾನು ಇದನ್ನು ಇಷ್ಟಪಡುವುದಿಲ್ಲ. ಯೋಗಿನ್ [ಸ್ವಾಮಿ ಯೋಗಾನಂದ] ಉಗ್ರಸಂಯಮ ಜೀವನ ನಡೆಸಿದ. ಅದಕ್ಕೇ ತೀವ್ರ ಬಡತನವನ್ನನುಭವಿಸಿ ದೇಹ ತ್ಯಾಗಮಾಡಿದ.

ಸಂಜೆ ನಾನು ಮತ್ತು ಶ್ರೀಮಾತೆ ಮಾತನಾಡುತ್ತಿದ್ದೆವು.

ಶಿಷ್ಯ:– ತಾಯಿ, ದೇವರಕೃಪೆ ದೊರೆತ ಕೂಡಲೇ ಆತ್ಮಸಾಕ್ಷಾತ್ಕಾರವಾಗುವುದು— ಅದಕ್ಕೆ ಯೋಗ್ಯಕಾಲ ಬರುವವರೆಗೂ ಅವನು ಕಾಯಬೇಕಾದ್ದಿಲ್ಲ.

ಶ್ರೀಮಾತೆ:– ಅದು ನಿಜ. ಅಕಾಲದಲ್ಲಿ ಬಿಟ್ಟ ಮಾವಿನಹಣ್ಣು ಜ್ಯೇಷ್ಠಮಾಸದಲ್ಲಿ ಎಂದರೆ ಯೋಗ್ಯಕಾಲದಲ್ಲಿ ಬಿಟ್ಟ ಹಣ್ಣಿನಷ್ಟು ರುಚಿಯಾಗಿರುವುದೆ? ಜನರು ಅಕಾಲದಲ್ಲಿ ಹಣ್ಣನ್ನು ಪಡೆಯಬೇಕೆಂದು ಪ್ರಯತ್ನಿಸುತ್ತಿರುವರು. ಈ ಕಾಲದಲ್ಲಿ ಆಶ್ವಿನೀ ಮಾಸದಲ್ಲಿ [ಮಳೆಗಾಲ] ಕೂಡ ಮಾವಿನಹಣ್ಣು, ಹಲಸಿನಹಣ್ಣು ದೊರೆಯುವುದು. ಆದರೆ ಕಾಲದಲ್ಲಿ ಬಿಟ್ಟ ಮಾವಿನಹಣ್ಣಿನ ರುಚಿ ಇದಕ್ಕಿಲ್ಲ. ಇದೇ ದೇವರ ಸಾಕ್ಷಾತ್ಕಾರಕ್ಕೂ ಅನ್ವಯಿಸುವುದು. ಬಹುಶಃ ಈ ಜನ್ಮದಲ್ಲಿ ನೀನು ಸ್ವಲ್ಪ ಮಟ್ಟಿಗೆ ತಪಶ್ಚರ್‍ಯೆಮಾಡಬಹುದು. ಮುಂದಿನ ಜನ್ಮದಲ್ಲಿ ಇನ್ನೂ ಆಧ್ಯಾ

ತ್ಮಿಕ ಭಾವನೆಯನ್ನು ಹೆಚ್ಚಿಸಿಕೊಳ್ಳಬಹುದು. ಅದಕ್ಕೆ ಮುಂದಿನ ಜನ್ಮದಲ್ಲಿ ಇನ್ನೂ ಮುಂದುವರೆಯಬಹುದು. ಅದು ಹೀಗೆಯೇ ಸಾಗಬೇಕು.

ಇದ್ದಕ್ಕಿದ್ದಂತೆಯೇ ಭಗವತ್ಸಾಕ್ಷಾತ್ಕಾರ ಪಡೆಯುವ ವಿಚಾರ ಮಾತನಾಡುತ್ತಾ ಶ್ರೀಮಾತೆ "ದೇವರು ಮಗುವಿನಂತೆ. ಯಾರೂ ಅವನನ್ನು ಕೇಳಿರುವುದಿಲ್ಲ. ಆದರೂ ಕೊಡುವನು. ಆದರೆ ಯಾವಾಗ ಒಬ್ಬನು ಕೇಳುವನೋ ಆಗ ಅವನು ಕೊಡುವುದಿಲ್ಲ. ಇದೆಲ್ಲಾ ಅವನ ಮಾಯೆ" ಎಂದರು. * * * *

ಇನ್ನೊಂದು ದಿನ ಶ್ರೀಮಾತೆ ವೀಳೆಯದೆಲೆ ಅಣಿಮಾಡುತ್ತಿದ್ದರು. ನಾನು "ಇನ್ನು ಮುಂದೆ ಎಷ್ಟು ಜನರು ತಪಸ್ಸಿನಿಂದ ನಿಮ್ಮನ್ನು ತೃಪ್ತಿಪಡಿಸುವರು!" ಎಂದು ಕೇಳಿದೆ. ಶ್ರೀಮಾತೆ ನಗುತ್ತಾ, "ನೀನೇನು ಹೇಳಿದೆ? ಅವರು, 'ಓ! ಮಾತೆಗೆ ವಾತಹಿಡಿದಿತ್ತು, ಅವರು ಹೀಗೆ ಕುಂಟುತ್ತಿದ್ದರು' ಎನ್ನುವರು."

ಶಿಷ್ಯ:– ನೀವು ಹಾಗೆ ಹೇಳಬಹುದು.

ಶ್ರೀಮಾತೆ:– ಒಳ್ಳೆಯದು. ಕಾಶಿಪುರದ ತೋಟದಲ್ಲಿ ಖಾಯಿಲೆಯಿಂದ ಮಲಗಿದ್ದಾಗ ಗುರುಮಹಾರಾಜರು, "ಯಾರು ನನ್ನ ಹತ್ತಿರ ಪ್ರಾಪಂಚಿಕ ಸುಖಾಸಕ್ತಿಗಾಗಿ ಬಂದಿದ್ದರೋ ಅವರೆಲ್ಲಾ 'ಹ್ಞೊ! ಅವನೊಬ್ಬ ದೇವರ ಅವತಾರ! ಅವನಿಗೆ ಹೇಗೆ ಖಾಯಿಲೆ ಬರುವುದು? ಇದೆಲ್ಲಾ ಮಾಯೆ!' ಎಂದು ಹಿಂತಿರುಗಿದರು. ಆದರೆ ಯಾರು ನನ್ನವರಾಗಿರುವರೋ ಅವರೆಲ್ಲಾ ನನ್ನೀದಾರುಣಸ್ಥಿತಿಯನ್ನು ನೋಡಿ ಮರುಗುತ್ತಿದ್ದರು' ಎಂದು ಹೇಳಿದರು.

ಉದ್ಬೋಧನ ಆಫೀಸ್, ಕಲ್ಕತ್ತ, ೧೯೧೦ ನೇ ಇಸವಿ.

ಮಂತ್ರದೀಕ್ಷೆ ತೆಗೆದುಕೊಂಡ ಹಿಂದಿನದಿನ ನಾನು ಶ್ರೀಮಾತೆಯವರಿಗೆ, "ನನಗೆ ಮಂತ್ರೋಪದೇಶ ತೆಗೆದುಕೊಳ್ಳುವ ಆಸೆಯಾಗಿದೆ" ಎಂದು ಹೇಳಿದೆ. ಶ್ರೀಮಾತೆ, 'ನಿನಗೆ ಉಪದೇಶವಾಗಿಲ್ಲವೆ?' ಎಂದರು. ನಾನು ಇಲ್ಲವೆಂದೆ. 'ನಿನಗೆ ಉಪದೇಶವಾಗಿದೆ ಎಂದುಕೊಂಡಿದ್ದೆ' ಎಂದರು. ನನಗೆ ದೀಕ್ಷೆ ಕೊಟ್ಟಾದಮೇಲೆ ಶ್ರೀಮಾತೆ, 'ನಿನ್ನ ದೇಹ ಮನಸ್ಸು ದೇವರ ನಾಮ ಜಪದಿಂದ ಪರಿಶುದ್ಧವಾಗಲಿ' ಎಂದು ಹರಸಿದರು.

ಶಿಷ್ಯ:– ಬೆರಳುಗಳಿಂದ ಮಂತ್ರಜಪ ಮಾಡುವ ಆವಶ್ಯಕತೆ

ಯೇನು. ಮಾನಸಿಕವಾಗಿಯೆ ಮಾಡಬಹುದು.

ಶ್ರೀಮಾತೆ:— ಭಗವನ್ನಾಮ ಜಪದ ಜೊತೆ ಬೆರಳುಗಳೂ ಪವಿತ್ರ ವಾಗಲೆಂದು ಭಗವಂತ ಬೆರಳುಗಳನ್ನು ದಯಪಾಲಿಸಿರುವನು.

* * * * *

ಬೆಳಿಗ್ಗೆ ಶ್ರೀಮಾತೆಯವರೂ ನಾನೂ ಮಾತನಾಡುತ್ತಿದ್ದೆವು.

ಶಿಷ್ಯ:— ತಾಯಿ, ದೇವರು ಎಂಬ ವಸ್ತು ಇದ್ದಿದ್ದರೆ ಪ್ರಪಂಚ ದಲ್ಲೇಕೆ ಇಷ್ಟೊಂದು ದುಃಖ ಸಂಕಟಗಳು? ಅವು ದೇವರಿಗೆ ಕೇಳಿಸುವು ದಿಲ್ಲವೆ? ಅವನ್ನು ಹೋಗಲಾಡಿಸಲು ಅವನಿಗೆ ಶಕ್ತಿಯಿಲ್ಲವೆ?

ಶ್ರೀಮಾತೆ:—ಸೃಷ್ಟಿಯೇ ಸುಖದುಃಖಗಳ ಮಿಶ್ರ. ದುಃಖವಿಲ್ಲದಿ ದ್ದಲ್ಲಿ ಸುಖವನ್ನಾರು ಗ್ರಹಿಸಬಲ್ಲರು? ಅದೂ ಅಲ್ಲದೆ ಎಲ್ಲರೂ ಸುಖವಾ ಗಿರುವುದು ಹೇಗೆ? ಒಮ್ಮೆ ಸೀತೆ ಶ್ರೀರಾಮನೊಡನೆ, 'ನಿನ್ನ ಪ್ರಜೆಗಳ ಕಷ್ಟ ದುಃಖವನ್ನೆಲ್ಲಾ ನೀನೇಕೆ ಹೋಗಲಾಡಿಸುವುದಿಲ್ಲ? ನಿನ್ನ ರಾಜ್ಯದಲ್ಲಿ ಎಲ್ಲರೂ ಸುಖವಾಗಿರುವಂತೆ ಮಾಡು. ನೀನಿಚ್ಛೆಪಟ್ಟಲ್ಲಿ ಎಲ್ಲವೂ ಸಾಧ್ಯ' ಎಂದಳು. ಶ್ರೀರಾಮ, ಒಂದೇ ಕಾಲದಲ್ಲಿ ಪ್ರತಿಯೊಬ್ಬರೂ ಸುಖ ವಾಗಿರಲು ಹೇಗೆ ಸಾಧ್ಯ? ಎಂದನು. 'ಏಕಾಗುವುದಿಲ್ಲ,' ಸೀತೆಯೆಂದಳು 'ನಿನ್ನ ಬೊಕ್ಕಸದಿಂದ ಎಲ್ಲರಿಗೂ ಅವರ ಆಸೆ ಪೂರೈಸುವಷ್ಟು ಕೊಡು.' 'ಹಾಗೇ ಆಗಲಿ. ನಿನ್ನಿಚ್ಛೆಯನ್ನು ನಡೆಸುತ್ತೇನೆ' ಎಂದ ರಾಮ. ರಾಮ, ಲಕ್ಷ್ಮಣನನ್ನು ಕರೆದು 'ನನ್ನ ಚಕ್ರಾಧಿಪತ್ಯದಲ್ಲಿ ಪ್ರತಿಯೊಬ್ಬನೂ ರಾಜ ಭಂಡಾರದಿಂದ ಅವನಿಚ್ಛೆಪಟ್ಟದ್ದನ್ನೆಲ್ಲಾ ತೆಗೆದೊಯ್ಯಬಹುದೆಂದು ಸಾರು' ಎಂದನು. ಇದರಂತೆ ರಾಮನ ಪ್ರಜೆಗಳೆಲ್ಲಾ ಅರಮನೆಗೆ ಬಂದು ತಮ್ಮ ಬಯಕೆಗಳನ್ನೆಲ್ಲಾ ಹೇಳಿದರು. ಬೊಕ್ಕಸದಿಂದ ತಡೆಯಿಲ್ಲದೆ ಹಣದ ಮಳೆ ಹರಿಯಿತು. ಪ್ರತಿಯೊಬ್ಬರೂ ಸಂತೋಷದಿಂದ ಕಾಲ ಕಳೆ ಯುತ್ತಿದ್ದಾಗ ಶ್ರೀರಾಮನ ಮಾಯೆಯಿಂದ ಸೀತಾರಾಮರು ಕುಳಿತಿದ್ದ ಮಂದಿರದ ಮೇಲ್ಛಾವಣಿಯಿಂದ ಮಳೆ ಸೋರತೊಡಗಿತು. ಅರಮನೆ ಯನ್ನು ಸರಿಮಾಡಿಸಲು ಕೆಲಸಗಾರರಿಗೆ ಹೇಳಿ ಕಳುಹಿಸಿದರು. ರಾಜ್ಯದಲ್ಲಿ ಒಬ್ಬ ಕೆಲಸಗಾರನೂ ಇರಲಿಲ್ಲ. ಕಲ್ಲುಕುಟಿಗರು, ಬಡಗಿಗಳು, ಶಿಲ್ಪಿಗಳು ಯಾರೂ ಇಲ್ಲದೆ ಎಲ್ಲರ ಮನೆಗಳೂ ಜೀರ್ಣವಾಗ ತೊಡಗಿದುವು. ಕೆಲಸ ವೆಲ್ಲಾ ನಿಂತು ಹೋಯಿತು. ಪ್ರಜೆಗಳು ರಾಮನಿಗೆ ತಮ್ಮ ಕಷ್ಟವನ್ನೆಲ್ಲಾ ಅರಿಕೆಮಾಡಿಕೊಂಡರು. ಮತ್ತೇನೂ ಮಾಡಲು ಸಾಧ್ಯವಿಲ್ಲದೆ ಸೀತೆ

ರಾಮನಿಗೆ 'ಈ ಸೋರುವ ಛಾವಣಿಯಿಂದ ಇನ್ನು ಸಾಧ್ಯವಿಲ್ಲ. ಮುಂಚಿನಂತೆ ಎಲ್ಲವನ್ನೂ ಸರಿಪಡಿಸಿ. ಆಗ ಎಲ್ಲರಿಗೂ ಕೆಲಸಗಾರರು ಸಿಕ್ಕುವರು. ಈಗ ನನಗೆ ಅರ್ಥವಾಯಿತು; ಏಕೆ ಏಕಕಾಲದಲ್ಲಿ ಪ್ರತಿಯೊಬ್ಬರೂ ಸುಖವಾಗಿರಲು ಸಾಧ್ಯವಿಲ್ಲ ಎಂದು' ಎಂದಳು. ಆಗಶ್ರೀರಾಮನು 'ಹಾಗೇ ಆಗಲಿ' ಎಂದ. ತಕ್ಷಣ ಎಲ್ಲವೂ ಮೊದಲಿನಂತಾಯಿತು. ಕೆಲಸಗಾರರು ಸಿಗುವಂತಾದರು. ಸೀತೆ ರಾಮನಿಗೆ 'ಸ್ವಾಮಿ, ಈ ಸೃಷ್ಟಿಯೆಲ್ಲಾ ನಿನ್ನ ಅದ್ಭುತ ಕ್ರೀಡೆ' ಎಂದಳು.

ಯಾರೂ ಸರ್ವಕಾಲದಲ್ಲೂ ದುಃಖಿಗಳಾಗಿರಲು ಸಾಧ್ಯವಿಲ್ಲ. ಯಾರೊಬ್ಬರೂ ತಮ್ಮ ಜೀವಿತಾವಧಿಯನ್ನೆಲ್ಲಾ ಕಷ್ಟದಲ್ಲೇ ಕಳೆಯುವುದಿಲ್ಲ. ಪ್ರತಿಯೊಂದು ಕರ್ಮಕ್ಕೂ ಫಲವುಂಟು. ಅದರಂತೆ ಅವನ ಅದೃಷ್ಟ ಬದಲಾಯಿಸುವುದು.

ಶಿಷ್ಯ:– ಹಾಗಾದರೆ ಎಲ್ಲವೂ ಕರ್ಮದಿಂದಲೇ ಆಗುತ್ತದೆಯೇ?

ಶ್ರೀಮಾತೆ:– ಇಲ್ಲದಿದ್ದಲ್ಲಿ ಮತ್ತೇನು? ಜಾಡಮಾಲಿಯು ಕಸದ ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ಹೋಗುವುದನ್ನು ನೀನು ನೋಡುವುದಿಲ್ಲವೆ?

ಶಿಷ್ಯ:– ಒಳ್ಳೆಯ ಅಥವಾ ಕೆಟ್ಟ ಕರ್ಮಗಳಿಗಿಳಿಯುವುದಕ್ಕೆ ಮೊದಲು ಮನಸ್ಸು ಹೇಗಿರುತ್ತದೆ. ಈ ಜನ್ಮದ ಹುಟ್ಟು ಗುಣಕ್ಕೆ ಹಿಂದಿನ ಜನ್ಮದ ಸಂಸ್ಕಾರ, ಹಿಂದಿನ ಜನ್ಮದ ಕರ್ಮಕ್ಕೆ ಅದರ ಹಿಂದಿನ ಜನ್ಮದ ಸಂಸ್ಕಾರ ಕಾರಣ, ಎಂದು ನೀವು ವಿವರಿಸಬಹುದು. ಆದರೆ ಇವೆಲ್ಲಕ್ಕೂ ಮೂಲವಾದುದಾವುದು?

ಶ್ರೀಮಾತೆ:– ದೇವೇಚ್ಛೆ ಇಲ್ಲದೆ ಏನೂ ನಡೆಯುವುದಿಲ್ಲ; ಒಂದು ಹುಲ್ಲು ಕಡ್ಡಿಯೂ ಅಲುಗಾಡುವುದಿಲ್ಲ. ಯೋಗ್ಯಕಾಲ ಬಂದಾಗ ಮನುಷ್ಯ ದೇವರ ಧ್ಯಾನ ಮಾಡಲು ಇಚ್ಛಿಸುವನು. ಆದರೆ ಆ ಕಾಲ ಬರುವವರೆಗೂ ಅವನು ಕೆಟ್ಟ ಕರ್ಮಗಳನ್ನು ಮಾಡುವ ಯೋಗಗಳೇ ಬರುವುವು. ಮಾನವನ ಕರ್ಮದ ಮೂಲಕವೇ ದೇವರು ತನ್ನಿಚ್ಛೆಯನ್ನು ಸೂಚಿಸುವನು. ನರೇಂದ್ರ [ಸ್ವಾಮಿ ವಿವೇಕಾನಂದ] ಕೇವಲ ತಾನೇ ಅಷ್ಟನ್ನೂ ನೆರವೇರಿಸಲು ಸಾಧ್ಯವಾಗುತ್ತಿತ್ತೆ? ದೇವರು ಅವನ ಮೂಲಕ ಕೆಲಸಮಾಡಿದುದರಿಂದ ಅವನಿಗೆ ಅಷ್ಟನ್ನು ಸಾಧಿಸಲಾಯಿತು. ಗುರುಮಹಾರಾಜರು ಮೊದಲೇ ಅವರು ಏನನ್ನು ಸಾಧಿಸಬೇಕೆಂದು ನಿರ್ಧರಿಸಿದ್ದರು. ನಾವು

ಮಾಡುವ ಕರ್ಮಕ್ಕನುಗುಣವಾದ ಫಲ ಬರುವುದು. ಆದ್ದರಿಂದ ನಾವು ಎಲ್ಲವನ್ನೂ ಸಹಿಸಬೇಕು. ಕರ್ಮಗಳೇ ಕರ್ಮವನ್ನು ಹೋಗಲಾಡಿಸುವುವು.

ಶಿಷ್ಯ:– ಕರ್ಮದಿಂದ ಕರ್ಮ ರದ್ದಾಗಲು ಸಾಧ್ಯವೆ?

ಶ್ರೀಮಾತೆ:– ಏಕಾಗುವುದಿಲ್ಲ? ನೀನು ಒಂದು ಸತ್ಕಾರ್ಯಮಾಡಿದರೆ ಅದು ನಿನ್ನ ಹಿಂದಿನ ಪಾಪಕರ್ಮಕ್ಕೆ ವಿರುದ್ಧವಾಗಿ ವರ್ತಿಸುತ್ತದೆ. ಹಿಂದಿನ ಪಾಪಗಳು ಆಧ್ಯಾತ್ಮಿಕ ಸಾಧನೆ, ಧ್ಯಾನ, ಜಪದಿಂದ ಅಳಿಸಿಹೋಗುವುದು.

ಮಿರ್‌ಜಾಪುರದ ಹುಡುಗನೊಬ್ಬನಿಗೆ ದೆವ್ವ ಹಿಡಿದಿದೆ ಎಂದು ನಾನು ಕೇಳಿದ್ದೆ. ಉದ್ಬೋಧನ ಆಫೀಸಿನ ಕೆಲವು ನಿವಾಸಿಗಳು ಹಿಂದಿನ ದಿನ ಅಲ್ಲಿಗೆ ಹೋಗಿ ಬಂದರು. ನಾನು ಮಾತೆಯನ್ನು "ಎಷ್ಟು ದಿನ ಪ್ರೇತಶರೀರದಲ್ಲಿ ವಾಸಿಸಲು ಸಾಧ್ಯ?" ಎಂದು ಕೇಳಿದೆ.

ಶ್ರೀಮಾತೆ:–ಪ್ರತಿಯೊಬ್ಬರೂ, ಕೆಲವು ಅದ್ಭುತ ಆತ್ಮಗಳ ಹೊರತು, ಒಂದು ವರ್ಷಕಾಲ ಪ್ರೇತಶರೀರದಲ್ಲಿರಬೇಕು. ನಂತರ ಗಯೆಯಲ್ಲಿ ಪಿಂಡದಾನ, ಪ್ರಾರ್ಥನಾದಿಗಳನ್ನು ಮಾಡಿದರೆ ಆ ಮೃತಾತ್ಮಗಳು ತಮ್ಮ ಪ್ರೇತಶರೀರದಿಂದ ಬಿಡುಗಡೆ ಹೊಂದುವುವು. ನಂತರ ಅವು ಇತರ ಲೋಕಗಳಿಗೆ ಹೋಗಿ ಅಲ್ಲಿನ ಸುಖದುಃಖದ ಅನುಭವ ಹೊಂದಿ ಕಾಲಕ್ರಮೇಣ ತಮ್ಮ ಸಂಸ್ಕಾರಗಳಿಗನುಸಾರವಾಗಿ ಮತ್ತೆ ಮನುಷ್ಯ ಜನ್ಮಧಾರಣೆ ಮಾಡುವುವು. ಇತರರು ಆ ಕ್ಷೇತ್ರಗಳಿಂದಲೇ ಮುಕ್ತಿ ಹೊಂದುವರು. ಆದರೆ ಯಾವನು ಜೀವನದಲ್ಲಿ ಸತ್ಕರ್ಮಮಾಡಿರುವನೋ ಅವನು ತಾನು ಪ್ರೇತಶರೀರಿಯಾಗಿದ್ದರೂ ಆಧ್ಯಾತ್ಮಿಕಭಾವವನ್ನು ಕಳೆದುಕೊಳ್ಳುವುದಿಲ್ಲ.

ಇಲ್ಲಿ ಶ್ರೀಮಾತೆ ಪುನಃ ಬೃಂದಾವನದ ಗೋವಿಂದ ಮಂದಿರದ ಅರ್ಚಕನ ವಿಚಾರ ಹೇಳಿದರು.

ಶಿಷ್ಯ:– ಗಯೆಯಲ್ಲಿ ಶ್ರಾದ್ಧಮಾಡಿದರೆ ಆ ಮನುಷ್ಯ ಉತ್ತಮ ಪದವಿಗೆ ಹೋಗಲು ಸಾಧ್ಯವೆ?

ಶ್ರೀಮಾತೆ:– ಹೌದು, ಅದು ಸಾಧ್ಯ.

ಶಿಷ್ಯ:– ಹಾಗಾದರೆ ಸಾಧನೆಯ ಆವಶ್ಯಕತೆಯೇನು?

ಶ್ರೀಮಾತೆ:– ಈ ಮೃತ ಆತ್ಮಗಳು ಮೇಲಿನ ಪದವಿಗೆ ಹೋಗಿ

ಅಲ್ಲಿ ಸ್ವಲ್ಪಕಾಲ ಜೀವಿಸುವುವು. ನಂತರ ತಮ್ಮ ಹಿಂದಿನ ಸಂಸ್ಕಾರ ಗಳಿಗನುಸಾರವಾಗಿ ಈ ಪ್ರಪಂಚದಲ್ಲಿ ಜನ್ಮವೆತ್ತುತ್ತವೆ. ಈ ಮನುಷ್ಯಜನ್ಮ ಧಾರಣೆ ಮಾಡಿದ ನಂತರ ಈ ಜನ್ಮದಲ್ಲೇ ಕೆಲವರು ಮುಕ್ತಿಗಳಿಸುವರು. ಇತರರು ತಮ್ಮ ಕರ್ಮಫಲವನ್ನನುಭವಿಸಲು ಇನ್ನೂ ಹೀನಜನ್ಮಧಾರಣೆ ಮಾಡುವರು. ಈ ಜಗತ್ತು ಒಂದು ಚಕ್ರದಂತೆ ನಡೆಯುತ್ತಿದೆ. ನಮ್ಮ ಆಸೆಗಳೆಲ್ಲಾ ಸಂಪೂರ್ಣ ನಿರ್ನಾಮವಾಗಲು ಇದೇ ಕಡೆಯ ಜನ್ಮ.

ಶಿಷ್ಯ:– ಈಗ ತಾನೆ ನೀವು ಹೇಳಿದಿರಿ, ಸತ್ತವರ ಆತ್ಮಗಳು ದೈವೀ ಅವಸ್ಥೆಗೊಳಗಾಗುವುದನ್ನು. ಅವು ತಾನಾಗಿಯೇ ಅಲ್ಲಿಗೆ ಹೋಗುವುವೋ ಅಥವಾ ಮತ್ತಾರಾದರೂ ಅವನ್ನು ಅಲ್ಲಿಗೆ ಒಯ್ಯುವರೋ ?

ಶ್ರೀಮಾತೆ:–ಇಲ್ಲ. ಅವು ತಾವೇ ಅಲ್ಲಿಗೆ ಹೋಗುವುವು. ಸೂಕ್ಷ್ಮ ಶರೀರ ಗಾಳಿಯ ಶರೀರದಂತೆ.

ಶಿಷ್ಯ :–ಗಯೆಯಲ್ಲಿ ಶ್ರಾದ್ಧವನ್ನು ಹೊಂದದವರು ಏನಾಗುವರು ?

ಶ್ರೀಮಾತೆ:– ಯಾರಾದರೂ ತಮ್ಮ ವಂಶದಲ್ಲಿ ಹುಟ್ಟಿ ಗಯೆಯಲ್ಲಿ ಶ್ರಾದ್ಧ, ಇತರ ಕರ್ಮಾಂತರ ಮಾಡುವವರೆಗೂ ಅವು ಪ್ರೇತಶರೀರ ದಲ್ಲೇ ಇರುವುವು.

ಶಿಷ್ಯ :– ನಾವು ಭೂತಪ್ರೇತಗಳ ವಿಚಾರ ಕೇಳುತ್ತೇವೆ. ಅವೆಲ್ಲಾ ಶಿವನ ಪರಿವಾರವೇ ಅಥವಾ ಕೇವಲ ಪ್ರೇತಗಳೊ? ಅವೆಲ್ಲಾ ಮೃತ ರಾದವರ ಆತ್ಮಗಳೋ ?

ಶ್ರೀಮಾತೆ:– ಅವೆಲ್ಲಾ ಮೃತರಾದವರ ಆತ್ಮಗಳು. ಶಿವನ ಪರಿ ವಾರಕ್ಕೆ ಸೇರಿದವು ಬೇರೆ ಪ್ರತ್ಯೇಕ ಗುಂಪಿಗೆ ಸೇರಿದವುಗಳು. ನಾವು ಬಹಳ ಎಚ್ಚರಿಕೆಯಿಂದ ಜೀವಿಸಬೇಕು. ಪ್ರತಿಯೊಂದು ಕರ್ಮಕ್ಕೂ ಫಲವುಂಟು. ಇತರರ ವಿಷಯದಲ್ಲಿ ಕ್ರೂರವಾಗಿ ಮಾತನಾಡುವುದು ಮತ್ತು ಅವರನ್ನು ನೋವಿಗೆ ಗುರಿಮಾಡುವುದು ಒಳ್ಳೆಯದಲ್ಲ.

ಶಿಷ್ಯ:– ತಾಯಿ, ಬೇವಿನ ಮರದಲ್ಲಿ ಮಾವಿನಹಣ್ಣಿರುವುದಿಲ್ಲ. ಮಾವಿನ ಮರದಲ್ಲಿ ಬೇವಿನಹಣ್ಣು ಬಿಡುವುದಿಲ್ಲ. ಹಾಗೆಯೇ ಅವನವನ ಕರ್ಮಫಲ ಅವನು ಅನುಭವಿಸಬೇಕು.

ಶ್ರೀಮಾತೆ :– ನೀನು ಹೇಳುವುದು ನಿಜ. ಕಾಲಕ್ರಮೇಣ ದೇವರು ಇರವೇ ಅರಿವಾಗುವುದಿಲ್ಲ. ಜ್ಞಾನೋದಯವಾದಮೇಲೆ ದೇವರು ದೇವತೆ ಗಳು ಎಲ್ಲಾ ಮಾಯೆ ಎಂದು ಗೊತ್ತಾಗುವುದು. ಎಲ್ಲವೂ ಕಾಲದಲ್ಲಿ

ಕಾಣಿಸಿಕೊಳ್ಳುವುವು. ಅಂತೆಯೇ ಕಾಲದಲ್ಲಿ ಮಾಯವಾಗುವುವು..... ಜ್ಞಾನೋದಯವಾದಾಗ ದೇವದೇವತೆಗಳೆಲ್ಲಾ ಮಾಯವಾಗುವರು. ಸಾಧಕನಿಗೆ ಆಗ ಕೇವಲ ಜಗನ್ಮಾತೆ ಈ ಭೂಮಂಡಲವನ್ನೆಲ್ಲಾ ವ್ಯಾಪಿಸಿರುವಳೆಂದು ಅರಿವಾಗುವುದು. ಎಲ್ಲವೂ ಆಗ ಒಂದಾಗುವುದು. ಇದೇ ಸತ್ಯ.

ಶ್ರೀಮಾತೆ ನಿತ್ಯ ಪೂಜೆಗಾಗಿ ಬಿಲ್ವಪತ್ರೆಯನ್ನು ಅಣಿಮಾಡುತ್ತಿದ್ದಾಗ ನಾನು ಆಗತಾನೇ ಹೊಸದಾಗಿ ಬಂದಿದ್ದ ಶ್ರೀಮಾತೆಯವರ ಭಾವಚಿತ್ರವನ್ನು ತೋರಿಸಿದೆ. ಆಕೆ ಇರುವಹಾಗೇ ಬಂದಿದೆಯೇ ಎಂದು ನಾನು ಅವರನ್ನು ಕೇಳಿದೆ.

ಶ್ರೀಮಾತೆ:– ಹೌದು. ಇದು ಚೆನ್ನಾಗಿ ಬಂದಿದೆ. ಆದರೆ ಅದನ್ನು ತೆಗೆಯುವ ಮೊದಲು ನಾನು ಇನ್ನೂ ದಪ್ಪನಾಗಿದ್ದೆ. ಯೋಗಿನ್‌ಗೆ [ಸ್ವಾಮಿ ಯೋಗಾನಂದ] ಆಗ ಬಹಳ ಖಾಯಿಲೆ. ಅದೇ ವ್ಯಸನದಲ್ಲಿ ನಾನು ಕೃಶಳಾಗಿದ್ದೆ. ತುಂಬಾ ದುಃಖದಲ್ಲಿದ್ದೆ. ಯೋಗಿನ್‌ಗೆ ಖಾಯಿಲೆ ಜೋರಾದಾಗ ನಾನು ಅಳುತ್ತಿದ್ದೆ. ಅವನಿಗೆ ಸ್ವಲ್ಪ ವಾಸಿಯಾದಾಗ ನನಗೆ ಸಂತೋಷವಾಗುತ್ತಿತ್ತು. ಮಿಸೆಸ್ ಸರಾಬುಲ್ ಈ ಭಾವಚಿತ್ರವನ್ನು ತೆಗೆದಳು. ಮೊದಲು ನಾನು ಅದಕ್ಕೆ ಒಪ್ಪಲಿಲ್ಲ. ಆಕೆ ಬಲವಂತ ಮಾಡಿ "ತಾಯಿ, ನಾನು ಈ ಚಿತ್ರವನ್ನು ಅಮೆರಿಕಾಕ್ಕೆ ತೆಗೆದುಕೊಂಡು ಹೋಗಿ ಪೂಜಿಸುವೆ" ಎಂದಳು. ಕಡೆಗೊಮ್ಮೆ ಭಾವಚಿತ್ರ ತೆಗೆದರು.

ಶಿಷ್ಯ:– ನಿಮ್ಮ ಹತ್ತಿರ ಇರುವ ಶ್ರೀರಾಮಕೃಷ್ಣರ ಭಾವಚಿತ್ರ ಬಹಳ ಚೆನ್ನಾಗಿದೆ. ಆ ಭಾವಚಿತ್ರ ನೋಡಿದವರಿಗೆ ಅದರ ಅನುಭವವಾಗುವುದು. ಆ ಭಾವಚಿತ್ರ ಶ್ರೀ ಗುರುಮಹಾರಾಜನ್ನು ಚೆನ್ನಾಗಿ ಹೋಲುತ್ತದೆಯೆ?

ಶ್ರೀಮಾತೆ:– ಹೌದು. ಆ ಭಾವಚಿತ್ರ ಬಹು ಸುಂದರವಾಗಿದೆ. ಅದು ಮೊದಲು ಒಬ್ಬ ಬ್ರಾಹ್ಮಣ ಅಡಿಗೆಯವನದಾಗಿತ್ತು. ಅವರ ಮೊದಲ ಭಾವಚಿತ್ರದ ಅನೇಕ ಅಚ್ಚುಗಳನ್ನು ಮಾಡಿದರು. ಆ ಬ್ರಾಹ್ಮಣನೂ ಒಂದನ್ನು ತೆಗೆದುಕೊಂಡ. ಆ ಚಿತ್ರ ಮುಂಚೆ ಕಾಳಿಯ ವಿಗ್ರಹದಂತೆ ಕಪ್ಪಾಗಿತ್ತು. ಆದ್ದರಿಂದಲೇ ಅದನ್ನು ಆ ಬ್ರಾಹ್ಮಣನಿಗೆ ಕೊಟ್ಟರು. ಅವನು ದಕ್ಷಿಣೇಶ್ವರವನ್ನು ಬಿಟ್ಟು ಇನ್ನಾವುದೋ ಸ್ಥಳಕ್ಕೆ, ನನಗೆ ಸರಿಯಾಗಿ ನೆನಪಿಲ್ಲ—ಹೊರಟಾಗ, ಅವನು ಅದನ್ನು ನನಗೆ ಕೊಟ್ಟನು.

ನಾನು ಅದನ್ನು ಇತರ ದೇವದೇವಿಯರ ಭಾವಚಿತ್ರಗಳೊಡನೆ ಇಟ್ಟು ಪೂಜೆಮಾಡುತ್ತಿದ್ದೆ. ಆಗ ನಾನು ನಹಭತ್‌ಖಾನೆಯ ಕೆಳಗಣ ಕೋಣೆಯಲ್ಲಿ ವಾಸಿಸುತ್ತಿದ್ದೆ. ಒಮ್ಮೆ ಶ್ರೀರಾಮಕೃಷ್ಣರು ಅಲ್ಲಿಗೆ ಬಂದಾಗ ಆ ಭಾವಚಿತ್ರವನ್ನು ನೋಡಿ, "ಇದೆಲ್ಲಾ ಏನು" ಎಂದರು. ನಾನು ಲಕ್ಷ್ಮಿಯೂ ಮಹಡಿಯ ಕೆಳಗಡೆ ಅಡಿಗೆಮಾಡುತ್ತಿದ್ದೆವು. ಆಗ ಗುರು ಮಹಾರಾಜರು ಪೂಜೆಗಾಗಿ ಇಟ್ಟಿದ್ದ ಬಿಲ್ವಪತ್ರೆ ಮತ್ತು ಪುಷ್ಪಗಳನ್ನು ತೆಗೆದುಕೊಂಡು ಆ ಭಾವಚಿತ್ರಕ್ಕೆ ಅರ್ಪಿಸಿ ಆ ಭಾವಚಿತ್ರವನ್ನು ಪೂಜಿಸಿದುದನ್ನು ಕಂಡೆ. ಇದು ಅದೇ ಭಾವಚಿತ್ರ. ಆ ಬ್ರಾಹ್ಮಣ ಪುನಃ ಹಿಂತಿರುಗಿ ಬರಲೇ ಇಲ್ಲ. ಆದ್ದರಿಂದ ಆ ಚಿತ್ರ ನನ್ನಲ್ಲಿಯೇ ಉಳಿಯಿತು.

ಶಿಷ್ಯ:– ತಾಯಿ, ಸಮಾಧಿಯಲ್ಲಿದ್ದಾಗ ಗುರುಮಹಾರಾಜರ ಮುಖ ಸಪ್ಪೆಯಾಗಿದ್ದುದನ್ನು ಎಂದಾದರೂ ನೋಡಿದ್ದಿರಾ?

ಶ್ರೀಮಾತೆ:– ಏಕೆ, ನನಗೆ ಯಾವಾಗಲೂ ಹಾಗೆ ನೋಡಿದ ನೆನಪಿಲ್ಲ. ಅದಕ್ಕೆ ಬದಲು ಅವರು ಸಮಾಧಿಯಲ್ಲಿದ್ದಾಗ ನಗುಮುಖದಿಂದಿದ್ದುದನ್ನು ನಾನು ನೋಡುತ್ತಿದ್ದೆ

ಶಿಷ್ಯ:– ಭಾವಸಮಾಧಿಯಲ್ಲಿರುವಾಗ ನಗುಮುಖವಿರುವುದು ಸಾಧ್ಯ. ಆದರೆ ಗುರುಮಹಾರಾಜರು ಕುಳಿತುಕೊಂಡ ಸ್ಥಿತಿಯಲ್ಲಿಯ ಭಾವಚಿತ್ರದ ವಿಚಾರವಾಗಿ, ಅದು ಬಹಳ ಶ್ರೇಷ್ಠಸಮಾಧಿಸ್ಥಿತಿ ಎಂದು ಹೇಳುತ್ತಿದ್ದರು. ಆ ಅವಸ್ಥೆಯಲ್ಲೂ ನಗುಮುಖದಿಂದಿರುವುದು ಸಾಧ್ಯವೆ?

ಶ್ರೀಮಾತೆ:– ಅವರು ಎಲ್ಲಾ ಬಗೆಯ ಸಮಾಧಿಯಲ್ಲಿದ್ದಾಗಲೂ ಹಸನ್ಮುಖಿಯಾಗಿರುವುದನ್ನು ನಾನು ನೋಡಿರುವೆ.

ಶಿಷ್ಯ:– ಗುರುಮಹಾರಾಜರ ಮೈಬಣ್ಣ ಹೇಗಿತ್ತು.

ಶ್ರೀಮಾತೆ:– ಅವರ ಮೈಬಣ್ಣ ಬಂಗಾರದಂತೆ ಇತ್ತು. ಅವರ ತೋಳಿನಲ್ಲಿ ಕಟ್ಟಿದ್ದ ಬಂಗಾರದ ತಾಯಿತದ ಬಣ್ಣವೂ ಅವರ ಮೈಬಣ್ಣವೂ ಒಂದೇ ಆಗಿತ್ತು. ನಾನು ಅವರ ದೇಹವನ್ನು ಎಣ್ಣೆಯಿಂದ ಒತ್ತುತ್ತಿದ್ದಾಗ ಅವರ ಇಡೀ ದೇಹದಿಂದ ಕಾಂತಿಯೊಂದು ಹೊರಹೊಮ್ಮುತ್ತಿದ್ದುದನ್ನು ನಾನು ನೋಡುತ್ತಿದ್ದೆ.. ಅವರು ದೇವಾಲಯದಿಂದ ಈಚೆಗೆ ಬರುತ್ತಿದ್ದಾಗ ಜನರು ಸಾಲಾಗಿ ನಿಂತು, "ಓ, ಅಲ್ಲಿ ಅವರು ಹೋಗುತ್ತಿದ್ದಾರೆ" ಎನ್ನುತ್ತಿದ್ದರು. ಅವರು ಸುಮಾರಾಗಿ ದಪ್ಪವಾಗಿದ್ದರು. ಮಥುರಬಾಬು ಅವರಿಗೆ ಒಂದು ಚಿಕ್ಕ ಕಾಲ್ಮಣೆ ಕೊಟ್ಟಿದ್ದನು. ಅದು

ಸ್ವಲ್ಪ ಅಗಲವಾಗೇ ಇತ್ತು. ಆದರೆ ಅವರು ಊಟಕ್ಕೆ ಪದ್ಮಾಸನ ಹಾಕಿ ಕುಳಿತಾಗ ಸರಿಯಾಗಿ ಕುಳಿತುಕೊಳ್ಳಲು ಸಾಲುತ್ತಿರಲಿಲ್ಲ. ಸ್ನಾನಕ್ಕೆ ಅವರು ನಿಧಾನವಾಗಿ ಗಂಗಾತೀರಕ್ಕೆ ಹೋಗುತ್ತಿದ್ದಾಗ ಅವರನ್ನು ಜನರು ಆಶ್ಚರ್ಯದಿಂದ ದಿಟ್ಟಿಸಿ ನೋಡುತ್ತಿದ್ದರು.

ಅವರು ಕಮಾರಪುಕುರದಲ್ಲಿದ್ದಾಗ ಅಕಸ್ಮಾತ್ ಒಮ್ಮೆ ಅವರು ಈಚೆ ಬಂದರೂ ಜನರು ಅವರನ್ನು ಬಿಟ್ಟಬಾಯಿ ನೆಟ್ಟಕಣ್ಣಿನಿಂದ ನೋಡುತ್ತಿದ್ದರು. ಒಂದು ದಿನ ಅವರು, 'ಭೂತಿ ಖಾಲ್' ಎಂಬ ಕಾಲುವೆಗೆ ಗಾಳಿ ಸಂಚಾರ ಹೊರಟಾಗ ನೀರಿಗಾಗಿ ಬಂದ ಹೆಂಗಸರು ಅವರನ್ನು ಬಾಯಿ ಬಿಟ್ಟು ನೋಡುತ್ತಾ, "ಅಗೋ! ಗುರುಮಹಾರಾಜರು ಹೋಗುತ್ತಿದ್ದಾರೆ" ಎಂದರು. ಇದರಿಂದ ಖೇದಗೊಂಡ ಶ್ರೀರಾಮಕೃಷ್ಣರು ಹೃದಯ ನೊಡನೆ, "ಹೃದಯ, ನನ್ನ ತಲೆಯಮೇಲೆ ಒಂದು ಮುಸುಕುಹಾಕು. ಇಲ್ಲದಿದ್ದರೆ ಈಗಲೇ ನಾನು ಬಟ್ಟೆಯನ್ನೆಲ್ಲಾ ಕಳಚಿಬಿಸುಡುವೆ" ಎಂದರು. ಹೃದಯ, "ಬೇಡ ಚಿಕ್ಕಪ್ಪ, ಇಲ್ಲಿ ನಗ್ನನಾಗಿ ಹೋಗುವುದು ಬೇಡ. ಜನರೇನನ್ನುವರು?" ಎಂದನು. ಗುರುಮಹಾರಾಜರಿಗೆ ಹೆಂಗಸರು ತಾವು ನಗ್ನನಾಗಿರುವುದನ್ನು ಕಂಡರೆ ಓಡಿಹೋಗುವರೆಂದು ಗೊತ್ತಿತ್ತು. ಅದಕ್ಕೇ ಹಾಗೆ ಹೇಳಿದರು. ಹೃದಯ ಬೇಗ ಗುರುಮಹಾರಾಜರ ಮುಖವನ್ನು ಒಂದು ಬಟ್ಟೆಯಿಂದ ಮುಚ್ಚಿದನು.

ನಾನೆಂದೂ ಅವರು ಚಿಂತಾಕ್ರಾಂತರಾಗಿದ್ದುದನ್ನು ನೋಡ ಲಿಲ್ಲ. ಎಲ್ಲರೊಡನೆಯೂ, ಐದು ವರ್ಷದ ಬಾಲಕನೊಡನೆ ಅಥವಾ ವಯಸ್ಸಾದ ಮುದುಕನೊಡನೆಯೂ ಹರ್ಷದಿಂದಿರುತ್ತಿದ್ದರು. ಅವ ರೆಂದೂ ಖಿನ್ನರಾಗಿದ್ದುದನ್ನು ನಾನು ನೋಡಲಿಲ್ಲ. ಓ! ಅವು ಎಂತಹ ಆನಂದದ ದಿನಗಳು! ಕಮಾರಪುಕುರದಲ್ಲಿದ್ದಾಗ ಅವರು ಬೆಳಗಿನ ಜಾವಕ್ಕೇ ಎದ್ದು ನನಗೆ, "ನಾನು ಈ ದಿನ ಇಂತಹ ಪಲ್ಯ ತಿನ್ನುವೆ. ದಯವಿಟ್ಟು ಅದನ್ನು ಮಾಡು" ಎನ್ನುತ್ತಿದ್ದರು. ಮನೆಯ ಇತರ ಹೆಂಗಸರೊಡನೆ ನಾನು ಅದೇ ಅಡಿಗೆ ಮಾಡಿ ಬಡಿಸು ತ್ತಿದ್ದೆ. ಕೆಲವು ದಿನಗಳ ನಂತರ ಅವರು, "ನನಗೇನಾಗಿದೆ? ನಾನು ಬೆಳಿಗ್ಗೆ ನಿದ್ದೆಯಿಂದ ಎದ್ದಕೂಡಲೇ ಇಂದು ಏನನ್ನು ತಿನ್ನಲಿ? ಏನನ್ನು ಉಣಲಿ? ಎಂದೇ ಯೋಚಿಸುವೆ" ಎಂದರು. ನಂತರ' "ನನಗೆ, ಯಾವ ಪ್ರತ್ಯೇಕ ಆಹಾರದಮೇಲೂ ಮನಸ್ಸಿಲ್ಲ. ನೀನೇನು ಅಡಿಗೆ ಮಾಡಿದರೂ

ನಾನು ಊಟಮಾಡುವೆ'' ಎಂದರು.

ದಕ್ಷಿಣೇಶ್ವರದಲ್ಲಿದ್ದಾಗ ಆಗಾಗ್ಗೆ ಅವರಿಗೆ ಪ್ರಬಲವಾದ ಆಮ ಶಂಕೆ ಆಗುತ್ತಿತ್ತು. ಅದನ್ನು ವಾಸಿಮಾಡಿಕೊಳ್ಳುವ ಸಲುವಾಗಿ ಅವರು ಕಮಾರಪುಕುರಕ್ಕೆ ಬರುತ್ತಿದ್ದರು. ಅವರು, "ನನ್ನ ಹೊಟ್ಟೆಯೆಲ್ಲಾ ಕಲ್ಮಷದಿಂದ ತುಂಬಿಹೋಗಿದೆ. ಅದಕ್ಕೆ ಕೊನೆಯೇ ಇಲ್ಲ!'' ಎನ್ನುತ್ತಿದ್ದರು. ಹೀಗೆ ಯಾತನೆಯಿಂದ ಅವರು ದೇಹದಮೇಲೆ ಒಂದು ಬಗೆಯ ತಿರಸ್ಕಾರವನ್ನು ಬೆಳೆಸಿ ಅಂದಿನಿಂದ ಅದಕ್ಕೆ ಹೆಚ್ಚು ಗಮನ ಕೊಡುತ್ತಿರಲಿಲ್ಲ.

ಈಗ ನೀನು ಎಲ್ಲೆಲ್ಲೂ ಭಕ್ತರನ್ನು ನೋಡುತ್ತಿರುವೆ. ಈಗ ಬೇಕಾದಷ್ಟು ಉತ್ಸಾಹ, ವಿಜೃಂಭಣೆ. ಆದರೆ ಗುರುಮಹಾರಾಜರು ಖಾಯಿಲೆ ಬಿದ್ದಿದ್ದಾಗ, ಒಬ್ಬ ಭಕ್ತ ಇಪ್ಪತ್ತುರೂಪಾಯಿಗಳನ್ನು ಕೊಡಬೇಕಾಗಿ ಬಂದಾಗ ಅದನ್ನು ತಪ್ಪಿಸಿಕೊಳ್ಳಲು ಓಡಿಹೋದ. ಗುರುಮಹಾರಾಜರ ಖಾಯಿಲೆಯ ಚಿಕಿತ್ಸೆಗಾಗಿ ಆಗುತ್ತಿದ್ದ ಖರ್ಚನ್ನು ಚಂದಾ ಎತ್ತುತ್ತಿದ್ದರು. ಈ ಭಕ್ತನನ್ನು ಸ್ವಲ್ಪ ಕೇಳಿದ್ದರು. ಈಗ ಗುರುಮಹಾರಾಜರನ್ನು ಸೇವಿಸಲು ಕಷ್ಟವಿಲ್ಲ. ಏಕೆಂದರೆ ಈಗ ಆಹಾರವನ್ನು ಅವರಿಗೆ ಅರ್ಪಿಸಿದರೂ ಭಕ್ತರೇ ಅದನ್ನು ತಿನ್ನುವರು. ನೀನು ಗುರುಮಹಾರಾಜರನ್ನು ಕುಳ್ಳಿರಿಸಿದರೆ ಕುಳಿತುಕೊಳ್ಳುತ್ತಾರೆ. ಮಲಗಿಸಿದರೆ ಮಲಗುತ್ತಾರೆ. ಎಷ್ಟಾದರೂ ಅವರು ಈಗ ಒಂದು ಭಾವಚಿತ್ರ!

ಗುರುಮಹಾರಾಜರು ಬಲರಾಮಬಾಬುವನ್ನು ಕಾಳಿಯಬಳಿ ಕೈಜೋಡಿಸಿ ನಿಂತಿದ್ದಂತೆ ಭಾವಸಮಾಧಿಯಲ್ಲಿ ನೋಡಿದ್ದರು. ಇದಾದ ಮೇಲೆ ಬಲರಾಮಬಾಬು ಯಾವಾಗಲೂ ಗುರುಮಹಾರಾಜರ ಮುಂದೆ ಕೈಜೋಡಿಸಿ ನಿಂತಿರುತ್ತಿದ್ದರು. ಅವರೆಂದೂ ಗುರುಮಹಾರಾಜರನ್ನು ಪಾದಮುಟ್ಟಿ ನಮಸ್ಕರಿಸುತ್ತಿರಲಿಲ್ಲ. ಗುರುಮಹಾರಾಜರು ಅವರನ್ನು ಅರ್ಥಮಾಡಿಕೊಂಡಿದ್ದರು. ಒಮ್ಮೆ, "ಓ! ಬಲರಾಮ, ನನ್ನ ಕಾಲು ಬಹಳ ನೋಯುತ್ತಿದೆ. ಸ್ವಲ್ಪ ಅದನ್ನು ಒತ್ತು'' ಎಂದು ಹೇಳಿದರು. ತಕ್ಷಣವೇ ಬಲರಾಮ ನರೇಂದ್ರನಿಗೋ, ರಾಖಾಲನಿಗೋ ಅಥವಾ ಮತ್ತಾರಿಗೋ ಹೇಳಿಕಳುಹಿಸಿ ಗುರುಮಹಾರಾಜರ ಪಾದಗಳನ್ನೊತ್ತುವಂತೆ ಹೇಳಿದನು.

ಶಿಷ್ಯ:— ಒಮ್ಮೆ ನಾನು ಸ್ವಾಮಿ ಬ್ರಹ್ಮಾನಂದರನ್ನು ಶ್ರೀರಾಮ

ಕೃಷ್ಣರ ಮೈಬಣ್ಣ ಹೇಗಿತ್ತೆಂದು ಕೇಳಿದೆ. ಅದಕ್ಕೆ ಅವರು, "ಗುರು ಮಹಾರಾಜರ ಮೈಬಣ್ಣ ನನ್ನ ಮೈಬಣ್ಣದಂತಿತ್ತು" [ಎಂದರೆ ಕಪ್ಪು] ಎಂದಿದ್ದರು.

ಶ್ರೀಮಾತೆ:– ಹೌದು. ರಾಖಾಲ ಮುಂತಾದ ಶಿಷ್ಯರು ಅವರನ್ನು ನೋಡಿದಾಗ ಹಾಗಿದ್ದರು. ಅಷ್ಟುಹೊತ್ತಿಗೆ ಅವರಿಗೆ ಮೊದಲಿನ ಬಣ್ಣ ಇರಲಿಲ್ಲ. ಆರೋಗ್ಯವೂ ಇರಲಿಲ್ಲ. ನಾನು ಮುಂಚೆ ಹೀಗೆ ಕಾಣಿಸುತ್ತಿದ್ದೆನೆ? ಇಲ್ಲ. ನಾನಾಗ ಬಹಳ ಚಲುವೆಯಾಗಿದ್ದೆ. ನಾನು ಇಷ್ಟು ದಪ್ಪಕ್ಕೂ ಇರಲಿಲ್ಲ. ಬಹಳ ದಿನಗಳಾದಮೇಲೆ ಹೀಗಾದೆ......

ಪೂಜಾ ಮೇಳೆ ಸಮಾಪಿಸಿತು. ಶ್ರೀಮಾತೆ ಕೊಠಡಿಯೊಳಕ್ಕೆ ಹೋಗಲು ಸಿದ್ಧರಾದರು. ನಾನು ಕೆಳಕ್ಕೆ ಬಂದೆ. ಪೂಜೆಯಾದಮೇಲೆ ನಾನು ಪುನಃ ಮಹಡಿಗೆ ಭಕ್ತರಿಗೆ ಪ್ರಸಾದ ತರುವ ಸಲುವಾಗಿ ಹೋದೆ. ಹಣ್ಣು ಮಿಠಾಯಿ ಇಟ್ಟಿದ್ದ ಎಲೆಗಳನ್ನು ತರುವಾಗ ನನ್ನ ಮೊಣಕೈ ಮಾತೆಯವರ ಪಾದಕ್ಕೆ ಸೋಕಿತು. ತಕ್ಷಣ ಮಾತೆ, "ಓ!" ಎಂದು ನನಗೆ ಕೈಮುಗಿದರು. "ಪರವಾಗಿಲ್ಲ" ಎಂದು ನಾನು ಹೇಳಿದೆ. ಶ್ರೀಮಾತೆಗೆ ಅಷ್ಟಕ್ಕೇ ಸಮಾಧಾನವಾಗಲಿಲ್ಲ. "ನನ್ನ ಹತ್ತಿರ ಬಾ, ಮಗು, ಮುತ್ತಿಡುವೆ" ಎಂದರು. ಶ್ರೀಮಾತೆ ನನ್ನ ಗಲ್ಲವನ್ನು ನೇವರಿಸಿ ಮುದ್ದಿಟ್ಟರು. ನಂತರ ಅವರಿಗೆ ಸಮಾಧಾನವಾಯಿತು. ಹೀಗೆ ಅವರು ಭಕ್ತರನ್ನೆಲ್ಲಾ ದೇವರ ಆವಿರ್ಭಾವನೆಯೆಂದು ಗೌರವಿಸುತ್ತಿದ್ದರು. ಅದೇ ಕಾಲದಲ್ಲಿ ತಾಯಿ ತನ್ನ ಮಕ್ಕಳಿಗೆ ತೋರಿಸುವ ಮಮತೆಯನ್ನೂ ತೋರಿಸುತ್ತಿದ್ದರು.

೨೯ ನೇ ಅಕ್ಟೋಬರ್, ೧೯೧೦.

ಬೆಳಗಿನ ಜಾವ. ನಾನು ಶ್ರೀಮಾತೆಯವರ ಹಾಸಿಗೆಯ ಬಳಿ ಕುಳಿತಿದ್ದೆ. ಶ್ರೀಮಾತೆ ಗುರುಮಹಾರಾಜರ ವಿಷಯ ಮಾತಾಡಲಾರಂಭಿಸಿದರು.

ಶಿಷ್ಯ:– ಗುರುಮಹಾರಾಜರು ನಿಜವಾಗಿ ಭಾವಚಿತ್ರದಲ್ಲಿ ಜೀವಿಸಿರುವರೆ?

ಶ್ರೀಮಾತೆ:– ಖಂಡಿತವಾಗಿ ದೇಹ, ಛಾಯೆ ಎರಡೂ ಒಂದೇ. ಭಾವಚಿತ್ರ ಅವರ ಛಾಯೆಯಲ್ಲದೆ ಮತ್ತೇನು.

ಶಿಷ್ಯ:– ಎಲ್ಲಾ ಭಾವಚಿತ್ರಗಳಲ್ಲೂ ಅವರಿದ್ದಾರೆಯೆ?

ಶ್ರೀಮಾತೆ:– ಹೌದು. ಅವರ ಭಾವಚಿತ್ರದ ಮುಂದೆ ನೀನು ಸತತ ಪ್ರಾರ್ಥಿಸಿದರೆ ಅವರು ಅವರ ಮೂಲಕ ಆವಿರ್ಭವಿಸುವರು. ಪತ ವನ್ನಿಟ್ಟ ಸ್ಥಳವೇ ದೇವಮಂದಿರವಾಗುವುದು. ಈಗ ಒಬ್ಬ ಮನುಷ್ಯ ಗುರುಮಹಾರಾಜರನ್ನು ಆ ಜಾಗದಲ್ಲಿ ಪೂಜಿಸಿದರೆ [ಉದ್ಬೋಧನದ ಹತ್ತಿರವಿರುವ ಒಂದು ಜಾಗವನ್ನು ತೋರಿಸಿ] ಆಗ ಆ ಸ್ಥಳವೂ ಅವರ ಸಾನ್ನಿಧ್ಯದಿಂದ ಕೂಡಿರುವುದು.

ಶಿಷ್ಯ:– ಎಲ್ಲಾ ಸ್ಥಳವೂ ಒಳ್ಳೆಯ ಅಥವಾ ಕೆಟ್ಟ ನೆನಪುಗಳಿಂದ ಕೂಡಿರುವುದು.

ಶ್ರೀಮಾತೆ:– ಇದು ಅದರಂತೆ ಅಲ್ಲ. ಗುರುಮಹಾರಾಜರು ಅಂತಹ ಸ್ಥಳಕ್ಕೆ ಪ್ರತ್ಯೇಕ ಗಮನ ಕೊಡುವರು.

ಶಿಷ್ಯ:– ನೀವು ಅರ್ಪಿಸುವ ನೈವೇದ್ಯವನ್ನು ಗುರುಮಹಾರಾಜರು ನಿಜವಾಗಿ ಸ್ವೀಕರಿಸುವರೆ?

ಶ್ರೀಮಾತೆ:– ಹೌದು, ಸ್ವೀಕರಿಸುವರು.

ಶಿಷ್ಯ:– ಆದರೆ ನಮಗೆ ಅದರ ಸುಳಿವೇನೂ ಗೊತ್ತಾಗುವುದಿಲ್ಲ?

ಶ್ರೀಮಾತೆ:– ಅವರ ಕಣ್ಣಿನಿಂದ ಜ್ಯೋತಿಯೊಂದು ಬಂದು ಎಲ್ಲಾ ಬಗೆಯ ಆಹಾರಪದಾರ್ಥಗಳನ್ನೂ ಸವಿಯುವುದು. ಏಕೆ? ಗುರುಮಹಾ ರಾಜರಿಗೆ ಆಹಾರ ಅವಶ್ಯಕತೆ ಇದೆಯೇನು? ಇಲ್ಲ. ಭಕ್ತರನ್ನು ತೃಪ್ತಿ ಪಡಿಸಲೋಸುಗ ಅವರು ಸ್ವೀಕರಿಸುವರು. ಪವಿತ್ರ ಆಹಾರ ಮನಸ್ಸನ್ನು ಪರಿಶುದ್ಧಗೊಳಿಸುವುದು. ದೇವರಿಗೆ ಅರ್ಪಿಸದೆ ತಿನ್ನುವ ಆಹಾರದಿಂದ ಮನಸ್ಸು ಕಲುಷಿತವಾಗುವುದು.

ಶಿಷ್ಯ:– ನಿಜವಾಗಿಯೂ ಗುರುಮಹಾರಾಜರು ನೈವೇದ್ಯ ಸ್ವೀಕರಿಸುವರೆ?

ಶ್ರೀಮಾತೆ:– ಹೌದು. ಅವರು ಸ್ವೀಕರಿಸುವರೋ ಇಲ್ಲವೊ ಎಂಬುದನ್ನು ನಾನು ನೋಡುತ್ತೇನಲ್ಲ. ಗುರುಮಹಾರಾಜರು ನೈವೇದ್ಯದ ಮುಂದೆ ಕುಳಿತುಕೊಂಡು ಆಹಾರ ತೆಗೆದುಕೊಳ್ಳುತ್ತಾರೆ.

ಶಿಷ್ಯ:– ನೀವು ಹಾಗಾದರೆ ಪ್ರತ್ಯಕ್ಷವಾಗಿ ಅದನ್ನು ನೋಡುವಿರಾ?

ಶ್ರೀಮಾತೆ:– ಹೌದು. ಕೆಲವು ಪದಾರ್ಥಗಳನ್ನು ನೈವೇದ್ಯ ಮಾಡಿದಾಗ ಅವರು ತಿನ್ನುತ್ತಾರೆ. ಮತ್ತೆ ಕೆಲವು ವೇಳೆ ಸುಮ್ಮನೆ ಅದನ್ನು ನೋಡುತ್ತಾರೆ. ಈಗ ನಿನ್ನ ವಿಷಯವನ್ನೆ ತೆಗೆದುಕೊ. ನೀನು ಎಲ್ಲಾ

ವೇಳೆಗಳಲ್ಲೂ, ಎಲ್ಲಾ ಪದಾರ್ಥಗಳನ್ನು ತಿನ್ನಲು ಇಷ್ಟಪಡುವುದಿಲ್ಲ. ಯಾರಾದರೂ ತಿಳಿಯದವರು ನಿನಗೆ ಆಹಾರವನ್ನು ಕೊಟ್ಟರೂ ತಿನ್ನ ಲಿಚ್ಛಿಸುವುದಿಲ್ಲ. ಇದೂ ಹಾಗೆಯೇ. ನಮ್ಮ ಹೃದಯಾಂತರಾಳದ ಭಾವನೆಯೇ ದೇವರಮೇಲಿನ ಪ್ರೇಮವನ್ನು ನಿಶ್ಚಯಿಸುವುದು. ಭಗವ ತ್ಪ್ರೇಮವೇ ಅತಿ ಮುಖ್ಯ.

ಶಿಷ್ಯ:– ದೇವರಮೇಲೆ ಹೇಗೆ ಪ್ರೇಮ ಉದಿಸುವುದು? ಈಗ ಒಂದು ಮಗುವನ್ನು ಯಾರಾದರೂ ಸಾಕಿದರೆ ಆ ಮಗು ತನ್ನ ಹೆತ್ತ ತಾಯನ್ನು ತನ್ನ ತಾಯೆಂದು ತಿಳಿಯಲಾರದು.

ಶ್ರೀಮಾತೆ:– ಹೌದು, ಅದೇನೋ ನಿಜ. ದೇವರ ಕೃಪೆ ಪ್ರತಿ ಯೊಂದಕ್ಕೂ ಆವಶ್ಯಕ. ಪ್ರತಿಯೊಬ್ಬರೂ ಆತನ ಕೃಪೆಗಾಗಿ ಪ್ರಾರ್ಥಿ ಸಬೇಕು.

ಶಿಷ್ಯ:–ನಾನು ಕೃಪೆಗೆ ಅರ್ಹನೋ ಅಲ್ಲವೊ ತಿಳಿಯುವಬಗೆ ಹೇಗೆ? ಕೃಪೆ ಎಲ್ಲರಿಗೂ ಒಂದೇ ಸಮನಾಗಿದೆ.

ಶ್ರೀಮಾತೆ:– ನದಿಯ ದಡದಲ್ಲಿ ಕುಳಿತು ಪ್ರಾರ್ಥಿಸಿದರೆ ಆತನೇ ಸಕಾಲದಲ್ಲಿ ನಿನ್ನನ್ನು ದಾಟಿಸುವನು.

ಶಿಷ್ಯ:– ಪ್ರತಿಯೊಂದೂ ಆಯಾಕಾಲ ಬಂದಾಗ ನೆರವೇರುವುದು. ಹಾಗಾದಲ್ಲಿ ದೇವರ ಕೃಪೆ ಎಲ್ಲಿಂದ ಬರುವುದು?

ಶ್ರೀಮಾತೆ:– ನೀನು ಮೀನು ಹಿಡಿಯಬೇಕಾದರೆ ಗಾಳವನ್ನು ಹಿಡಿದು ಕುಳಿತುಕೊಳ್ಳಬೇಕಲ್ಲವೆ?

ಶಿಷ್ಯ:– ದೇವರು "ನಮ್ಮವನೇ" ಆಗಿದ್ದರೆ ನಾನು ಕುಳಿತು ಕಾಯಬೇಕಾದ ಪ್ರಮೇಯವೇನು?

ಶ್ರೀಮಾತೆ:– ಅದು ನಿಜ. ಅದು ಅಕಾಲದಲ್ಲೇ ಲಭಿಸಬಹುದು. ಈಗಿನಕಾಲದಲ್ಲಿ ಮಾವಿನಹಣ್ಣು, ಹಲಸಿನಹಣ್ಣು; ಅಕಾಲದಲ್ಲಿ ಸಿಗುವು ದನ್ನು ನೀನು ನೋಡಿಲ್ಲವೆ? ಭಾದ್ರಪದ ಮಾಸದಲ್ಲಿ ಕೂಡ ಮಾವಿನ ಹಣ್ಣು ಸಿಗುವುದು!

ಶಿಷ್ಯ:– ದೇವರು ನಾವು ಅಪೇಕ್ಷಿಸಿದುದನ್ನು ಕೊಟ್ಟು ಕಳುಹಿಸಿ ಬಿಡುತ್ತಾನೆ. ಅಷ್ಟಕ್ಕೇ ನಮ್ಮ ಮತ್ತು ಆವನ ಸಂಬಂಧ ಮುಗಿಯು ವುದೇನು? ಇಲ್ಲವೇ, ನಾವು ಆವನನ್ನು ನಮ್ಮವನನ್ನಾಗಿ ಮಾಡಿಕೊಳ್ಳಲು ಸಾಧ್ಯವೆ? ದೇವರು ಕೇವಲ "ನನ್ನವನೆ?"

ಶ್ರೀಮಾತೆ:– ಹೌದು. ದೇವರು ಖಂಡಿತ ನಮ್ಮವನು. ಇದು ಶಾಶ್ವತ ಬಾಂಧವ್ಯ. ಆತನು ಪ್ರತಿಯೊಬ್ಬರಿಗೂ ಸೇರಿರುವನು. ನಮ್ಮ ಆಂತರಿಕ ತೀವ್ರತೆಗನುಸಾರವಾಗಿ ಆತನ ಸಾಕ್ಷಾತ್ಕಾರಪಡೆಯಬಹುದು.

ಶಿಷ್ಯ:– ತೀವ್ರವಾದ ಹಂಬಲ ಸ್ವಪ್ನದಂತೆ. ಮನುಷ್ಯ ತಾನೇನು ಯೋಚಿಸುವನೋ ಅದನ್ನೇ ಕನಸು ಕಾಣುತ್ತಾನೆ.

ಶ್ರೀಮಾತೆ:– ಹೌದು. ಅದೊಂದು ಕನಸು. ಇಡೀ ಪ್ರಪಂಚವೇ ಒಂದು ಸ್ವಪ್ನ. ಇದೂ [ಎಚ್ಚತ್ತಿರುವ ವೇಳೆ] ಕೂಡ ಒಂದು ಸ್ವಪ್ನವೇ.

ಶಿಷ್ಯ:– ಇಲ್ಲ, ಇದು ಸ್ವಪ್ನವಲ್ಲ. ಹಾಗಿದ್ದಲ್ಲಿ ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಎಲ್ಲಾ ಮಾಯವಾಗುತ್ತಿತ್ತು. ಈ ಅವಸ್ಥೆ ಅನೇಕ ಜನ್ಮಗಳವರೆಗೂ ಇರುವುದು.

ಶ್ರೀಮಾತೆ:– ಹಾಗೆಂದೇ ಇಟ್ಟುಕೊ. ಆದರೂ ಇದೆಲ್ಲಾ ಕನಸಲ್ಲದೆ ಬೇರೆಯಲ್ಲ. ನೀನು ನೆನ್ನೆ ರಾತ್ರಿ ಕನಸಿನಲ್ಲಿ ನೋಡಿದ್ದು ಇಂದು ಇಲ್ಲ. [ನಿಜವಾಗಿ ಹಿಂದಿನ ರಾತ್ರಿ ಶಿಷ್ಯನಿಗೆ ವಿಸ್ಮಯಕರವಾದೊಂದು ಸ್ವಪ್ನ ಬಿದ್ದಿತ್ತು] ಒಬ್ಬ ರೈತ ತನ್ನ ಮಗನನ್ನು ಕಳೆದುಕೊಂಡ. ಅಂದೇ ರಾತ್ರಿ ಕನಸಿನಲ್ಲಿ ಅವನು ಒಬ್ಬ ದೊರೆಯಾಗಿ ಎಂಟು ಮಕ್ಕಳ ತಂದೆಯಾಗಿದ್ದ. ಕನಸಿನಿಂದ ಎಚ್ಚೆತ್ತಮೇಲೆ ತನ್ನ ಹೆಂಡತಿಯನ್ನು, "ನಾನೀಗ ಆ ಎಂಟು ಮಕ್ಕಳನ್ನು ಕಳೆದುಕೊಂಡಿದ್ದಕ್ಕಾಗಿ ಅಳಲೆ ಅಥವಾ ಈ ಒಬ್ಬ ಮಗನಿಗಾಗಿ ಅಳಲೆ?" ಎಂದು ಕೇಳಿದ.

ಶ್ರೀಮಾತೆಯೊಡನೆ ಹೀಗೆ ಚರ್ಚಿಸಿದ ನಂತರ ನಾನು ಹೀಗೆಂದೆ: "ತಾಯಿ, ನಿಜವಾಗಿಯೂ ನಾನೀಗ ನಿಮ್ಮೊಡನೆ ಹೇಳಿದ್ದನ್ನು ಲೆಕ್ಕಿಸುವುದಿಲ್ಲ. ನನಗೆ ಬೇಕಾದುದಿಷ್ಟೆ. ನಿಜವಾಗಿಯೂ ನನ್ನವರೆಂಬುವವರಾರಾದರೂ ಇರುವರೆ?"

ಶ್ರೀಮಾತೆ:– ಹೌದು ಅಂಥವರು ಇದ್ದಾರೆ.

ಶಿಷ್ಯ:– ನಿಜವಾಗಿ?

ಶ್ರೀಮಾತೆ:– ಹೌದು.

ಶಿಷ್ಯ:– ನಿಜವಾಗಿಯೂ ಅವರು ನಮ್ಮವನಾಗಿದ್ದರೆ ನಾನೇಕೆ ಅವರ ಸಾಕ್ಷಾತ್ಕಾರಕ್ಕಾಗಿ ಇಷ್ಟೊಂದು ಪ್ರಾರ್ಥಿಸಬೇಕು? ಯಾರು ನಿಜವಾಗಿಯೂ ನನ್ನವರಾಗಿರುವರೋ ಅವರು ನಾನು ಅವರನ್ನು ಕೂಗದೆಯೇ ನನ್ನ ಹತ್ತಿರ ಬರುತ್ತಿದ್ದರು. ನಮ್ಮ ತಂದೆ ತಾಯಿ ಮಾಡುವ ಕೆಲಸ

ವನ್ನು ದೇವರು ಮಾಡುತ್ತಾನೆಯೆ?

ಶ್ರೀಮಾತೆ:– ಹೌದು. ಮಾಡುವನು ಮಗು. ಅವನೇ ನಮ್ಮ ತಂದೆ ತಾಯಿ. ತಂದೆತಾಯಿ ನಮ್ಮನ್ನು ಸಲಹುವಂತೆ ಅವನೂ ಸಲಹುತ್ತಾನೆ. ಅವನೇ ನಮ್ಮನ್ನೆಲ್ಲಾ ಕಾಪಾಡುವನು. ಇಲ್ಲದಿದ್ದಲ್ಲಿ ನೀನೆಲ್ಲಿರುತ್ತಿದ್ದೆಯೊ! ಈಗ ನೀನೆಲ್ಲಿರುವೆ? ನಿನ್ನ ತಂದೆತಾಯಿ ನಿನ್ನನ್ನು ಬೆಳಿಸಿದರು. ಕೊನೆಗೆ ನೀನು ಅವರಿಗೆ ಸೇರಿದವನಲ್ಲವೆಂದು ತಿಳಿಯಿತು. ಕಾಗೆಯ ಗೂಡಿನಲ್ಲಿ ಕೋಗಿಲೆ ಬೆಳೆಯುವುದನ್ನು ನೀನು ನೋಡಿಲ್ಲವೆ?

ಶಿಷ್ಯ:– ದೇವರು "ನನ್ನವ" ಎಂದು ನಾನು ಖಂಡಿತ ಅರಿಯುವೆನೆ?

ಶ್ರೀಮಾತೆ:– ಖಂಡಿತ ಅರಿಯುವೆ. ನೀನೇನು ಯೋಚಿಸಿದರೂ ನಿನಗೆ ದೇವರು ಸಿಗುತ್ತಾನೆ. ಸ್ವಾಮಿ ವಿವೇಕಾನಂದರು ಸಾಕ್ಷಾತ್ಕಾರ ಪಡೆಯಲಿಲ್ಲವೆ? ಅವರಿಗೆ ಆದಂತೆ ನಿನಗೂ ಸಾಕ್ಷಾತ್ಕಾರವಾಗುವುದು.

ಶಿಷ್ಯ:– ಅಮ್ಮಾ, ದಯವಿಟ್ಟು ನಾನು ಅಶ್ರದ್ಧೆ ಅಥವಾ ಹೆದರಿಕೆಗೆ ಬಲಿಯಾಗದಂತೆ ಕಾಪಾಡಿ.

ಶ್ರೀಮಾತೆ:– ನಿನಗೆ ಅಂತಹ ಅಪಾಯವೇನೂ ಇಲ್ಲ. ಏಕೆಂದರೆ ನಾನೇ ಗಾಳಕ್ಕೆ ಮೀನನ್ನು ಸಿಕ್ಕಿಸಿದ್ದೇನೆ.

ಶಿಷ್ಯ:– ಅದು ಬಹಳ ಒಳ್ಳೆಯದು. ನಾವೆಲ್ಲಾ ಆನಂದಿಸುತ್ತೇವೆ.

ಶ್ರೀಮಾತೆ:– ಅದು ಸರಿ. ಒಬ್ಬ ಮಣ್ಣಿನಮುದ್ದೆ ಮಾಡುವನು, ಅನೇಕರು ಅದರಿಂದ ವಿಗ್ರಹ ಮಾಡುತ್ತಾರೆ.

ಶಿಷ್ಯ:– ನೀವು ನಮಗಾಗಿ ಶ್ರಮಿಸಿದರೆ ನಮಗೆಲ್ಲವೂ ಸಿಗುವುದು. ನೀವು ನಮ್ಮನ್ನು ನಿರಾಕರಿಸಲಾಗುವುದಿಲ್ಲ.

ಶ್ರೀಮಾತೆ:– ಹೌದು ಮಗು, ನಾನು ನಿನಗಾಗಿ ಮಾಡಿದರೆ ಎಲ್ಲವನ್ನೂ ಪಡೆಯುವೆ.

* * * *

ಮಧ್ಯಾಹ್ನ. ಶಿಲ್ಲಾಂಗ್‌ನಿಂದ ಭಕ್ತನೊಬ್ಬ ಬಂದಿದ್ದ. ಶ್ರೀಮಾತೆಯ ದೈವೀಸ್ವಭಾವದಲ್ಲಿ ಸಂಶಯುಳ್ಳವನಾಗಿ, ಶ್ರೀಮಾತೆಯವರನ್ನು ಸ್ವಪ್ನದಲ್ಲಿ ಏಳು ಬಾರಿ ನೋಡಿದ ಹೊರತು ಅವರ ದರ್ಶನಕ್ಕಾಗಿ ಹೋಗುವುದಿಲ್ಲೆಂದು ಶಪಥಮಾಡಿದ್ದ. ಅವನಿಗೆ ಅದೇ ಪ್ರಕಾರ ಸ್ವಪ್ನವಾಗಲು ಜಯರಾಮವಟಿಗೆ ಶ್ರೀಮಾತೆಯವರಿಗೆ ಪ್ರಣಾಮವನ್ನು ಸಲ್ಲಿಸಲು ಬಂದಿದ್ದನು. ಮಧ್ಯಾಹ್ನಾನಂತರ ಅವನು ಹೊರಟು ಬೀಳ್ಕೊಡು

ತ್ತಿರುವಾಗ ಅವನು, "ಅಮ್ಮಾ, ಇನ್ನು ಹೋಗಿ ಬರುವೆ. ನನಗಿನ್ನೇನಾದರೂ ಬೇಕೆ?"

ಶ್ರೀಮಾತೆ:– ಖಂಡಿತವಾಗಿ, ನಿನಗೆ ಉಪದೇಶವಾಗಬೇಕು.

ಶಿಷ್ಯ:– ಕಲ್ಕತ್ತೆಯ ಬಾಗ್‌ಬಜಾರಿನಲ್ಲಿ ತೆಗೆದುಕೊಳ್ಳುವೆ.

ಶ್ರೀಮಾತೆ:– ಮಗು, ಆ ಕೆಲಸವನ್ನು ಈಗಲೇ ಮುಗಿಸಿಬಿಡು. ಇಂದೇ ಮಂತ್ರದೀಕ್ಷೆ ತೆಗೆದುಕೊ.

ಶಿಷ್ಯ:– ಆದರೆ ನಾನಾಗಲೇ ಪ್ರಸಾದವನ್ನು ತಿಂದುಬಿಟ್ಟಿರುವೆನಲ್ಲ.

ಶ್ರೀಮಾತೆ:– ಅದರಿಂದೇನೂ ಬಾಧಕವಿಲ್ಲ.

ಉಪದೇಶಾನಂತರ ಶಿಷ್ಯ ಬೀಳ್ಕೊಟ್ಟ.

ಆದಕ್ಕೆ ಮುಂಚೆ ಬೆಳಿಗ್ಗೆ ಮತ್ತೊಬ್ಬ ಆವೇಶಪೂರಿತ ಭಕ್ತ ಬಂದಿದ್ದ. ಶ್ರೀಮಾತೆ ಸನ್ಯಾಸದೀಕ್ಷೆ ತನಗೆ ಕೊಡಬೇಕೆಂದು ಕೂಗಾಡಿದ. ಅವರು ತನ್ನನ್ನು "ಹುಚ್ಚ" ನನ್ನಾಗಿ ಮಾಡಬೇಕೆಂದೂ, ಗುರುಮಹಾರಾಜರ ದರ್ಶನವಾಗುವಂತೆ ಮಾಡಬೇಕೆಂದೂ ಪೀಡಿಸಿದ. ಶ್ರೀಮಾತೆ ಅವನನ್ನು ಹೇಗೊ ಸಮಾಧಾನಮಾಡಿ ಮನೆಗೆ ಕಳುಹಿಸಿದರು. ಜಯರಾಮವಟಿಯಿಂದ ಹಿಂತಿರುಗಿದಮೇಲೆ ಆ ಭಕ್ತನ ಮಾನಸಿಕಾವಸ್ಥೆ ಉಲ್ಬಣವಾಯಿತು. ಅವನು ಗುರುಮಹಾರಾಜರ ದರ್ಶನಕ್ಕಾಗಿ ಹಾತೊರೆಯ ತೊಡಗಿದ. ಶ್ರೀಮಾತೆ ಇಷ್ಟಪಟ್ಟಿದ್ದರೆ ತನಗೆ ಗುರುಮಹಾರಾಜರ ದರ್ಶನವನ್ನು ಮಾಡಿಸಬಹುದಿತ್ತೆಂದೂ, ಆದರೂ ಅವರು ಮಾಡಲಿಲ್ಲವೆಂದೂ ತುಂಬಾ ಅಸಮಾಧಾನವಾಯಿತು. ಕೋಪ ಉಕ್ಕೇರಿ ಅವನು ಪುನಃ ಜಯರಾಮವಟಿಗೆ ಬಂದು ಮಾತೆಗೆ, "ನೀವು ನನಗೆ ಗುರುದರ್ಶನವಾಗುವಂತೆ ಮಾಡುವುದಿಲ್ಲವೆ?" ಶ್ರೀಮಾತೆ ಮೃದುವಾಗಿ, "ನೀನು ದರ್ಶನಪಡೆಯುವೆ. ಅಷ್ಟೊಂದು ತಳಮಳಿಸಬೇಡ" ಎಂದರು. ಅವನಿಗೆ ಇನ್ನು ತಡೆಯಲಾಗಲಿಲ್ಲ. ಬಹು ಕೋಪದಿಂದ ಅವನು ಹೇಳಿದ; "ನೀವು ನನ್ನನ್ನು ಮೋಸಪಡಿಸುತ್ತಿದ್ದೀರಿ. ಇದೋ ನೀವು ಕೊಟ್ಟ ಜಪಸರ. ತೆಗೆದುಕೊಳ್ಳಿ. ನನಗಿನ್ನು ಅದರಮೇಲೆ ಗೌರವವಿಲ್ಲ." ಹೀಗೆ ಹೇಳಿ ಅವನು ಜಪಮಾಲೆಯನ್ನು ಶ್ರೀಮಾತೆಯವರಿಗೆ ಕಿತ್ತೊಗೆದ. ಶ್ರೀಮಾತೆ, "ಆಗಲಿ, ಶ್ರೀರಾಮಕೃಷ್ಣರ ಮಗುವಾಗಿರು" ಎಂದರು. ಕೂಡಲೇ ಅವನು ಆ ಸ್ಥಳವನ್ನು ಬಿಟ್ಟು ಹೊರಟುಹೋದ.

ಅನಂತರ ಆ ಭಕ್ತ ನಿಜವಾಗಿ ಹುಚ್ಚನಾದ. ಶ್ರೀರಾಮಕೃಷ್ಣ

ಮಠದ ಸ್ವಾಮಿಗಳಿಗೆ ಹೀನಾವಮಾನವಾಗಿ ಪತ್ರಬರೆಯತೊಡಗಿದ. ಈ ವಿಷಯದಲ್ಲಿ ಶ್ರೀಮಾತೆಯವರನ್ನು ಕೂಡ ದೂರದೆ ಬಿಡಲಿಲ್ಲ.

ಒಂದು ದಿನ ಈ ಶಿಷ್ಯನ ವಿಚಾರ ಮಾತನಾಡುತ್ತಾ ಶ್ರೀಮಾತೆಯವರನ್ನು ನಾನು, "ಅವನು ಮಂತ್ರವನ್ನು ವಾಪಸ್ಸುಕೊಟ್ಟನೆ? ಜಪಸರವನ್ನು ಕಿತ್ತೊಗೆದ. ಮಂತ್ರವನ್ನು ಹಿಂತಿರುಗಿಸಲು ಯಾರಿಂದಲಾದರೂ ಸಾಧ್ಯವೆ?" ಎಂದು ಕೇಳಿದೆ.

ಶ್ರೀಮಾತೆ:—ಅದು ಎಂದಾದರೂ ಸಾಧ್ಯವೆ? ಮಂತ್ರ ಸಚೇತನವಾದುದು. ಅದನ್ನು ಉಪದೇಶಪಡೆದಮೇಲೆ ಹಿಂತಿರುಗಿಸಲಾರಿಗೆ ಸಾಧ್ಯ. ಒಮ್ಮೆ ಗುರು ಆಕರ್ಷಣೆಗೆ ಸಿಕ್ಕಿದಮೇಲೆ ಅದರಿಂದ ಪಾರಾಗಲು ಸಾಧ್ಯವೆ? ಮುಂದೆ ಒಂದು ದಿನ ಈ ಮನುಷ್ಯನಿಗೆ ಬುದ್ಧಿಬಂದು ತಾನೀಗ ಯಾರನ್ನು ನಿಂದಿಸುತ್ತಿರುವನೋ ಅವರ ಕಾಲಿಗೆ ಬೀಳುವನು.

ಶಿಷ್ಯ:— ಇಂಥಹ ವಿಷಯ ಏಕೆ ನಡೆಯಿತು?

ಶ್ರೀಮಾತೆ:— ಹೀಗೆ ಅನೇಕ ವಿಷಯ ನಡೆಯುವುದು. ಒಬ್ಬ ಗುರು ಅನೇಕ ಮಂದಿ ಶಿಷ್ಯರಿಗೆ ಉಪದೇಶಕೊಡಬಹುದು. ಆದರೆ ಎಲ್ಲರೂ ಒಂದೇ ಸ್ವಭಾವದವರಾಗಿರುವರೆ? ಅವನು ಒಮ್ಮೆ ನನ್ನ ಹತ್ತಿರ, "ತಾಯಿ, ನನ್ನನ್ನು ಹುಚ್ಚನನ್ನಾಗಿ ಮಾಡಿ" ಎಂದಿದ್ದ. ನಾನು "ಏಕೆ ಮಗು ನೀನು ಹುಚ್ಚನಾಗಬೇಕು? ಬಹಳ ಪಾಪಿಷ್ಠರು ಹೊರತು ಯಾರಾದರೂ ಹುಚ್ಚರಾಗುವರೇ?" ಎಂದು ಕೇಳಿದೆ. ಅವನು "ನನ್ನ ಚಿಕ್ಕ ತಮ್ಮ ಗುರುಮಹಾರಾಜರ ದರ್ಶನಪಡೆದ. ದಯವಿಟ್ಟು ನನಗೂ ಅವರ ದರ್ಶನಲಾಭ ಮಾಡಿಸಿ" ಎಂದ. ನಾನು, "ಯಾರಿಗೆ ತಾನೆ ಈ ಪಂಚಭೌತಿಕ ಕಣ್ಣುಗಳಿಂದ ಅವರನ್ನು ನೋಡಲು ಸಾಧ್ಯ. ಆದರೆ ಕಣ್ಣುಗಳನ್ನು ಮುಚ್ಚಿ ಅವರನ್ನು ಕಾಣಬಹುದು. ನಿನ್ನ ತಮ್ಮ ಇನ್ನೂ ಮಗು. ಅವನು ಕಣ್ಣನ್ನು ಮುಚ್ಚಿಕೊಂಡು ಗುರುಮಹಾರಾಜರನ್ನು ನೋಡಿರಬಹುದು. ಆದರೆ ಅವನು ಕಣ್ಣನ್ನು ಬಿಟ್ಟುಕೊಂಡು ನೋಡಿದೆನೆಂದು ತಿಳಿದಿದ್ದಾನೆ ಅಷ್ಟೆ" ಎಂದೆ. ಅವನು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರೆಯಬೇಕೆಂದೂ, ಸಾಧನೆ ಮಾಡಬೇಕೆಂದೂ, ಗುರುಮಹಾರಾಜರನ್ನು ಪ್ರಾರ್ಥಿಸುವಂತೆಯೂ, ನಂತರ ಅವನಿಗೂ ದರ್ಶನಲಾಭವಾಗುವುದೆಂದೂ ಹೇಳಿದೆ. ತಾನೆಷ್ಟು ಮುಂದುವರಿದಿರುವೆನೆಂದೂ, ಎಷ್ಟರಮಟ್ಟಿಗೆ ಜ್ಞಾನ, ಭಗವಂತನ ಅರಿವು ಉಂಟಾಗಿದೆಯೆಂದೂ

ಅವರವರ ಮನಸ್ಸಿಗೇ ಗೊತ್ತಿರುವುದು. ಅವರ ಹೃದಯಾಂತರಾಳದಲ್ಲಿ ಎಷ್ಟರಮಟ್ಟಿಗೆ ದೇವರ ಸಾಕ್ಷಾತ್ಕಾರಮಾಡಿಕೊಂಡಿರುವರೆಂದು ಅವರಿಗೇ ಗೊತ್ತಿದೆ. ಅದೂ ಅಲ್ಲದೆ ಈ ಹೊರಗಿನ ಕಣ್ಣುಗಳಿಂದ ದೇವರನ್ನು ನೋಡಲಾರಿಗೆ ಸಾಧ್ಯ?

ಉದ್ಬೋಧನ ಆಫೀಸಿನಲ್ಲಿ ಬೈಸಿಕೊಂಡನಂತರ ಈ ಭಕ್ತ ಗಂಗಾ ತೀರದಲ್ಲಿ ವಾಸಿಸುತ್ತಿದ್ದ. ಒಮ್ಮೊಮ್ಮೆ ಅವನು ಉದ್ಬೋಧನ ಆಫೀಸಿನ ಹೊಸಲಿನಮೇಲೆ ಕುಳಿತುಕೊಂಡು ಅಲ್ಲೇ ಊಟಮಾಡುತ್ತಿದ್ದ. ಸ್ವಲ್ಪ ಕಾಲಾನಂತರ ಶ್ರೀಮಾತೆಯವರ ಅಪ್ಪಣೆಪಡೆದು ಅವನನ್ನು ಅವರ ಮುಂದೆ ಕರೆತಂದರು. ಶ್ರೀಮಾತೆ ಅವನನ್ನು ಸಮಾಧಾನಮಾಡಲು ಹಲವು ವಿಧದಲ್ಲಿ ಪ್ರಯತ್ನಪಟ್ಟರು. ಹೀಗೆ ಹೇಳಿದರು: "ಗುರು ಮಹಾರಾಜರು, 'ಸಾಯುವಕಾಲದಲ್ಲಿ ಯಾರು ನನ್ನನ್ನು ಪ್ರಾರ್ಥಿಸುವರೋ ಅವರ ಬಳಿ ನಾನಿರುವೆನು' ಎನ್ನುತ್ತಿದ್ದರು. ಇದು ಅವರ ಬಾಯಿಂದ ಬಂದ ಮಾತುಗಳು. ನೀನು ನನ್ನ ಮಗು. ನೀನು ಯಾವುದಕ್ಕೆ ಹೆದರಬೇಕು? ನೀನೇಕೆ ಹುಚ್ಚನಂತಾಡಬೇಕು? ಅದು ಗುರುದೇವನಿಗೇ ಅವಮಾನಮಾಡಿದಂತೆ. ಜನರು ಗುರುಮಹಾರಾಜನ ಭಕ್ತ ಹುಚ್ಚನಾದನು ಎನ್ನುವರು. ಗುರುಮಹಾರಾಜರ ಪವಿತ್ರನಾಮಕ್ಕೆ ಕಲಂಕ ತರುವ ಕೆಲಸಮಾಡುವೆಯೇನು? ಮನೆಗೆ ಹೋಗು ಎಲ್ಲರೂ ಜೀವಿಸುವಂತೆ ಜೀವಿಸು. ಅವರಂತೆ ಊಟಮಾಡು. ನಿನ್ನ ಕೊನೆಯ ಗಳಿಗೆಯಲ್ಲಿ ಗುರುಮಹಾರಾಜರ ದರ್ಶನವಾಗಿ ಅವರು ತಮ್ಮೊಡನೆ ನಿನ್ನನ್ನು ಕರೆದೊಯ್ಯುವರು. ಯಾರು ಈ ಭೌತಿಕ ನಯನಗಳಿಂದ ಆತನನ್ನು ಸಂದರ್ಶಿಸಿದ್ದಾರೆ? ಕೇವಲ ನರೇಂದ್ರನಿಗೆ [ಸ್ವಾಮಿ ವಿವೇಕಾನಂದ] ಮಾತ್ರ ಇದು ಸಾಧ್ಯವಾಯಿತು. ಅಮೆರಿಕಾದಲ್ಲಿದ್ದಾಗ ಗುರುಮಹಾರಾಜರಿಗಾಗಿ ತೀವ್ರವಾಗಿ ಹಂಬಲಿಸುತ್ತಿದ್ದಾಗ ಅವನಿಗೆ ಅವರ ದರ್ಶನವಾಯಿತು. ಗುರುಮಹಾರಾಜರು ತಮ್ಮ ತೋಳ್ಗಳಿಂದ ಅವನನ್ನು ಹಿಡಿದಪ್ಪಿದಂತೆ ಭಾಸವಾಯ್ತು. ಆ ದರ್ಶನ ಕೂಡ ಕೇವಲ ಕೆಲವು ದಿನಗಳು ಮಾತ್ರ. ಈಗ ಮನೆಗೆ ಹೋಗು. ಸಂತೋಷದಿಂದಿರು. ಈ ಪ್ರಾಪಂಚಿಕ ಜನರೆಲ್ಲಾ ಎಷ್ಟು ಅಸುಖಿಗಳು! ಅಂದು ರಾಮನ ಮಗ ಸತ್ತುಹೋದ! ಏನಿಲ್ಲದೇ ಇದ್ದರೂ ನೀನು ಹಗುರವಾದ ಹೃದಯದಿಂದಲಾದರೂ ನಿದ್ರಿಸಬಹುದು."

ಭಕ್ತನಿಗೆ ಶ್ರೀಮಾತೆಯವರ ಸಮಾಧಾನವಚನಗಳಿಂದ ಬಹು ಮಟ್ಟಿಗೆ ಸಮಾಧಾನವಾಯಿತು. ಉದ್ಬೋಧನ ಆಫೀಸಿನಲ್ಲಿ ಊಟಮಾಡಿ ಅವನು ತನ್ನ ಸ್ವಂತ ಊರಿಗೆ ಹಿಂತಿರುಗಿದ. ಕ್ರಮೇಣ ಅವನ ಮನಸ್ಸು ಶಾಂತವಾಯಿತು. * * *

ಜಯರಾಮವಟಿ, ೨೬ ನೇ ಮೇ, ೧೯೧೧.

ರಾಮೇಶ್ವರದ ಯಾತ್ರೆ ಮುಗಿದ ತರವಾಯ ಶ್ರೀಮಾತೆಯವರು ಕಲ್ಕತ್ತೆಗೆ ಹಿಂತಿರುಗಿದರು. ಕೆಲವು ದಿನಗಳ ನಂತರ ಜಯರಾಮವಟಿಗೆ ಹೋದರು. ಒಂದು ದಿನ ತಮ್ಮ ಹಳೆಯ ಮನೆ ವರಾಂಡದಲ್ಲಿ ಕುಳಿತಿದ್ದಾಗ ಶ್ರೀಮಾತೆ ನನ್ನನ್ನು ಒಬ್ಬ ಸನ್ಯಾಸಿ ಶಿಷ್ಯನ ವಿಚಾರ ಕೇಳಿದರು.

ಶ್ರೀಮಾತೆ:– ಅವನೇನು ಹೇಳಿದ?

ಶಿಷ್ಯ:– ಮೂರು ನಾಲ್ಕು ತಿಂಗಳುಗಳಿಂದಲೂ ಅವನಿಗೆ ನಿಮ್ಮ ಮೇಲೆ ಬಹು ಹಂಬಲವಾಗಿದೆಯಂತೆ.

ಶ್ರೀಮಾತೆ:– ಎಂತಹ ಆಶ್ಚರ್ಯ! ಸನ್ಯಾಸಿ ಮಾಯೆಯ ಬಂಧನಗಳನ್ನೆಲ್ಲಾ ಕಡಿದುಹಾಕಿರಬೇಕು. ಚಿನ್ನದ ಸರಪಳಿಯೂ ಕೂಡ ಕಬ್ಬಿಣದ ಸರಪಳಿಯಂತೆಯೇ ಸಂಕೋಲೆ. ಸನ್ಯಾಸಿಯಾದವನು ಯಾವ ವಿಧವಾದ ಮಾಯೆಗೂ ಒಳಗಾಗಬಾರದು. ಅವನೇಕೆ ಯಾವಾಗಲೂ, "ಓ! ಮಾತೃಪ್ರೇಮ! ಮಾತೃಪ್ರೇಮ! ನಾನೀಗ ಅದನ್ನು ಕಳೆದುಕೊಂಡಿರುವೆ" ಎಂದು ಬಾರಿಬಾರಿಗೂ ಹೇಳಬೇಕು? ಗಂಡಸರು ಹೀಗೆ ನನ್ನನ್ನು ಹಚ್ಚಿಕೊಳ್ಳುವುದನ್ನು ನಾನಿಷ್ಟಪಡುವುದಿಲ್ಲ. ಎಷ್ಟಾದರೂ ಅವನು ಪುರುಷ. ನಾನು ದೇವರ ವಿಷಯವಾಗಿ ಹೇಳುತ್ತಿಲ್ಲ. ನಾನು ಹೆಂಗಸರ ಜೊತೆಯಲ್ಲಿರಬೇಕು. ಆಶು ಕೂಡ ನನ್ನ ಬಳಿಗೆ ಗಂಧ ತೆಗೆಯಲು ಅಥವಾ ಮತ್ತಾವುದಾದರೂ ನೆಪದಿಂದ ಆಗಾಗ್ಗೆ ಬರುತ್ತಿದ್ದ. ಒಮ್ಮೆ ನಾನು ಅವನಿಗೆ ಎಚ್ಚರಕೊಟ್ಟೆ.

ಶಿಷ್ಯ:– ವೇದಾಂತ ಧ್ಯೇಯವನ್ನು ಸಾರುವ ಸನ್ಯಾಸಿಗಳೂ ನಿರ್ವಾಣಪಡೆಯುವರೆ?

ಶ್ರೀಮಾತೆ:– ಖಂಡಿತವಾಗಿ ಮಾಯೆಯ ಬಂಧನವನ್ನು ಒಂದೊಂದಾಗಿ ಕಡಿದುಹಾಕಿ ನಿರ್ವಾಣಹೊಂದಿ ದೇವರಲ್ಲಿ ತನ್ಮಯರಾಗುವರು. ಈ ಶರೀರ ಆಸೆಯಿಂದ ಉದ್ಭವವಾಗಿರುವುದೇನೊ ನಿಜ. ಯಾವಾಗ ಮನುಷ್ಯನು ಸಂಪೂರ್ಣ ಆಸೆಗಳಿಂದ ನಿರ್ಲಿಪ್ತನಾಗುವನೋ

ಆಗ ಎಲ್ಲವೂ ಕೊನೆ ಮುಟ್ಟುವುದು.

ಮಕ್ಕಳು [ಭಕ್ತರು] ಇಲ್ಲಿಗೆ ಬರುವರು. ಊಟಮಾಡುವರು. ಸಂತೋಷಪಡುವರು. ನನಗೇಕೆ ಅವರಲ್ಲಿ ಮೋಹ? ಒಮ್ಮೆ ಗುರು ಮಹಾರಾಜರಿಗೆ ಹಜರ, "ನೀನೇಕೆ ಯಾವಾಗಲೂ ನರೇಂದ್ರ ಮುಂತಾದ ಎಳೆ ಯುವಕರಿಗಾಗಿ ಹಂಬಲಿಸುವೆ? ಅವರೆಲ್ಲಾ ತಮ್ಮ ಪಾಡಿಗೆ ತಾವು, ತಿನ್ನುತ್ತಾ, ಕುಡಿಯುತ್ತಾ, ಆಟವಾಡುತ್ತ ಸುಖವಾಗಿರುವರು. ನೀನು ದೇವರ ಮೇಲೆ ನಿನ್ನ ಮನಸ್ಸನ್ನಿಡುವುದೊಳ್ಳೆಯದು" ಎಂದ. ಈ ಮಾತನ್ನು ಕೇಳಿದ ಕೂಡಲೇ ಗುರುಮಹಾರಾಜರು ತಮ್ಮ ಎಳೆಯ ಶಿಷ್ಯ ರಿಂದ ತಮ್ಮ ಮನಸ್ಸನ್ನು ಎಳೆದು ದೇವರಲ್ಲಿ ಮಗ್ನರಾದರು. ತಕ್ಷಣವೇ ಸಮಾಧಿಸ್ಥರಾದರು. ಅವರ ಗಡ್ಡ ಕೂದಲು ಕದಂಬದ ಹೂವಿ ನಂತೆ ನೆಟ್ಟಗೆ ನಿಂತಿತು. ಗುರುಮಹಾರಾಜರು ಹೇಗಿದ್ದರೆಂದು ನೆನಸಿಕೊ! ಅವರ ದೇಹ ಒಂದು ಮರದ ವಿಗ್ರಹದಂತೆ ಗಟ್ಟಿಯಾಯಿತು. ಅವರ ಸೇವೆ ಮಾಡುತ್ತಿದ್ದ ರಾಮುಲಾಲನು, ಪುನಃಪುನಃ, "ದಯವಿಟ್ಟು ಮುಂಚಿನಂತೆ ಆಗಿ!" ಎಂದು ಬೇಡಿದ. ಕೊನೆಗೊಮ್ಮೆ ಅವರು ಮನ ಸ್ಸನ್ನು ಈ ದೇಹದಮೇಲೆ ತಂದರು. ಕೇವಲ ಮನುಷ್ಯರಮೇಲಿನ ಕರುಣೆ ಯಿಂದ ಈ ಪ್ರಾಪಂಚಿಕ ಮಟ್ಟದಲ್ಲಿ ಅವರು ತಮ್ಮ ಮನಸ್ಸನ್ನಿಟ್ಟಿದ್ದರು.

ಮರಣಕಾಲದಲ್ಲಿ ಯೋಗಿನ್ (ಸ್ವಾಮಿ ಯೋಗಾನಂದ) ಮುಕ್ತಿ ಪಡೆಯಬೇಕೆಂದು ಇಚ್ಛಿಸಿದ. ಗಿರೀಶಬಾಬು, "ಇಲ್ಲಿ ಕೇಳು ಯೋಗಿನ್ ಮುಕ್ತಿಗಾಗಿ ಇಚ್ಛಿಸಬೇಡ—ಗುರುಮಹಾರಾಜರನ್ನು ಈ ಭೂಮಂಡಲ ವನ್ನೆಲ್ಲಾ ವ್ಯಾಪಿಸಿ ಸೂರ್ಯಚಂದ್ರರನ್ನು ಕಣ್ಣುಗಳನ್ನಾಗಿ ಹೊಂದಿರುವಂತೆ ಭಾವಿಸಬೇಡ. ಗುರುಮಹಾರಾಜರು ನಮ್ಮೊಡನೆ ಹೇಗಿದ್ದರೋ ಹಾಗೇ ಯೋಚಿಸುತ್ತಾ ಅವರ ಹತ್ತಿರ ಹೋಗು" ಎಂದ. ದೇವತೆಗಳು, ದೇವ ದೂತರು ಯಾರೇ ಆಗಲಿ ಎಲ್ಲರೂ ಈ ಭೂಮಂಡಲದಲ್ಲಿ ಜನ್ಮವೆತ್ತ ಬೇಕು. ಅವರು ತಮ್ಮ ಸೂಕ್ಷ್ಮಶರೀರದಲ್ಲಿ ತಿನ್ನುವುದಕ್ಕಾಗಲಿ, ಮಾತಾ ಡುವುದಕ್ಕಾಗಲಿ ಆಗುವುದಿಲ್ಲ. ಅದಕ್ಕೇ ಆ ಸ್ಥಿತಿಯಲ್ಲಿ ಅವರು ದೀರ್ಘ ಕಾಲ ಇರಲಾರರು.

ಶಿಷ್ಯ :— ಅವರು ತಿನ್ನದೆ, ಮಾತಾಡದೆ ತಮ್ಮ ದಿನವನ್ನು ಹೇಗೆ ಕಳೆಯುವರು?

ಶ್ರೀಮಾತೆ :— ಯುಗಾಂತರದವರೆಗೆ ಅವರು ಮರದ ವಿಗ್ರಹ

ಗಳಂತೆ ಇರಬೇಕು. ರಾಮೇಶ್ವರದಲ್ಲಿ ರಾಜಭೂಷಗಳಿಂದ ಅಲಂಕರಿಸಿ ನಿಲ್ಲಿಸಲ್ಪಟ್ಟಿರುವ ರಾಜವಿಗ್ರಹಗಳಂತೆ! ದೇವರಿಗೆ ಬೇಕಾದಾಗ ಅವರನ್ನು ಆ ಸ್ಥಳದಿಂದ ಕೆಳಗಿಳಿಸುವನು. ಯಮಲೋಕ, ಸತ್ಯಲೋಕ, ಧ್ರುವ ಲೋಕವೇ ಮುಂತಾಗಿ ಅನೇಕ ಲೋಕಗಳಿವೆ. ಗುರು ಮಹಾರಾಜರು ಸ್ವಾಮಿ ವಿವೇಕಾನಂದರನ್ನು ಸಪ್ತಋಷಿಮಂಡಲದಿಂದ ಕರೆತಂದುದಾಗಿ ಹೇಳುತ್ತಿದ್ದರು. ಅವರ ಮಾತುಗಳೆಲ್ಲ ವೇದವಾಕ್ಯಗಳು. ಅವು ಎಂದೂ ಅನೃತವಾಗಲಾರವು.

ಶಿಷ್ಯ:- ಹಾಗಾದರೆ ನಾವೂ ಹಾಗೆಯೇ ಮರದ ಅಥವಾ ಮಣ್ಣಿನ ವಿಗ್ರಹದಂತಾಗುತ್ತೇವೆಯೆ?

ಶ್ರೀಮಾತೆ:-ಇಲ್ಲ! ನೀವು ಗುರುಮಹಾರಾಜರನ್ನು ಸೇವಿಸುತ್ತೀರಿ. ಎರಡು ಬಗೆಯ ಭಕ್ತವರ್ಗದವರಿದ್ದಾರೆ. ಒಂದು ವರ್ಗದ ಭಕ್ತರು ಈ ಭೂಮಿಯಲ್ಲಿರುವಂತೆ ದೇವರ ಸೇವೆಯಲ್ಲಿ ನಿರತರಾಗಿರುತ್ತಾರೆ. ಮತ್ತೊಂದು ವರ್ಗದವರು ಯುಗಾಂತರಗಳಿಂದಲೂ ವಿಗ್ರಹಗಳಂತೆ ಧ್ಯಾನದಲ್ಲಿ ತಲ್ಲೀನರಾಗಿದ್ದಾರೆ.

ಶಿಷ್ಯ:- ತಾಯಿ, ಗುರುಮಹಾರಾಜರು, ಈಶ್ವರಕೋಟಿಗಳು ತಾವು ಮುಕ್ತರಾಗಿದ್ದರೂ ಈ ಕಾರ್ಯಕಾರಣ ಪ್ರಪಂಚಕ್ಕೆ ಹಿಂತಿರುಗಿ ಬರ ಬಹುದು. ಇತರರಿಗೆ ಆಗುವುದಿಲ್ಲ ಎನ್ನುತ್ತಿದ್ದರು. ಇದರ ಅರ್ಥವೇನು?

ಶ್ರೀಮಾತೆ:- ಈಶ್ವರಕೋಟಿಯು ನಿರ್ವಾಣಪದವಿಯನ್ನು ಪಡೆದ ಮೇಲೂ ತನ್ನ ಮನಸ್ಸನ್ನು ಅದರಿಂದ ಬೇರ್ಪಡಿಸಿ ಈ ಸಾಧಾರಣ ಪ್ರಪಂಚದಲ್ಲಿರಬಲ್ಲನು.

ಶಿಷ್ಯ:- ದೇವರಲ್ಲಿ ತಲ್ಲೀನವಾಗಿದ್ದ ಮನಸ್ಸನ್ನು ಹೇಗೆ ಈ ಜಗತ್ತಿನೆಡೆಗೆ ತಿರುಗಿಸಲು ಸಾಧ್ಯ. ಒಂದು ಮಡಕೆಯಲ್ಲಿದ್ದ ನೀರನ್ನು ಕೊಳದ ನೀರಿನೊಳಕ್ಕೆ ಸುರಿದಮೇಲೆ ಆ ನೀರನ್ನು ಬೇರ್ಪಡಿಸಲು ಹೇಗೆ ಸಾಧ್ಯ?

ಶ್ರೀಮಾತೆ:- ಎಲ್ಲರಿಗೂ ಹಾಗೆ ಮಾಡಲಾಗುವುದಿಲ್ಲ. ಕೇವಲ ಪರಮಹಂಸರಿಗೆ ಮಾತ್ರ ಸಾಧ್ಯ. ಹಂಸ ಹಾಲಿನಿಂದ ನೀರಿನ್ನು ಬೇರ್ಪಡಿಸಿ ಆ ಹಾಲನ್ನು ಕುಡಿಯಬಲ್ಲದು.

ಶಿಷ್ಯ:- ಎಲ್ಲರೂ ಆಶಾರಹಿತರಾಗಬಲ್ಲರೆ?

ಶ್ರೀಮಾತೆ:- ಹಾಗಿದ್ದರೆ ಈ ಸೃಷ್ಟಿಯ ಕೊನೆ ಎಂದೋ ಆಗು ತ್ತಿತ್ತು. ಈ ಸೃಷ್ಟಿ ನಡೆಯುತ್ತಿರುವುದೇ ಜನರೆಲ್ಲಾ ಆಶಾರಹಿತರಾಗಿಲ್ಲದೆ

ಇರುವುದರಿಂದ. ಆಶಾಪೂರಿತರಾದ ಜನರು ಬಾರಿಬಾರಿಗೂ ಜನ್ಮವೆತ್ತು ತ್ತಿರುವರು.

ಶಿಷ್ಯ:– ಗಂಗಾನದಿ ನೀರಿನ ಮಧ್ಯದಲ್ಲಿ ನಿಂತುಕೊಂಡು ಪ್ರಾಣ ಬಿಟ್ಟರೆ ಆ ಮನುಷ್ಯ ಏನಾಗುವನು?

ಶ್ರೀಮಾತೆ:– ಜನ್ಮವಿಮುಕ್ತರಾಗಬೇಕಾದರೆ ಆಸೆಯ ಕುರುಹು ಲವಲೇಶವೂ ಇರಬಾರದು. ಇದ್ದರೆ ಯಾವುದರಿಂದಲೂ ಪ್ರಯೋಜನ ವಿಲ್ಲ. ಆಸೆಯನ್ನು ಬಿಡದಿದ್ದಲ್ಲಿ ಈ ಜಗತ್ತಿನಲ್ಲಿ ಇದೇ ಕಡೆಯ ಜನ್ಮ ವಾದರೂ ಅವನಿಗೆ ಏನು ಉಪಯೋಗ?

ಶಿಷ್ಯ:–ತಾಯಿ, ಈ ಪ್ರಪಂಚ ಅನಂತವಾದುದು. ದೂರದೊಂದು ಕ್ಷೇತ್ರದಲ್ಲಿ ನಡೆಯುವುದನ್ನು ಯಾರು ಹೇಳಬಲ್ಲರು. ಆ ಅಸಂಖ್ಯಾತ ನಕ್ಷತ್ರಗ್ರಹಗಳ ಕ್ಷೇತ್ರದಲ್ಲಿ ಯಾವ ನರಪ್ರಾಣಿಯೂ ವಾಸಿಸುತ್ತಿಲ್ಲ ಎಂದು ಯಾರು ಹೇಳಬಲ್ಲರು?

ಶ್ರೀಮಾತೆ:– ಈ ಮಾಯಾ ಪ್ರಪಂಚದಲ್ಲಿ ಕೇವಲ ದೇವರೊಬ್ಬನೇ ಸರ್ವಜ್ಞನಾದುದರಿಂದ ಅವನಿಗೆ ಮಾತ್ರ ಎಲ್ಲವೂ ಸಾಧ್ಯ. ಆ ನಕ್ಷತ್ರ ಗ್ರಹಗಳ ರಾಜ್ಯದಲ್ಲಿ ಯಾವ ಜೀವಂತ ಪ್ರಾಣಿಯೂ ಇಲ್ಲದಿರಬಹುದು.

ಅದೇ ವರ್ಷದ ಮಳೆಗಾಲದಲ್ಲಿ ಒಂದು ದಿನ ಸ್ವಾಮಿ ಶಾರದಾ ನಂದ, ಯೋಗಿನ್‌ಮಾ, ಗುಲಾಬ್‌ಮಾ ಮತ್ತು ಇನ್ನೂ ಇತರ ಭಕ್ತರು ಕಮಾರಪುಕುರದಿಂದ ಜಯರಾಮವಟಿಗೆ ಬಂದರು. ಯೋಗಿನ್‌ಮಾ ದಾರಿಯಲ್ಲಿ ಜಾರಿಬಿದ್ದು, ಸ್ವಲ್ಪ ಗಾಯವಾಗಿ ರಕ್ತ ಹರಿಯಿತು. ಜಯರಾಮವಟಿಗೆ ಎಲ್ಲರಿಗಿಂತ ಮುಂಚೆ ನಾನು ಹಿಂತಿರುಗಿ ಶ್ರೀಮಾತೆಯವರಿಗೆ ಯೋಗಿನ್‌ಮಾಗೆ ಆದ ಅಪಘಾತವನ್ನು ಹೇಳಿದೆ. ಶ್ರೀಮಾತೆ ವ್ಯಸನದಿಂದ, "ಗುಲಾಪ್‌ಮಾ ಹೊರಡುವ ಮುಂಚೆ 'ಯೋಗಿನ್ ಇಂದು ನಮ್ಮೊಡನೆ ಬರುತ್ತಿದ್ದಾಳೆ. ಎಷ್ಟು ಬಾರಿ ದಾರಿಯಲ್ಲಿ ಬೀಳುವಳೊ ನೋಡೋಣ' ಎಂದು ಹೇಳಿದಳು. ಗುಲಾಪ್‌ಮಾ ಮಾತುಗಳ ಸತ್ಯತೆಗಾಗಿ ಯೋಗಿನ್ ಬಿದ್ದಳು. ಎಷ್ಟೇ ಆದರೂ ಅದು ಸಾಧುವಿನ ಬಾಯಿಂದ ಹೊರಟ ಮಾತುಗಳು. ಆಕೆ ಸಾಧನೆಮಾಡುತ್ತಾಳೆ. ಆದ್ದರಿಂದ ಆಕೆಯ ಮಾತು ಸತ್ಯವಾಗುತ್ತದೆ. ಆದ್ದರಿಂದಲೇ ಸಾಧುವಾದವನು ಯಾರ ವಿಷಯಕ್ಕೇ ಆಗಲಿ, ಏನೂ ಹೇಳಬಾರದು."

* * *

ಉದ್ಬೋಧನ ಆಫೀಸು, ಕಲ್ಕತ್ತ, ೧೬ ನೇ ಜನವರಿ, ೧೯೧೨.

ಬೆಳಗ್ಗೆ ಶ್ರೀಮಾತೆಯವರ ಕೊಠಡಿಯಲ್ಲಿ ನಾನಿದ್ದೆ. ಶ್ರೀಮಾತೆಯವರಿಗೆ ಹೀಗೆಂದೆ: "ತಾಯಿ, ಶ್ರೀಚೈತನ್ಯನು ಒಂದು ದಿನ ನಾರಾಯಣಿಯನ್ನು, 'ನಿನಗೆ ಕೃಷ್ಣನಲ್ಲಿ ಭಕ್ತಿಯುಂಟಾಗಲಿ' ಎಂದು ಹರಸಿದನು. ಉತ್ತರಕ್ಷಣದಲ್ಲಿಯೇ ಆ ಮೂರು ನಾಲ್ಕು ವರುಷದ ಹುಡುಗಿಗೆ ಮಹತ್ತಾದ ಪರಿಣಾಮವುಂಟಾಗಿ 'ಓ! ಕೃಷ್ಣಾ, ಓ! ಕೃಷ್ಣಾ!' ಎಂದು ನೆಲದಮೇಲೆಲ್ಲಾ ಹೊರಳಾಡತೊಡಗಿದಳು. ನಾರದರ ವಿಚಾರವಾಗಿಯೂ ಒಂದು ಕಥೆ ಇದೆ. ದೇವರ ಸಾಕ್ಷಾತ್ಕಾರವಾದಮೇಲೆ ಒಮ್ಮೆ ಅವರಿಗೆ ಒಂದು ಇರುವೆಯಮೇಲೆ ಕನಿಕರವುಂಟಾಯಿತು. ಅವರು ತಮ್ಮಲ್ಲೇ, 'ಅನೇಕ ಬಾರಿ ಮನುಷ್ಯ ಜನ್ಮ ಪಡೆದು ಕಠಿಣತಪಶ್ಚರ್ಯೆಮಾಡಿದಮೇಲೆ ನನಗೆ ಮುಕ್ತಿ ಲಭಿಸಿದೆ. ಈ ಇರುವೆ ಮನುಷ್ಯಜನ್ಮ ತಾಳಬೇಕಾದರೇ ದೀರ್ಘಕಾಲ ಕಾಯಬೇಕು' ಎಂದು ಯೋಚಿಸಿದರು. ಆಗ ಮೃದುವಾಗಿ, 'ಮುಕ್ತಿಪಡೆ' ಎಂದು ಹರಸಿದರು. ಮರುಗಳಿಗೆಯಲ್ಲೇ ಆ ಇರುವೆ ಮನುಷ್ಯರೂಪವಲ್ಲದ ಇತರ ಹಕ್ಕಿ, ಮೃಗ ಮುಂತಾದ ಜನ್ಮಹೊಂದಿ ಕಟ್ಟಕಡೆಗೆ ಮನುಷ್ಯ ದೇಹ ಹೊಂದಿತು. ಅನೇಕ ಮನುಷ್ಯಜನ್ಮಗಳನ್ನು ಕಳೆದು, ಅನುಭವಿಸಿ ಒಂದೊಂದು ಮೆಟ್ಟಲಾಗಿ ಆಧ್ಯಾತ್ಮಿಕ ಜೀವನದಕಡೆ ತಿರುಗಿ, ದೇವರ ಪ್ರಾರ್ಥನೆಮಾಡಿ ಮುಕ್ತಿಪಡೆಯಿತು. ನಾರದರು ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಈ ಅಸಂಖ್ಯಾತ ಜನ್ಮಗಳನ್ನು ನೋಡಿದರು. ಆದ್ದರಿಂದ ಒಬ್ಬ ಮಹಾತ್ಮನ ಅನುಗ್ರಹದಿಂದ ಆ ಕ್ಷಣದಲ್ಲಿಯೇ ನಾವು ಮುಕ್ತಾತ್ಮರಾಗಬಹುದು."

ಶ್ರೀಮಾತೆ:- ಅದು ನಿಜ.

ಶಿಷ್ಯ:- ಆದರೆ ಯಾರು ಇತರರ ಪಾಪರಾಶಿಯನ್ನು ತಾವೇ ಹೊರುವರೋ ಅಂತಹವರ ದೇಹ ಬಹುಕಾಲ ನಿಲ್ಲಲಾರದು, ಅನೇಕರ ಮೋಕ್ಷಕ್ಕೆ ಸಾಧನವಾಗುವ ಬದಲು ಒಬ್ಬನಿಗಾಗಿ ಸೊರಗಿಹೋಗುವುದು ಎಂದು ಕೇಳಿರುವೆ.

ಶ್ರೀಮಾತೆ:- ಇದೂ ನಿಜ. ಮತ್ತೂ ಆ ಮಹಾತ್ಮನು ತನ್ನ ಶಕ್ತಿಯನ್ನು ಕಳೆದುಕೊಳ್ಳುವನು. ಕಠಿಣತಪಶ್ಚರ್ಯೆ, ಆಧ್ಯಾತ್ಮಿಕ ಸಾಧನೆಯಿಂದ ಗಳಿಸಿದ ಶಕ್ತಿ, ಅನೇಕ ಆತ್ಮಗಳ ಮುಕ್ತಿಗೆ ಬದಲಾಗಿ ಒಬ್ಬನ

ಸಲುವಾಗಿ ವ್ಯಯವಾಗುವುದು. ಗುರುಮಹಾರಾಜರು, "ನಾನು ಗಿರೀಶನ ಪಾಪಗಳನ್ನೆಲ್ಲಾ ತೆಗೆದುಕೊಂಡುದರಿಂದ ಈ ಬಾಧೆಗಳನ್ನೆಲ್ಲಾ ಅನುಭವಿಸುತ್ತಿರುವೆ" ಎನ್ನುತ್ತಿದ್ದರು. ಆದರೆ ಈಗ ಗಿರೀಶಕೂಡ ದುಃಖಿಯಾಗಿದ್ದಾನೆ.

ಶಿಷ್ಯ:– ತಾಯಿ, ಒಮ್ಮೆ ನನಗೊಂದು ಕನಸುಬಿತ್ತು. ಒಬ್ಬ ಕೆದರಿದ ಕೂದಲುಳ್ಳ ಮನುಷ್ಯನು ಬಂದು ನಿಮ್ಮನ್ನು ತನಗೆ ತಕ್ಷಣವೇ ಏನನ್ನೋ ಮಾಡಬೇಕೆಂದು ಪೀಡಿಸಿದ. ಅವನು ಹಿಂದೆ ನಿಮ್ಮಿಂದ ಉಪದೇಶ ಪಡೆದಿದ್ದ. ಆದರೆ ಅವನು ಮಾತ್ರ ಸಾಧನೆ ಮಾಡುತ್ತಿರಲಿಲ್ಲ. ನೀವು, "ನಾನು ಅವನಿಗೇನನ್ನಾದರೂ ಮಾಡಿದರೆ ನಾನು ಬದುಕುವುದಿಲ್ಲ. ನನ್ನ ದೇಹ ತಕ್ಷಣ ಬಿದ್ದುಹೋಗುವುದು" ಎಂದು ಹೇಳಿದಿರಿ. ನಾನು, ಹೃತ್ಪೂರ್ವಕ ಆ ಮನುಷ್ಯನಿಗೇನನ್ನೂ ಮಾಡಬೇಡಿರೆಂದು ಬೇಡಿಕೊಂಡೆ. "ಅವನಿಗೆ ನೀವೇಕೆ ಮಾಡಬೇಕು? ಅವನ ಮೋಕ್ಷವನ್ನು ಅವನೇ ಸಂಪಾದಿಸಿಕೊಳ್ಳಲಿ. ಅವನು ತಪಸ್ಸುಮಾಡಲಿ" ಎಂದೆ. ಅವನು ಪುನಃಪುನಃ ಬಲಾತ್ಕರಿಸಿದಮೇಲೆ ನೀವು ಬೇಸರಪಟ್ಟು ಆತನ ಎದೆ ಮತ್ತು ಕತ್ತನ್ನು ಸವರಿ ಏನನ್ನೋ ಮಾಡಿದಿರಿ. ಮತ್ತು ಬಾರಿ ಬಾರಿಗೂ, "ನಾನು ಅವನಿಗಾಗಿ ಏನನ್ನಾದರೂ ಮಾಡಿದರೆ ನಾನು ಬದುಕುವುದಿಲ್ಲ. ನನ್ನ ದೇಹ ಬಿದ್ದುಹೋಗುವುದು" ಎಂದು ಹೇಳುತ್ತಿದ್ದಿರಿ. ನಂತರ ನನ್ನ ಕನಸು ಮಾಯವಾಯಿತು. ಹಾಗಾದರೆ ಮನುಷ್ಯ ದೇಹಧಾರಣೆಮಾಡಿದುದರಿಂದ ಶಕ್ತಿಗೆ ಒಂದು ಎಲ್ಲೆಯುಂಟಾಗುವುದೆ?

ಶ್ರೀಮಾತೆ:– ಹೌದು. ಎಷ್ಟೋ ವೇಳೆ ಅನೇಕರು ಬಂದು ಬಾರಿ ಬಾರಿಗೂ ನನ್ನನ್ನು ಕೇಳುವಾಗ ಬೇಸರ ಬಂದು ನಾನು, "ಎಂದಾದರೊಂದು ದಿನ ಈ ದೇಹ ನಾಶವಾಗುವುದು. ಈ ಗಳಿಗೆಯಲ್ಲೇ ಬಿದ್ದುಹೋಗಲಿ. ಅವರಿಗೆ ಮೋಕ್ಷಕೊಡುತ್ತೇನೆ" ಎಂದು ಯೋಚಿಸುವೆ.

ಶಿಷ್ಯ:–ಮಾತೆ, ದೇವರ ದರ್ಶನವಾದರೆ ಜ್ಞಾನ ಲಭಿಸಿದಂತೆಯೇ? ಅಥವಾ ಬೇರೆ ಅರ್ಥವಿದೆಯೆ?

ಶ್ರೀಮಾತೆ:–ಇವುಗಳ ಪ್ರಾಪ್ತಿಯಲ್ಲದೆ ಮತ್ತೇನು? ಈಶ್ವರಸಾಕ್ಷಾತ್ಕಾರಪಡೆದ ಮನುಷ್ಯನಿಗೆ ಎರಡು ಕೊಂಬು ಬೆಳೆಯುವುದೇನು?

ಶಿಷ್ಯ:– ನಿಮ್ಮ ಅನೇಕ ಶಿಷ್ಯರು ದೇವರ ದರ್ಶನವನ್ನು ಬೇರೆ

ವಿಧದಲ್ಲಿ ವಿವರಿಸುವರು. ಈ ಬಾಹ್ಯ ಕಣ್ಣುಗಳಿಂದಲೇ ಅವನನ್ನು ನೋಡುತ್ತೇವೆಂದೂ ಮಾತಾಡುತ್ತೇವೆಂದೂ ಹೇಳುವರು.

ಶ್ರೀಮಾತೆ:— ಹೌದು, ಅವರು, "ನಮಗೆ ತಂದೆಯನ್ನು ದಯವಿಟ್ಟು ತೋರಿಸಿ" ಎಂದು ಕೇಳುತ್ತಾರೆ. ಆದರೆ ಅವರು (ಶ್ರೀರಾಮಕೃಷ್ಣರು) ಯಾರ ಪಿತನೂ ಅಲ್ಲ. ಗುರು, ಕರ್ತ, ತಂದೆ, ಈ ಮೂರು ಪದ ಮುಳ್ಳಿನಂತೆ ಅವರನ್ನು ಚುಚ್ಚುತ್ತಿದ್ದವು. ಎಷ್ಟೋಂದು ಮಂದಿ ಋಷಿಗಳು ಯುಗಯುಗಾಂತರಗಳಿಂದ ಅವನಿಗಾಗಿ ತಪಸ್ಸುಮಾಡಿದರು! ಆದರೂ ಅವರಿಗೆ ಭಗವಂತ ಪ್ರತ್ಯಕ್ಷನಾಗಲಿಲ್ಲ. ಈಗ ಜನರು ತಪಸ್ಸು ಮಾಡುವುದಿಲ್ಲ. ಈಗಲೇ ಅವರಿಗೆ ದೇವರನ್ನು ತೋರಿಸಬೇಕು! ಅದು ನನಗಾಗುವುದಿಲ್ಲ. ಗುರುಮಹಾರಾಜರು ಎಂದು ಹಾಗೆ ಯಾರಿಗಾದರೂ ದೇವರನ್ನು ತೋರಿಸಿದ್ದರೆ?

ಶಿಷ್ಯ:— ತಾಯಿ, ನಾನೆಷ್ಟೋ ಬಾರಿ ಕೇಳಿರುವೆ. ಯಾರು ಹುಡುಕುವರೋ ಅವರಿಗೆ ಸಿಗುವುದಿಲ್ಲ. ಯಾರು ಹುಡುಕುವುದಿಲ್ಲವೊ ಅವರಿಗೆ ಸಿಗುತ್ತದೆ. ಇದರ ಅರ್ಥವೇನು?

ಶ್ರೀಮಾತೆ:— ದೇವರು ಮಗುವಿನಂತೆ. ಕೆಲವರು ಬೇಡಿದರೂ ಅದು ಕೊಡುವುದಿಲ್ಲ. ಮತ್ತೆ ಕೆಲವರು ಕೇಳದೆಯೆ ಕೊಡುತ್ತದೆ. ಬಹುಶಃ ಇವರು ತಮ್ಮ ಹಿಂದಿನ ಜನ್ಮದಲ್ಲಿಯೋ ಅನೇಕ ಸತ್ಕಾರ್ಯಗಳನ್ನು ಮಾಡಿರಬೇಕು. ಆದರಿಂದ ಅಂಥವರಿಗೆ ಬೇಗ ದೇವರ ಕೃಪೆ ಲಭಿಸುವುದು.

ಶಿಷ್ಯ:— ಹಾಗಾದರೆ ದೇವರ ಕೃಪೆಯಲ್ಲೂ ಪಕ್ಷಪಾತವಿದೆಯೆ?

ಶ್ರೀಮಾತೆ:— ಹೌದು. ಪ್ರತಿಯೊಂದೂ ಕರ್ಮದಮೇಲೆ ನಿಂತಿದೆ. ಯಾವಾಗ ಕರ್ಮಸವೆಯುವುದೋ ಆಗ ಭಗವತ್ಸಾಕ್ಷಾತ್ಕಾರ ಲಭಿಸುವುದು. ಅದೇ ಅವನ ಕಡೆಯ ಜನ್ಮ.

ಶಿಷ್ಯ:— ಜ್ಞಾನಾರ್ಜನೆಗೆ, ಕರ್ಮಕ್ಷಯ, ಸಾಧನೆ, ಮತ್ತು ಕಾಲ ಆವಶ್ಯಕವೆಂದು ಒಪ್ಪಿಕೊಳ್ಳುವೆ. ಆದರೆ ದೇವರು, "ನಮ್ಮವನೇ" ಆದರೆ ತನ್ನಿಚ್ಛೆ ಬಂದರೆ ಅವನು ಭಕ್ತನಿಗೆ ಪ್ರತ್ಯಕ್ಷ್ಯನಾಗಲಾರನೆ?

ಶ್ರೀಮಾತೆ:— ಅದು ನಿಜ. ಆದರೆ ಯಾರಿಗೆ ದೇವರು "ನಮ್ಮವನೆ" ಎಂಬ ಶ್ರದ್ಧೆ ಇದೆ? ಎಲ್ಲರೂ ಈ ವ್ರತ, ಆ ಸಾಧನೆ ಎಲ್ಲವನ್ನೂ ತಮ್ಮ ಕರ್ತವ್ಯವೆಂದು ಮಾಡುತ್ತಾರೆ. ಆದರೆ ಎಷ್ಟು ಮಂದಿ ದೇವರನ್ನು ಹುಡುಕುತ್ತಾರೆ?

ಶಿಷ್ಯ:– ಒಮ್ಮೆ ನಿಮಗೆ ಮಗುವನ್ನು ತಾಯ ಆರೈಕೆ ಪ್ರೇಮದಿಂದ ಬೇರ್ಪಡಿಸಿದರೆ ಅದು ತಾಯನ್ನು ಗುರುತಿಸಲಾರದೆಂದು ಹೇಳಿದ್ದೆ.

ಶ್ರೀಮಾತೆ:– ನಿಜ, ನೀನು ಹೇಳುವುದು ಸತ್ಯ. ಅವನನ್ನು ನೋಡಿದ ಹೊರತು ಅವನನ್ನು ಪ್ರೀತಿಸುವುದು ಹೇಗೆ? ನೋಡು, ನೀನು ನನ್ನನ್ನು ನೋಡಿರುವೆ. ನಾನು ನಿನ್ನ ತಾಯಿ, ನೀನು ನನ್ನ ಮಗು.

* * * *

೧ ನೇ ಫೆಬ್ರುವರಿ, ೧೯೧೨.

ಸಂಧ್ಯಾಕಾಲ, ಒಂಭತ್ತು ಘಂಟೆ ಸಮಯ. ಶ್ರೀಮಾತೆಯವರ ಬಳಿ ನಾನು ಹೋದೆ. ಆ ದಿನವೆಲ್ಲಾ ನಾನು ಅವರನ್ನು ನೋಡೇ ಇರಲಿಲ್ಲ.

ಶ್ರೀಮಾತೆ:– ಬೆಳಗ್ಗೆಯಿಂದ ಎಲ್ಲಿದ್ದೆ?

ಶಿಷ್ಯ:– ನಾನು ಕೆಳಗಡೆ ಲೆಕ್ಕದಲ್ಲಿ ಮಗ್ನನಾಗಿದ್ದೆ.

ಶ್ರೀಮಾತೆ:– ಪ್ರಕಾಶ ಹಾಗೆಂದು ಹೇಳಿದ. ಪ್ರಪಂಚವನ್ನು ತ್ಯಜಿಸಿದ ಯಾರಿಗಾದರೂ ಈ ಕೆಲಸಗಳು ರುಚಿಸುತ್ತವೇನು? ಒಮ್ಮೆ ಗುರುಮಹಾರಾಜರ ವೇತನದ ವಿಷಯವಾಗಿ ಲೆಕ್ಕಾಚಾರದಲ್ಲಿ ತಪ್ಪಾಗಿ ಹೋಗಿತ್ತು. ನಾನು ಅವರನ್ನು ದೇವಸ್ಥಾನದ ಮೇಲ್ವಿಚಾರಕನೊಡನೆ ಈ ವಿಷಯವಾಗಿ ಮಾತನಾಡುವಂತೆ ಕೇಳಿಕೊಂಡೆ. ಆದರೆ ಅವರು, "ಎಂತಹ ಅವಮಾನ! ಲೆಕ್ಕಾಚಾರದ ವಿಷಯಕ್ಕೆ ನಾನು ತೊಡಗಲೆ?" ಎಂದರು. ಒಮ್ಮೆ ನನ್ನ ಹತ್ತಿರ, "ಯಾರು ದೇವರ ನಾಮವನ್ನು ಉಚ್ಚರಿಸುವರೋ ಅವರಿಗೆಂದಿಗೂ ದುಃಖವಿಲ್ಲ. ಇನ್ನು ನಿನ್ನ ವಿಷಯ ಮಾತನಾಡಬೇಕಾದ್ದೆ ಇಲ್ಲ" ಎಂದು ಹೇಳಿದ್ದರು. ಇವು ಅವರ ಬಾಯಿಂದ ಬಂದ ಮಾತುಗಳು. ತ್ಯಾಗವೇ ಅವರ ಆಭರಣವಾಗಿತ್ತು.

೯ನೇ ಫೆಬ್ರುವರಿ, ೧೯೧೨.

ಹಿಂದಿನ ರಾತ್ರಿ ಗಿರೀಶಚಂದ್ರ ಘೋಷರು ಸ್ವರ್ಗಸ್ಥರಾಗಿದ್ದರು. ಅವರ ವಿಚಾರವಾಗಿ ನಾನು ಶ್ರೀಮಾತೆಯವರನ್ನು, "ತಾಯಿ, ಯಾರು ದೇಹ ಪ್ರಜ್ಞೆಯಿಲ್ಲದೆ ಪ್ರಾಣಬಿಡುವರೋ ಅಂಥಹವರು ಮುಂದೆ ದೊಡ್ಡ ಆಧ್ಯಾತ್ಮಿಕಸ್ಥಿತಿ ಮುಟ್ಟುವರೆ?

ಶ್ರೀಮಾತೆ:– ಸಾಯುವಾಗ ನಮ್ಮ ಮನಸ್ಸಿನಲ್ಲಿ ಯಾವ ಯೋಚನೆ ಪ್ರಬಲವಾಗಿರುವುದೋ ಅದೇ ಸತ್ತಮೇಲೆ ಆ ಆತ್ಮದ ಕ್ರಿಯೆಯನ್ನು ನಿಷ್ಕರ್ಷಿಸುವುದು.

ಶಿಷ್ಯ:– ಅದು ನಿಜ. ಸಂಜೆ ಆರು ಗಂಟೆಗೆ ಗಿರೀಶಬಾಬು, "ಜೈ ರಾಮಕೃಷ್ಣ" ಎಂದು ಉದ್ಘೋಷಿಸಿ ನಂತರ ಪ್ರಜ್ಞೆ ತಪ್ಪಿದನು. ನಂತರ ಅವನಿಗೆ ಪುನಃ ಪ್ರಜ್ಞೆ ಬರಲೇ ಇಲ್ಲ. ಕೆಲವು ನಿಮಿಷಗಳಿಗೆ ಮುಂಚೆ ಅವನು ಪದೇಪದೇ 'ಹೋಗೋಣ,.... ನನ್ನನ್ನು ಸ್ವಲ್ಪ ಹಿಡಿದುಕೊ' ಮುಂತಾಗಿ ಹೇಳುತ್ತಿದ್ದ. ನಾನು, 'ನೀನೇಕೆ ನಾವು ಹೋಗೋಣ ಎನ್ನುತ್ತಿರುವೆ! ಶ್ರೀರಾಮಕೃಷ್ಣರ ನಾಮವನ್ನು ಜಪಿಸು. ಅದರಿಂದ ಒಳ್ಳೆಯದಾಗುವುದು' ಎಂದೆ. ನಾನು ಒಂದೆರಡು ಬಾರಿ ಹಾಗೆ ಹೇಳಿದ ನಂತರ ಗಿರೀಶಬಾಬು, 'ನನಗೆ ಅದು ಗೊತ್ತಿಲ್ಲವೇನು?' ಎಂದ. ಆಗ 'ಅವನಿಗೆ ಅಂತರಜ್ಞಾನವಿದೆ' ಎಂದುಭಾವಿಸಿದೆ.

ಶ್ರೀಮಾತೆ:–ಅವನು ಯಾವ ಯೋಚನೆಯಲ್ಲಿ ಮಗ್ನನಾಗಿದ್ದನೋ ಆ ಯೋಚನೆಯಲ್ಲಿರುವಾಗಲೇ ಪ್ರಜ್ಞೆ ತಪ್ಪಿದನು. ಅವರೆಲ್ಲಾ (ಶ್ರೀರಾಮ ಕೃಷ್ಣರ ಶಿಷ್ಯರು) ಅವರಿಂದ ಬಂದವರು, ಅವರಲ್ಲಿಗೆ (ಗುರುಮಹಾ ರಾಜರು) ಹಿಂತಿರುಗುವರು. ಅವರೆಲ್ಲಾ ಅವರ ತೋಳ್ಗಳು, ಪಾದಗಳು, ಕೂದಲು ಮುಂತಾದುವುಗಳಿಂದ ಬಂದವರು. ಅವರೆಲ್ಲಾ ಅವರ ಅವಯವಗಳು.

೨೧ ನೇ ಫೆಬ್ರುವರಿ, ೧೯೧೨.

ಬೆಳಿಗ್ಗೆ ಏಳು ಗಂಟೆ. ಶ್ರೀಮಾತೆ ಕುರ್ಚಿಯ ಹತ್ತಿರ ನೆಲದಮೇಲೆ ಕುಳಿತಿದ್ದರು. ದ್ವಾರಕಾಯಾತ್ರೆಗೆ ಹೋಗಿದ್ದ ಸ್ವಾಮಿ ನಿರ್ಭಯಾನಂದರು ಶ್ರೀಮಾತೆಯವರಿಗೆ ಗಿರ್ನಾರ್ ಬೆಟ್ಟದ ದತ್ತಾತ್ರೇಯ ಪ್ರಸಾದವನ್ನು ಕಳುಹಿಸಿದ್ದರು.

ಶ್ರೀಮಾತೆ:– ದತ್ತಾತ್ರೇಯ ಯಾರು?

ಶಿಷ್ಯ:– ಅವನೂ ಜಡಭರತ ಮುಂತಾದವರಂತೆ ಒಬ್ಬ ದೊಡ್ಡ ಯೋಗಿ, ಒಬ್ಬ ಈಶ್ವರಕೋಟಿ.

ಶ್ರೀಮಾತೆ:– ಗುರುಮಹಾರಾಜರ ಕೆಲವು ಮಕ್ಕಳಂತೆ.

ಶಿಷ್ಯ:– ಗುರುಮಹಾರಾಜರ ಶಿಷ್ಯರಲ್ಲಿ ಕೆಲವು ಈಶ್ವರಕೋಟಿಗಳು ತಮ್ಮ ಹೆಂಡತಿ ಮಕ್ಕಳೊಡನೆ ಪ್ರಾಪಂಚಿಕತೆಯಲ್ಲಿ ಮುಳುಗಿದ್ದರಲ್ಲ. ಅದು ಹೇಗೆ?

ಶ್ರೀಮಾತೆ:– ಹೌದು. ಅವರೆಲ್ಲಾ ಅಲ್ಲಿ ಕೊಳೆಯುತ್ತಿದ್ದಾರೆ. ಪೂರ್ಣನಿಗೆ ಬಲಾತ್ಕಾರದಿಂದ ಮದುವೆಯಾಯಿತು. ಅವನ ಬಂಧುಗಳು,

" ನೀನು ಅವರ (ಶ್ರೀರಾಮಕೃಷ್ಣರ) ಹತ್ತಿರ ಹೋದರೆ, ಅವರು ಕಲ್ಕತ್ತೆಗೆ ಬಂದಾಗ ಅವರ ಗಾಡಿಯನ್ನು ಕಲ್ಲು ಇಟ್ಟಿಗೆಗಳಿಂದ ಪುಡಿಪುಡಿಮಾಡುತ್ತೇವೆ" ಎಂದು ಹೆದರಿಸಿದರು.

ಶಿಷ್ಯ– ಅವರು ಮದುವೆಯಾಗಿರಬಹುದು. ನಾಗಮಹಾಶಯರೂ ಮದುವೆಯಾಗಿದ್ದರು. ಆದರೆ ಮಕ್ಕಳನ್ನು ಪಡೆದು ಪ್ರಾಪಂಚಿಕ ಜೀವನ ನಡೆಸುವುದೆಂದರೆ!

ಶ್ರೀಮಾತೆ:– ಬಹುಶಃ ಅವರಿಗೆ ಅಂತಹ ಆಸೆ ಇದ್ದಿರಬಹುದು. ನಿನಗೆ ಒಂದು ಮಾತು ಹೇಳುತ್ತೇನೆ. ಈ ಸೃಷ್ಟಿಯಲ್ಲಿ ಬಹು ಗೊಂದಲವಿದೆ. ಗುರುಮಹಾರಾಜರು ಒಬ್ಬನಿಂದ ಒಂದು ಕೆಲಸ, ಮತ್ತೊಬ್ಬನಿಂದ ಇನ್ನೊಂದು ಕೆಲಸವನ್ನು ಮಾಡಿಸುತ್ತಾರೆ. ಓ! ಅದನ್ನು ವಿವರಿಸಲಸದಳ! ಒಬ್ಬ ಗೃಹಸ್ಥ ಕೂಡ ಈಶ್ವರಕೋಟಿಯಾಗಬಹುದು. ಅದರಲ್ಲೇನು ಹಾನಿಯಿದೆ?

ರಾಧುಗೆ ಬಹಳ ಖಾಯಿಲೆಯಾಗಿತ್ತು. ಜ್ವರ, ನೋವು, ಎಲ್ಲಾ ಇತ್ತು. ಶ್ರೀಮಾತೆ ಅವಳ ವಿಷಯವಾಗಿ ವ್ಯಥೆಪಟ್ಟರು. ಶ್ರೀಮಾತೆ, "ನಾನಿರುವವರೆಗೂ ಆಕೆಗೆ ಗುಣವಾಗುವುದಿಲ್ಲ. ನಾನು ಹೋದಮೇಲೆ ಅವಳನ್ನಾರು ನೋಡಿಕೊಳ್ಳುವವರು? ಆಕೆ ಆಗ ಬದುಕುತ್ತಾಳೆಯೆ?" ಎಂದರು.

ಶಿಷ್ಯ:– ಇಡೀ ದಿನ ಎಷ್ಟೊಂದು ಭಕ್ತರ ಗುಂಪು! ನಿಮಗೆ ಒಂದು ನಿಮಿಷಕೂಡ ವಿಶ್ರಾಂತಿ ಇಲ್ಲ.

ಶ್ರೀಮಾತೆ:– ಹಗಲೂ ರಾತ್ರೆ ನಾನು ಗುರುಮಹಾರಾಜರಿಗೆ, "ಈ ಜನಸಂದಣಿಯನ್ನು ಕಡಿಮೆಮಾಡಿ ನನಗೆ ಸ್ವಲ್ಪ ವಿಶ್ರಾಂತಿಕೊಡಿ" ಎಂದು ಪ್ರಾರ್ಥಿಸುವೆ. ಆದರೆ ವಿಶ್ರಾಂತಿ ಸಿಗುವುದು ಅಪರೂಪ. ನಾನು ಈ ದೇಹದಲ್ಲಿರುವವರೆಗೆ ಕೆಲವು ದಿನ ಹೀಗೆ ಆಗುವುದು. ಗುರುಮಹಾರಾಜರ ಉಪದೇಶ ಎಲ್ಲೆಲ್ಲೂ ಹರಡಿದೆ. ಆದ್ದರಿಂದಲೇ ಅಷ್ಟುಮಂದಿ ಇಲ್ಲಿಗೆ ಬರುವರು....ಗುರುಮಹಾರಾಜರ ಕೊನೆಯ ದಿನಗಳಲ್ಲಿಯೂ ಇಂತಹ ಗುಂಪು ಅವರ ದರ್ಶನಕ್ಕಾಗಿ ಬರುತ್ತಿತ್ತು. ನಾನು ಜನರನ್ನು ಹಿಂತಿರುಗಿಸಲು, "ನಿಮ್ಮ ಕುಲ ಗುರುವಿನಿಂದ ದೀಕ್ಷೆಪಡೆಯಿರಿ. ಅವರು ನಿಮ್ಮಿಂದ ಏನನ್ನಾದರೂ ಅಪೇಕ್ಷಿಸುತ್ತಾರೆ. ನಾನೇನನ್ನೂ ಅಪೇಕ್ಷಿಸುವುದಿಲ್ಲ" ಎಂದು ಎಷ್ಟೊ ಪ್ರಯತ್ನಪಡುವೆ. ಆದರೆ ಅವರು

ನನ್ನನ್ನು ಬಿಡುವುದಿಲ್ಲ. ಅವರು ಅಳುತ್ತಾರೆ, ನನ್ನ ಹೃದಯ ಕರಗಿ ಹೋಗುವುದು. ಸರಿ, ನನ್ನ ಕೊನೆಗಾಲ ಸಮೀಪಿಸುತ್ತಿದೆ. ನಾನು ಬದುಕಿರುವ ಸ್ವಲ್ಪ ದಿನಗಳು ಈ ರೀತಿ ಕಳೆದುಹೋಗುವುವು.

ಶಿಷ್ಯ:– ಇಲ್ಲ, ತಾಯಿ, ನೀವೇಕೆ ಹೀಗೆ ಹೇಳುವಿರಿ? ನೀವು ಹುಷಾರಾಗಿರುವಿರಿ. ನಿಮಗೆ ಆವಖಾಯಿಲೆಯೂ ಇಲ್ಲ. ನೀವೇಕೆ ಈ ಪ್ರಪಂಚವನ್ನು ಬಿಟ್ಟುಹೋಗಬೇಕೆಂದಿರುವಿರಿ? ಹಾಗೆಂದೂ ಹೇಳಬೇಡಿ.

ಈ ಕಾಲದಲ್ಲಿ ಶ್ರೀಮಾತೆ ಬಹಳ ವ್ಯಾಕುಲದಲ್ಲಿದ್ದರು. ಎಲ್ಲಾ ವಿಷಯಕ್ಕೂ ಉದಾಸೀನರಾಗಿದ್ದರು.

ಮಧ್ಯಾಹ್ನದ ವೇಳೆಯಲ್ಲಿ ಬಿಸಿರಕ್ತದ ತರುಣನೋರ್ವನು ಶ್ರೀಮಾತೆಯವರಲ್ಲಿಗೆ ಬಂದು ಒಂದು ದೊಡ್ಡ ಗೊಂದಲವೆಬ್ಬಿಸಿದನು. ಈ ವಿಷಯವಾಗಿ ಮಾತನಾಡುತ್ತಾ ಶ್ರೀಮಾತೆ, “ಗುರುಮಹಾರಾಜರು ಯಾರಿಗೂ ನನ್ನಿರವನ್ನು ತಿಳಿಯಗೊಟ್ಟಿರಲಿಲ್ಲ. ಬಹಳ ಜೋಪಾನದಿಂದ ನನ್ನನ್ನು ಕಾಪಾಡಿದರು. ಈಗ ಅದಕ್ಕೆ ಸಂಪೂರ್ಣ ವಿರೋಧ. ಸಂತೆಯಲ್ಲಿ ತಮಟೆ ಶಬ್ದಮಾಡುವಂತೆ ನನ್ನನ್ನು ಸಾರುತ್ತಿದ್ದಾರೆ. ಮಹೇಂದ್ರನಾಥಗುಪ್ತನೇ ಇದಕ್ಕೆ ಮೂಲ. ಜನರು ಈಗ ಕಥಾಮೃತ(ಶ್ರೀರಾಮಕೃಷ್ಣ ವಚನಾಮೃತ) ವನ್ನು ತಿಳಿದಿರುವರು. ಹಿಂದೆ ಗಿರೀಶಬಾಬು ಗುರುಮಹಾರಾಜರಿಗೆ ತನ್ನ ಜವಾಬ್ದಾರಿಯನ್ನು ಹೊರಸಿ ಅವರನ್ನು ನಿಂದಿಸುತ್ತಿದ್ದನು. ಈಗ ನನ್ನನ್ನೂ ಜನರು ಹಾಗೆಯೇ ಮಾಡುತ್ತಿದ್ದಾರೆ.

ಯಾವಾಗಲೂ ನನ್ನನ್ನು ಉಪದೇಶಕೊಡಬೇಕೆಂದು ಅವರೇಕೆ ಪೀಡಿಸುವುದು? ಬೇಲೂರು ಮಠದಲ್ಲಿ ನನ್ನ ಮಕ್ಕಳಿದ್ದಾರೆ (ಗುರುಮಹಾರಾಜರ ಶಿಷ್ಯರು). ಅವರಿಗಾವ ಶಕ್ತಿಯೂ ಇಲ್ಲವೇನು? ಎಲ್ಲರನ್ನೂ ನನ್ನ ಬಳಿ ಕಳುಹಿಸುತ್ತಿದ್ದಾರೆ. ತಮ್ಮ ಕುಲ ಗುರುವನ್ನು ಬಿಡುವುದರಿಂದ ದೊಡ್ಡ ಪಾಪಮಾಡಿದಂತಾಗುವುದೆಂದು ಕೂಡ ನಾನು ಹೇಳಿ ನೋಡಿದೆ. ಆದರೂ ಅವರು ನನ್ನನ್ನು ಬಿಡುವುದಿಲ್ಲ.

ಶಿಷ್ಯ:– ನೀವಿಚ್ಛೆಪಡುವುದರಿಂದ ಭಕ್ತರಿಗುಪದೇಶಕೊಡುವಿರಿ.

ಶ್ರೀಮಾತೆ:– ಇಲ್ಲ. ನಾನು ಕೇವಲ ಕನಿಕರದಿಂದ ಹಾಗೆ ಮಾಡುವೆ. ಅವರು ನನ್ನನ್ನು ಬಿಡುವುದಿಲ್ಲ. ಅಳುತ್ತಾರೆ. ನನಗೆ ದಯೆಯುಂಟಾಗಿ, ಅದರಿಂದ ಅವರಿಗೆ ಉಪದೇಶಕೊಡುವೆ. ಅದೂ

ಅಲ್ಲದೆ ಅದರಿಂದ ನನಗೇನು ಉಪಯೋಗ? ನಾನು ಭಕ್ತರಿಗೆ ಉಪದೇಶ ಕೊಟ್ಟರೆ ಅವರ ಪಾಪಗಳನ್ನೂ ತೆಗೆದುಕೊಳ್ಳಬೇಕು. ಆಗ ನಾನು "ಈ ದೇಹ ಎಂದೋ ಬಿದ್ದು ಹೋಗುತ್ತದೆ. ಅವರಿಗೆ ಸಾಕ್ಷಾತ್ಕಾರ ವಾಗಲಿ" ಎಂದು ಇಚ್ಛಿಸುತ್ತೇನೆ.

೨ನೇ ಮೇ, ೧೯೧೨.

ಶಿಷ್ಯ:– ತಾಯಿ, ನಮಗೆ ದೇವರ ದರ್ಶನವಾದ ಹೊರತು ನಾವು ಜೀವಿಸಿ ಫಲವೇನು? ಒಮ್ಮೆ ನಾನೊಬ್ಬ ಮುಸಲ್ಮಾನ ಫಕೀರ ನನ್ನು, "ಒಬ್ಬ ಮನುಷ್ಯ ಸರೋವರ ಅಥವಾ ನದಿಯ ದಡದಲ್ಲಿ ತನ್ನ ಗಾಳದೊಂದಿಗೆ ಮೀನುಹಿಡಿಯಲು ಕುಳಿತಿರುತ್ತಾನೆ. ಒಂದು ಕೊಚ್ಚೆ ಗುಂಡಿಯ ಹತ್ತಿರ ಅವನು ಹಾಗೆ ಮಾಡುವುದಿಲ್ಲ. ನೀವು ಯಾರ ಸಲುವಾಗಿ ಈ ಧಾರ್ಮಿಕವೃತ್ತಿಯನ್ನವಲಂಬಿಸಿದಿರೊ ಅವರ ದರ್ಶನ ಕ್ಷಣ ಕಾಲವಾದರೂ ನಿಮಗೆ ಲಭಿಸಿರುವುದೆ? ಎಂದು ಕೇಳಿದೆ.

ಶ್ರೀಮಾತೆ:– ಅವನೇನೆಂದ?

ಶಿಷ್ಯ:– ಅವನೇನು ಹೇಳಬಲ್ಲ?

ಶ್ರೀಮಾತೆ:–(ಸ್ವಲ್ಪ ಹೊತ್ತು ಯೋಚಿಸಿ) ನೀನು ಸರಿಯಾದ್ದನ್ನೇ ಹೇಳಿದೆ. ಅದು ನಿಜ. ಯಾವ ಬಗೆಯ ಸಾಕ್ಷಾತ್ಕಾರವೂ ಆಗದಿದ್ದಲ್ಲಿ ಏನು ಫಲ? ಆದರೆ ಆಧ್ಯಾತ್ಮಿಕ ವಿಷಯಗಳಲ್ಲಿ ನಿರಂತರ ಶ್ರದ್ಧೆ ಇರಬೇಕು.

ಶಿಷ್ಯ:–ಅಂದು ಶರತ್‌ಮಹಾರಾಜರು, ಸ್ವಾಮಿ ವಿವೇಕಾನಂದರೂ ಕೂಡ ಈ ವಿಷಯವಾಗಿ, "ಪಕ್ಕದ ಕೊಠಡಿಯಲ್ಲಿ ಚಿನ್ನದ ಗಟ್ಟಿ ಇರುವು ದನ್ನು ಈ ಕೊಠಡಿಯಿಂದ ಕಳ್ಳ ನೋಡುತ್ತಾನೆ. ಆ ಅಮೂಲ್ಯ ಲೋಹ ಅವನ ಕೈಗೆ ಸಿಗದಂತೆ ಮಧ್ಯೆ ಒಂದು ಗೋಡೆ ಅಡ್ಡ ಇದೆ. ಈ ಸಂದರ್ಭ ದಲ್ಲಿ ಆ ಕಳ್ಳನಿಗೆ ಎಲ್ಲಿಯಾದರೂ ನಿದ್ದೆ ಬರುವುದೆ? ಅಷ್ಟು ಕಾಲವೂ ಅವನು ಆ ಚಿನ್ನದ ಗಟ್ಟಿಯನ್ನು ಹೇಗೆ ತೆಗೆದುಕೊಳ್ಳಬಹುದೆಂದು ಯೋಚಿಸುತ್ತಿರುವನು" ಎಂದು ಹೇಳಿದರು. ಅದರಂತೆಯೇ ಯಾವ ಮನುಷ್ಯ ದೇವರೆಂಬ ವಸ್ತು ಇದೆ ಎಂದು ದೃಢವಾಗಿ ನಂಬಿರು ವನೋ ಅಂಥಹವನಿಗೆ ಪ್ರಾಪಂಚಿಕ ಜೀವನದಲ್ಲಿ ಮುಳುಗಲು ಹೇಗೆ ಸಾಧ್ಯ?

ಶ್ರೀಮಾತೆ:– ಅದು ನಿಜ.

ಶಿಷ್ಯ:– ನೀವೇನು ಹೇಳಿದರೂ ತ್ಯಾಗ, ರಾಗದ್ವೇಷರಹಿತರಾಗು

ವುದು ಮುಖ್ಯ. ನಮಗೆಂದಾದರೂ ಅದು ಲಭಿಸುವುದೆ?

ಶ್ರೀಮಾತೆ:–ಖಂಡಿತ ಲಭಿಸುವುದು. ನೀನು ಗುರುಮಹಾರಾಜರಲ್ಲಿ ಶರಣಾದರೆ ಎಲ್ಲವೂ ಲಭಿಸುವುದು. ತ್ಯಾಗವೇ ಅವರ ತೇಜಸ್ಸು. ಅವರು ಎಲ್ಲವನ್ನೂ ತ್ಯಜಿಸಿದ್ದುದರಿಂದ ಅವರ ಹೆಸರನ್ನುಚ್ಚರಿಸಿ ನಾವು ತಿನ್ನುತ್ತೇವೆ. ಆನಂದಿಸುತ್ತೇವೆ. ಅಂತಹ ಪೂರ್ಣತ್ಯಾಗಿಯ ಭಕ್ತರೂ ಕೂಡ ಮಹಾತ್ಮರಾಗಿರಬೇಕೆಂದು ಜನ ನಂಬುವರು.

ಓ! ಒಂದು ದಿನ ಅವರು ನಹಬತ್‌ನಲ್ಲಿ ನನ್ನಕೊಠಡಿಯೊಳಕ್ಕೆ ಬಂದರು. ಅವರ ಚಿಕ್ಕ ಕೈಚೀಲದಲ್ಲಿ ಮಸಾಲೆ ಇರಲಿಲ್ಲ. ಅವರು ಅದನ್ನು ಆಗಾಗ್ಗೆ ಅಗಿಯುತ್ತಿದ್ದರು. ನಾನು ಅವರಿಗೆ ಇಲ್ಲೇ ಅಗಿಯಲು ಸ್ವಲ್ಪಕೊಟ್ಟು, ಇನ್ನೂ ಸ್ವಲ್ಪ ಒಂದು ಚಿಕ್ಕ ಪೊಟ್ಟಣದಲ್ಲಿ ಕೊಟ್ಟು ತಮ್ಮ ಕೊಠಡಿಗೆ ತೆಗೆದುಕೊಂಡು ಹೋಗುವಂತೆ ಹೇಳಿದೆ. ಅವರು ಕೊಠಡಿಗೆ ಹೋಗಲು ಹೊರಟರು. ಅಲ್ಲಿಗೆ ಹೋಗುವ ಬದಲು ಗಂಗಾ ತೀರಕ್ಕೆ ನೇರವಾಗಿ ಹೋದರು. ಅವರು ದಾರಿಯನ್ನು ನೋಡಲಿಲ್ಲ. ದಾರಿಯ ನೆನಪೂ ಅವರಿಗಿರಲಿಲ್ಲ. ಅವರು, “ ತಾಯಿ, ನಾನು ಮುಳುಗಿ ಹೋಗಲೆ? ” ಎಂದು ಪುನಃಪುನಃ ಹೇಳಿದರು. ನನಗೆ ದಾರುಣವ್ಯಥೆಯಾಗಿ ಕಳವಳವಾಯಿತು. ನದಿ ತುಂಬಿ ಹರಿಯುತ್ತಿತ್ತು. ನಾನಾಗ ಇನ್ನೂ ತರುಣಿ, ನನ್ನ ಕೋಣೆಯಿಂದ ಹೊರಗೆ ಹೋಗುತ್ತಿರಲಿಲ್ಲ. ನಾನಾರನ್ನು ಅವರ ಬಳಿ ಕಳುಹಲಿ! ಕಡೆಗೊಮ್ಮೆ ಕಾಳಿದೇವಾಲಯಕ್ಕೆ ಸೇರಿದ ಬ್ರಾಹ್ಮಣನೊಬ್ಬ ನನ್ನ ಕೊಠಡಿಯಿದ್ದ ಕಡೆ ಬರುತ್ತಿರುವುದನ್ನು ನೋಡಿದೆ. ಅವನ ಮೂಲಕ ಊಟಮಾಡುತ್ತಿದ್ದ ಹೃದಯನನ್ನು ಕರೆಸಿ ಹೇಳಿದೆ. ಅವನು ಊಟವನ್ನು ಬಿಟ್ಟೆದ್ದು ಓಡಿಹೋಗಿ ಅವರನ್ನು ಕೊಠಡಿಗೆ ಕರೆತಂದ. ಒಂದು ಕ್ಷಣ ತಡವಾಗಿದ್ದರೆ ಅವರು ಗಂಗೆಯಲ್ಲಿ ಮುಳುಗಿಹೋಗುತ್ತಿದ್ದರು!

ಶಿಷ್ಯ:– ಅವರೇಕೆ ನದಿಯ ದಕ್ಷಿಣಕ್ಕೆ ಹೋದರು?

ಶ್ರೀಮಾತೆ:– ನಾನವರ ಕೈಯಲ್ಲಿ ಆ ಸಾಮಾನನ್ನು ಕೊಟ್ಟುದರಿಂದ ಅವರಿಗೆ ಹಾದಿಯೇ ಕಾಣಿಸಲಿಲ್ಲ. ಸಾಧುವಾದವನು ಯಾವ ಸಾಮಾನನ್ನೂ ಇಟ್ಟುಕೊಳ್ಳಬಾರದು. ಅವರ ತ್ಯಾಗ ಪೂರ್ತಿಯಾಗಿ ಶೇಕಡ ನೂರರಷ್ಟಿತ್ತು.

ಒಮ್ಮೆ ಪಂಚವಟಿಗೆ ಒಬ್ಬ ವೈಷ್ಣವ ಸಾಧು ಬಂದನು. ಮೊದಲು

ಅವನು ತಾನು ಬಹಳ ದೊಡ್ಡ ತ್ಯಾಗಿಯಂತೆ ತೋರ್ಪಡಿಸಿಕೊಂಡನು. ಕೊನೆಕೊನೆಗೆ ಇಲಿಯಂತೆ ಮಡಿಕೆ, ಬಟ್ಟಲು, ಜಾಡಿ, ಕಾಳು, ಅಕ್ಕಿ, ಜೀರಿಗೆ ಮುಂತಾದುವನ್ನು ಶೇಖರಿಸಲಾರಂಭಿಸಿದನು. ಗುರುಮಹಾರಾಜರು ಇದನ್ನು ನೋಡಿ ಒಂದು ದಿನ, "ಅಯ್ಯೋ ಪಾಪ,! ಈ ಬಾರಿ ಅವನು ಹಾಳಾಗುತ್ತಾನೆ" ಎಂದರು. ಮಾಯೆಯಲ್ಲಿ ಇನ್ನೇನು ಅವನು ಸಿಕ್ಕಿ ಬೀಳುವುದರಲ್ಲಿದ್ದ. ಗುರುಮಹಾರಾಜರು ಅವನಿಗೆ ತ್ಯಾಗದ ವಿಷಯವಾಗಿ ಬಹಳ ಬುದ್ಧಿ ಹೇಳಿ ಆ ಸ್ಥಳವನ್ನು ಬಿಟ್ಟುಹೋಗುವಂತೆ ಹೇಳಿದರು. ನಂತರ ಅವನು ಹೊರಟುಹೋದ.

ಭಕ್ತನೊಬ್ಬನು ಶ್ರೀಮಾತೆಗೆ ನಮಸ್ಕಾರಮಾಡಲು ಬಂದ. ಅವನು ಹೊರಡುತ್ತಿರುವಾಗ ಶ್ರೀಮಾತೆ, "ಹರೀಶನಮೇಲೆ ಮಮತೆ ತೋರಿದ್ದರಿಂದ ನಾನು ಮೋಸಹೋದೆ. ಅದಕ್ಕೇ ಈಗ ನಾನು ಯಾರ ಮುಂದೆಯೂ ನನ್ನ ಮಾನಸಿಕ ಭಾವನೆಯನ್ನು ತೋರಗೊಡುವುದದಿಲ್ಲ" ಎಂದರು.

೧ ನೇ ಮೇ, ೧೯೧೨.

ಮಧ್ಯಾಹ್ನದ ವೇಳೆ ನಾನು ಶ್ರೀಮಾತೆಗೆ ಪತ್ರಗಳನ್ನೋದಲು ಮಹಡಿಗೆ ಹೋದೆ.

ಶಿಷ್ಯ:— ಮಾವನ ಮನೆಯಲ್ಲಿರುವ ಭಕ್ತನ ಮಗಳೊಬ್ಬಳು ತಮ್ಮನ್ನು ನೋಡಲು ಇಲ್ಲಿಗೆ ಬರಲಿಚ್ಛಿಸುವಳೆಂದು ಬರೆದಿದ್ದಾಳೆ. ತನ್ನ ಪ್ರಣಾಮಗಳನ್ನು ಕಳುಹಿಸಿದ್ದಾಳೆ. ತಾನು ನಿಮಗೆ ಬರೆದಿರುವ ವಿಷಯವಾಗಿ ತನ್ನ ಪತಿಯ ಬಂಧುಗಳಾರಿಗೂ ತಿಳಿಸಕೂಡದೆಂದು ಕೇಳಿಕೊಂಡಿದ್ದಾಳೆ.

ಶ್ರೀಮಾತೆ:— ಹಾಗಾದರೆ ಅವಳಿಗಾವ ಉತ್ತರವನ್ನೂ ಬರೆಯಬೇಡ. ಪುನಃ ಅವಳು ತನ್ನ ಬಂಧುಗಳಿಂದ ನಾನು ಇದನ್ನು ಮುಚ್ಚಿಡಬೇಕೆಂದು ಬಯಸಿದ್ದಾಳೆ. ನನಗೆ ಇಂತಹ ಕಣ್ಣುಮುಚ್ಚಾಲೆ ಗೊತ್ತಿಲ್ಲ. ಜಯರಾಮವಟಿಯಲ್ಲಿದ್ದಾಗ ಅಂಚೆ ತರುವ ಯೋಗೀಂದ್ರನ ಹತ್ತಿರ ನಾನು ಎಲ್ಲರಿಗೂ ಪತ್ರ ಬರೆಸುತ್ತಿದ್ದೆ. ಅನೇಕರು, "ನಮ್ಮ ಪತ್ರಗಳನ್ನೆಲ್ಲ ಈ ಅಂಚೆಯವನು ನೋಡುತ್ತಾನೆಯೆ" ಎಂದು ಗೊಣಗುಟ್ಟಿದರು. ಅಂಥಹ ಮನುಷ್ಯನ ಹತ್ತಿರ ನಾನು ಪತ್ರ ಬರೆಸುವುದನ್ನು ಅವರು ಇಷ್ಟಪಡಲಿಲ್ಲ. ಏಕೆ? ನನ್ನಲ್ಲಿ ಯಾವ ಮುಚ್ಚುಮರೆಯೂ ಇಲ್ಲ. ಯಾರು

ಇಚ್ಛೆಪಟ್ಟರೂ ನನ್ನ ಪತ್ರಗಳನ್ನು ಓದಬಹುದು.

ಮತ್ತೊಬ್ಬ ಭಕ್ತನು ಶ್ರೀಮಾತೆಯುವರು ಎಂದು ಜಯರಾಮ ಬಾಟಿಗೆ ಹಿಂತಿರುಗುವರೆಂದು ವಿಚಾರಿಸಿದ. ನಾನು ಮಾತೆಗೆ, "ನೀವು ಜಗದ್ಧಾತ್ರಿ ಪೂಜೆಯವೇಳೆಗೆ ಅಲ್ಲಿಗೆ ಹಿಂತಿರುಗುವಿರೆಂದು ಆ ಭಕ್ತನಿಗೆ ಹೇಳುವೆ" ಎಂದೆ.

ಶ್ರೀಮಾತೆ:— ಬೇಡ, ಬೇಡ. ಯಾವುದನ್ನು ಈ ಪ್ರಪಂಚದಲ್ಲಿ ನೆಚ್ಚುವುದಕ್ಕೆ ಸಾಧ್ಯ? ನಾನು ಎಲ್ಲಿರುವೆನೆಂಬುದು ಸಂಪೂರ್ಣವಾಗಿ ದೇವರ ಕೈಯಲ್ಲಿದೆ. ಮನುಷ್ಯ ಇಂದು ಇರುವನು ನಾಳೆ ಇಲ್ಲ.

ಶಿಷ್ಯ:— ಓ ತಾಯಿ, ನೀವೇಕೆ ಹೀಗೆ ಮಾತಾಡುವಿರಿ? ನೀವು ಬದುಕಿರುವುದರಿಂದಲೇ ಅಷ್ಟೊಂದು ಮಂದಿ ನಿಮ್ಮಲ್ಲಿಗೆ ಬಂದು ಮನಶ್ಶಾಂತಿ ಪಡೆಯುವರು.

ಶ್ರೀಮಾತೆ:— ಅದು ನಿಜ.

ಶಿಷ್ಯ:— ದಯವಿಟ್ಟು ನಮಗೋಸುಗ ಬದುಕಿರಿ.

ಶ್ರೀಮಾತೆ ಮೃದುವಾಗಿ ಗದ್ಗದ ಕಂಠದಿಂದ, "ಅಯ್ಯೊ! ಅವರೆಲ್ಲಾ ನನ್ನನ್ನು ಎಷ್ಟು ಪ್ರೀತಿಸುವರು. ನಾನೂ ಅವರನ್ನು ಪ್ರೀತಿಸುವೆ" ಎಂದರು. ಮಾತೆಯ ಕಣ್ಣುಗಳು ಅಶ್ರುಪೂರಿತವಾದುವು. ಶಿಷ್ಯನು ಗಾಳಿ ಬೀಸುತ್ತಿದ್ದ. ಕರುಣಾಪೂರಿತ ನುಡಿಗಳಿಂದ ಶ್ರೀಮಾತೆ, "ಮಗು ಹೃತ್ಪೂರ್ವಕ ಹರಸುವೆ. ನೀನು ಬಹುಕಾಲ ಬದುಕಿ ಭಕ್ತಿಪಡೆದು ಶಾಂತಿಯನ್ನನುಭವಿಸು. ಶಾಂತಿಯೇ ಮುಖ್ಯ. ಪ್ರತಿಯೊಬ್ಬರಿಗೂ ಶಾಂತಿ ಆವಶ್ಯಕ" ಎಂದು ಆಶೀರ್ವದಿಸಿದರು.

ಶಿಷ್ಯ:— ಶ್ರೀಮಾತೆ, ನನ್ನ ಮನಸ್ಸಿನಲ್ಲಿ ಯಾವಾಗಲೂ ಒಂದು ವಿಚಾರ ಬರುತ್ತದೆ. ನನಗೇಕೆ ಗುರುಮಹಾರಾಜರ ದರ್ಶನವಾಗಲಿಲ್ಲ? ಅವರು, "ನಮ್ಮವರೇ" ಆದರೂ ನಮಗೇಕೆ ಪ್ರತ್ಯಕ್ಷವಾಗುವುದಿಲ್ಲ? ಅವರಿಚ್ಛೆಯಿಂದ ಇದನ್ನು ಮಾಡಲಾಗುವುದಿಲ್ಲವೆ?

ಶ್ರೀಮಾತೆ:— ಅದು ನಿಜ. ನೀವು ಇಷ್ಟೊಂದು ದುಃಖಸಂಕಟದಿಂದ ನರಳುತ್ತಿರುವಾಗಲೂ ಅವರೇಕೆ ಪ್ರತ್ಯಕ್ಷವಾಗಲಾರರನೆಂಬುದನ್ನು ಯಾರು ಹೇಳಬಲ್ಲರು? ಒಮ್ಮೆ ಬಲರಾಮನ ಹೆಂಡತಿಗೆ ಖಾಯಿಲೆಯಾಗಿತ್ತು. ಗುರುಮಹಾರಾಜರು, "ಕಲ್ಕತ್ತೆಗೆ ಹೋಗಿ ಅವಳನ್ನು ನೋಡಿಕೊಂಡು ಬಾ" ಎಂದರು. ನಾನು, "ಹೇಗೆ ಹೋಗಲಿ? ಇಲ್ಲಿ ಗಾಡಿ

ಅಥವಾ ಮತ್ತಾವ ವಾಹನವಾಗಲಿ ಇಲ್ಲವಲ್ಲ" ಎಂದೆ. ಗುರುಮಹಾರಾಜರು ಉದ್ಗಾರದಿಂದ, "ಏನು! ಬಲರಾಮನ ಸಂಸಾರ ಅಷ್ಟೊಂದು ತೊಂದರೆಯಲ್ಲಿದೆ, ನೀನು ಹೋಗಲು ಹಿಂಜರಿಯುತ್ತೀಯೇನು! ನೀನು ಕಾಲ್ನಡಗೆಯಲ್ಲೇ ಕಲ್ಕತ್ತೆಗೆ ಹೋಗುವೆಯಂತೆ" ಎಂದರು. ಕಡೆಗೆ ಒಂದು ಪಲ್ಲಕ್ಕಿಯಲ್ಲಿ ಕುಳಿತು ದಕ್ಷಿಣೇಶ್ವರದಿಂದ ನಾನು ಹೊರಟೆ. ಅವಳಿಗೆ ಖಾಯಿಲೆಯಾಗಿದ್ದಾಗ ನಾನು ಎರಡು ಬಾರಿ ಅಲ್ಲಿಗೆ ಹೋಗಿ ಬಂದೆ. ಮತ್ತೊಂದು ಸಲ ನಾನು ಶ್ಯಾಮ್‌ಪುಕೂರದಿಂದ ಕಾಲ್ನಡೆಗೆಯಲ್ಲಿ ರಾತ್ರಿ ಅಲ್ಲಿಗೆ ಹೋದೆ. ತೊಂದರೆಯಲ್ಲಿರುವ ಮನುಷ್ಯನನ್ನು ದೇವರು ಕಾಪಾಡದಿದ್ದಲ್ಲಿ ಮನುಷ್ಯನೆಲ್ಲಿರುತ್ತಿದ್ದನು?

ಶಿಷ್ಯ– ಮನುಷ್ಯನು ಈ ಭೌತಿಕ ಶರೀರದಲ್ಲಿರುವವರೆಗೂ ದುಃಖ ಸಂಕಟಗಳು ಅನಿವಾರ್ಯವೆಂದು ನನಗೆ ಗೊತ್ತಿದೆ. ಈ ದುಃಖದಿಂದ ಪಾರು ಮಾಡೆಂದು ನಾನು ಗುರುಮಹಾರಾಜರನ್ನು ಬೇಡುವುದಿಲ್ಲ. ಆದರೆ ನಮ್ಮ ದುಃಖತೊಂದರೆಗಳ ಮಧ್ಯೆ ಅವರೊಮ್ಮೆ ಕಾಣಿಸಿಕೊಂಡು ನಮ್ಮನ್ನು ಸಮಾಧಾನಮಾಡಬಾರದೆ?

ಶ್ರೀಮಾತೆ:– ನೀನು ಹೇಳುವುದು ನಿಜ. ಮಗು! ರಾಮನ ಮಗ (ಬಲರಾಮನ ಮೊಮ್ಮಗ) ಅಂದು ಸತ್ತುಹೋದ. ರಾಮನ ಹೆಂಡತಿ ಮತ್ತು ತಾಯಿ ಮನಶ್ಶಾಂತಿಗಾಗಿ ನನ್ನ ಬಳಿ ಬಂದರು. ಅವರ ದುಃಖ ಕೊಂಚಮಟ್ಟಿಗೆ ಶಮನವಾಯಿತು. ನಾನು ಗುರುಮಹಾರಾಜರ ಹತ್ತಿರ ಈ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದೆ. ಅವರು "ನನಗೆ ಇಂಥಹವು ಲಕ್ಷಗಟ್ಟಲೆ ಇವೆ. ನಾನು ನನ್ನ ಮೇಕೆಯನ್ನು ಬಾಲದಿಂದ ಅಥವಾ ಬೆನ್ನಿನಿಂದ ಕೊಯ್ಯುವೆ. ಈಗ ಅಥವಾ ನಂತರ ಅದನ್ನು ಕೊಲ್ಲುವೆ. ಅದು ನನ್ನ ಇಷ್ಟ" ಎಂದರು.

ಶಿಷ್ಯ :– ಅವರಿಗೆ ನಮ್ಮ ದುಃಖದ ಅರಿವಾಗುವುದಿಲ್ಲವೆ?

ಶ್ರೀಮಾತೆ:–ಆದರೆ ಅವರಿಗೆ ನಿಮ್ಮಂಥವರು ಬೇಕಾದಷ್ಟಿರುವರು. ಅವರು, "ಅದೊಂದು ಸಚ್ಚಿದಾನಂದದ ಸಾಗರ. ಅದರಲ್ಲಿ ಎಷ್ಟೊಂದು ಅಲೆಗಳೇಳುತ್ತವೆ. ಮಾಯವಾಗುತ್ತವೆ: ಅದಕ್ಕೆ ಕೊನೆ ಮೊದಲೇ ಇಲ್ಲ!" ಎನ್ನುತ್ತಿದ್ದರು.

ಶಿಷ್ಯ :– ಬೀದಿಹೋಕನಿಗೆ ಆಧ್ಯಾತ್ಮಿಕಜ್ಞಾನಪರಿಚಯ ಕೊಂಚವೂ ಇರುವುದಿಲ್ಲ. ಅಂಥಹವನು ಸುಖವಾಗಿರುತ್ತಾನೆ. ಆದರೆ ಯಾರಿಗೆ ಈ

ಆಧ್ಯಾತ್ಮಿಕ ಜ್ಞಾನ ಕೊಂಚ ಜಾಗ್ರತವಾಗಿರುವುದೋ, ಯಾರು ದೇವರ ಸಾಕ್ಷಾತ್ಕಾರಕ್ಕಾಗಿ ಹಂಬಲಿಸುತ್ತಿರುವರೋ ಅಂಥವರು ಅವನನ್ನು ನೋಡದಿದ್ದಲ್ಲಿ ಬಹಳ ವ್ಯಥೆಪಡುವರು. ಕೇವಲ ಅವರಿಗೆ ಮಾತ್ರ ಅದು ಎಂತಹ ನೋವೆಂದು ಗೊತ್ತು!

ಶ್ರೀಮಾತೆ:– ಓ! ಇದೆಲ್ಲಾ ಎಷ್ಟುನಿಜ! ಸಾಮಾನ್ಯ ಜನರು ಸುಖವಾಗೆ ಇದ್ದಾರೆ. ಅವರು ತಿನ್ನುತ್ತಾರೆ, ಕುಡಿಯುತ್ತಾರೆ, ನಲಿಯುತ್ತಾರೆ. ಭಕ್ತರ ಕಷ್ಟಕ್ಕೆ ಕೊನೆ ಮೊದಲೇ ಇಲ್ಲ.

ಶಿಷ್ಯ:– ಭಕ್ತರು ದುಃಖದಲ್ಲಿದ್ದರೆ ನಿಮಗೂ ದುಃಖವಾಗುವುದಿಲ್ಲವೆ?

ಶ್ರೀಮಾತೆ:– ನನಗೇಕಾಗಬೇಕು? ಯಾರು ಈ ಪ್ರಪಂಚವನ್ನು ಸೃಷ್ಟಿಸಿದ್ದಾನೋ ಅವನೇ ಎಲ್ಲವನ್ನೂ ನೋಡಿಕೊಳ್ಳುವನು.

ಶಿಷ್ಯ:– ಭಕ್ತರ ಸಲುವಾಗಿ ಪುನಃ ಈ ಪ್ರಪಂಚಕ್ಕೆ ಮನುಷ್ಯದೇಹ ಧಾರಣೆಮಾಡಿ ಹಿಂತಿರುಗಿ ಬರಲಿಚ್ಛಿಸುವುದಿಲ್ಲವೆ?

ಶ್ರೀಮಾತೆ:– ಈ ಮನುಷ್ಯದೇಹದಿಂದ ಎಷ್ಟೊಂದು ಯಾತನೆ! ಇನ್ನೊಮ್ಮೆ ಇದು ಬೇಡ! ಬೇಡ! ನಾನು ಪುನಃ ಹುಟ್ಟದಂತಾಗಲಿ! ಗುರು ಮಹಾರಾಜರು ಹಾಸಿಗೆ ಹಿಡಿದಿದ್ದಾಗ, ನಲ್ಲಿಕಾಯಿಯನ್ನು ತಿನ್ನಲಿಚ್ಛಿಸಿದರು. ದುರ್ಗಾಚರಣನು ಅನ್ನ ನಿದ್ರೆ ಬಿಟ್ಟು ಮೂರು ದಿನ ಅಲೆದಾಡಿ ಕಡೆಗೊಮ್ಮೆ ತಂದನು. ಗುರುಮಹಾರಾಜರು ಅವನಿಗೆ ಊಟಮಾಡು ವಂತೆ ಹೇಳಿ, ಆ ಆಹಾರವನ್ನು ಪ್ರಸಾದವನ್ನಾಗಿಮಾಡಲು ಸ್ವಲ್ಪ ಅನ್ನ ತಿಂದರು. ನಾನು ಅವರಿಗೆ, "ನೀವು ಅನ್ನವನ್ನು ಚೆನ್ನಾಗಿ ಊಟ ಮಾಡುತ್ತಿದ್ದೀರಲ್ಲ: ಹಾಗಾದರೆ ಅಂಬಲಿಯನ್ನೇಕೆ ಕುಡಿಯಬೇಕು? ಅದರ ಬದಲು ಅನ್ನವನ್ನೇ ತಿನ್ನುವುದು ವಾಸಿಯಲ್ಲವೆ?" ಎಂದೆ. ಅದಕ್ಕೆ ಗುರುಮಹಾರಾಜರು, "ಇಲ್ಲ! ಈ ಕೊನೆಯ ದಿನಗಳಲ್ಲಿ ನಾನು ಗಂಜಿಯನ್ನೇ ಕುಡಿವೆ" ಎಂದರು. ಅದು ಕೂಡ ಅವರಿಗೆ ಎಷ್ಟೊಂದು ದಾರುಣ ಯಾತನೆಯಾಗುತ್ತಿತ್ತು! ಆಗಿಂದಾಗ್ಗೆ ಅವರು ಮೂಗಿನಿಂದ ಅದನ್ನು ಬಿಸಾಡುತ್ತಿದ್ದರು.

ಗುರುಮಹಾರಾಜರು, "ನಾನು ನಿಮಗಾಗಿ ನೋವನ್ನನುಭವಿಸುತ್ತಿರುವೆ. ಇಡೀ ಪ್ರಪಂಚದ ಪಾಪರಾಶಿಯನ್ನು ನಾನು ಹೊತ್ತಿರುವೆ" ಎಂದರು. ಗಿರೀಶನ ಪಾಪವನ್ನು ಹೊತ್ತದ್ದರಿಂದ ಗುರುಮಹಾರಾಜರು

ಅಷ್ಟೊಂದು ಕಷ್ಟ ಅನುಭವಿಸಬೇಕಾಯಿತು.

ನಮ್ಮ ಕಷ್ಟಗಳೆಲ್ಲಾ ಭೂಮಿಯಲ್ಲಿರುವವರೆಗೆ ಮಾತ್ರ. ಮತ್ತೆಲ್ಲಿ ಹೀಗಿರುವುದು? ಜನರು ಕೊನೆಯಿಲ್ಲದಷ್ಟು ಕಷ್ಟವನ್ನು ತಮ್ಮ ಅಹಂ ಭಾವದಿಂದ ಅನುಭವಿಸಿ ಕೊನೆಗೆ, "ನಾನಲ್ಲ ನಾನಲ್ಲ ಎಲ್ಲಾ ನೀನೆ ದೇವರೆ!" ಎನ್ನುವರು.

ಶಿಷ್ಯ:– ನೀವು ಹೋದಮೇಲೆ ನಮ್ಮನ್ನು ನೆನಪಿನಲ್ಲಿಟ್ಟುಕೊಂಡಿರುವಿರಾ?

ಶ್ರೀಮಾತೆ:– ನಾನು ಹೋದಮೇಲೆ ಸಚ್ಚಿದಾನಂದನನ್ನು ಅನುಭವಿಸುತ್ತಿರುವಾಗ ಮರೆಯಬಹುದು. ಮಗು, ಕಾಲ ಅತಿ ಮುಖ್ಯ. ಮುಂದೇನಾಗುವುದೋ ಯಾರು ಬಲ್ಲರು?

ಶಿಷ್ಯ:– ನಿಜ ತಾಯಿ. ಎಲ್ಲವೂ ಈ ಕಾಲದ ಆಧಿಪತ್ಯಕ್ಕೆ ಒಳಪಟ್ಟಿದೆ. ಆದರೆ ಕಾಲಪುರುಷನ ಸ್ವಾಮಿಯೂ ಒಬ್ಬನಿದ್ದಾನೆ

ಶ್ರೀಮಾತೆ:– ಹೌದು, ಅದು ನಿಜ.

ಶಿಷ್ಯ:– ದಯವಿಟ್ಟು ನೀವು ಹುಷಾರಾಗಿ. ಎಲ್ಲವೂ ಸರಿಹೋಗುವುದು.

ಎಂಟುಗಂಟೆ ಸಮಯ. ಶ್ರೀಮಾತೆ, "ಈಗ ಎಂಟು ಗಂಟೆಯೆ? ಇರಬಹುದು. ಪೂಜಾ ಮಂದಿರದಲ್ಲಿ ಪೂಜೆಯವೇಳೆ ಸಮೀಪಿಸಿತು. ನಾನು ಅಲ್ಲಿಗೆ ಹೋಗುವೆ" ಎಂದರು.

ನಾನು ಅವರ ಟಪಾಲನ್ನು ತೆಗೆದುಕೊಂಡು ಮಹಡಿಗೆ ಹೋದೆ. ಕಾಶಿಯಲ್ಲಿ ಶ್ರೀಮಾತೆಯ ಶಿಷ್ಯರೊಬ್ಬರು ಸ್ವರ್ಗಸ್ಥರಾಗಿದ್ದರು. ಶ್ರೀಮಾತೆ, ಈ ಸಮಾಚಾರವನ್ನು ಕೇಳಿ, "ಎಲ್ಲರೂ ಒಂದುದಿನ ಸಾಯಬೇಕು. ಯಾವುದೋ ಒಂದು ಗುಂಡಿಯು ಅಥವಾ ಸರೋವರದ ಹತ್ತಿರ ಸಾಯದೆ ಕಾಶಿಯಲ್ಲಿ ಸತ್ತಿದ್ದಾನೆ"! ಎಂದು ಹೇಳಿದರು.

ಶ್ರೀಮಾತೆಯ ಸಹೋದರರಿಂದ ದುಡ್ಡಿಗಾಗಿ ಮತ್ತು ಅವರ ಸಂಸಾರದ ತಾಪತ್ರಯಗಳವಿಚಾರ ಕಾಗದ ಬಂದಿತ್ತು. ನಾನು ಶ್ರೀಮಾತೆಗೆ, "ಅವರಿಗೆ ಬೇಕಾದಷ್ಟು ದುಡ್ಡು ಬರುವಂತೆಮಾಡಿ. ಗುರುಮಹಾರಾಜರಿಗೆ ಈ ವಿಚಾರ ಹೇಳಿ. ಈ ಪ್ರಪಂಚವನ್ನು ಅನುಭವಿಸಿ ಕೊನೆಗಾದರೂ ಅದರ ಮೇಲೆ ಜಿಗುಪ್ಸೆ ಹುಟ್ಟಲಿ" ಎಂದೆ.

ಶ್ರೀಮಾತೆ:– ಅವರಿಗೆಂದಾದರೂ ಬೇಸರಬರುವುದೇನು?

ಯಾವುದೂ ಅವರನ್ನು ತೃಪ್ತಿಪಡಿಸಲಾರದು. ಎಷ್ಟು ಬಂದರೂ ಅವರಿಗೆ ತೃಪ್ತಿಯಿಲ್ಲ. ಪ್ರಾಪಂಚಿಕರಿಗೆ ಎಷ್ಟು ಸುಖ ಸಿಕ್ಕಿದರೂ ಜಿಗುಪ್ಸೆ ಬರುವುದೆ? ತಮ್ಮ ದುಃಖದ ಜೀವನವನ್ನು ತಾವೇ ಸೃಷ್ಟಿಸಿಕೊಳ್ಳುವರು. ಯಾವಾಗಲೂ ಈ ಕಾಳಿಗೆ (ಒಬ್ಬ ತಮ್ಮ) ಹಣಬೇಕು. ಈಗ ಪ್ರಸನ್ನ (ಇನ್ನೊಬ್ಬ ಸಹೋದರ) ಅವನನ್ನೇ ಅನುಸರಿಸಿದ್ದಾನೆ. ಬರೋಡ (ಮೂರನೆಯ ತಮ್ಮ) ಎಂದೂ ಹಣ ಕೇಳುವುದಿಲ್ಲ. ಅವನು "ಸಹೋದರಿಗೆ ದುಡ್ಡೆಲ್ಲಿಂದ ಬರುವುದು?" ಎನ್ನುವನು.

ಶಿಷ್ಯ :– ಆ ಹುಚ್ಚು ಹಿಡಿದ ಹೆಂಗಸಿನ ವಿಚಾರ ಏನು! ಅವಳಿಗೆ ಹಣ ಬೇಕೆ?

ಶ್ರೀಮಾತೆ :– ಹಣಕೊಟ್ಟರೂ ಅವಳು ತೆಗೆದುಕೊಳ್ಳುವುದಿಲ್ಲ.

ಶಿಷ್ಯ :– ನೀವು ಆ ಸಂಸಾರದಲ್ಲೇಕೆ ಜನಿಸಿದಿರಿ?

ಶ್ರೀಮಾತೆ :– ಏಕೆ ಜನಿಸಬಾರದು? ನನ್ನ ತಾಯಿತಂದೆ ಭಕ್ತರು.

೨೫ ನೇ ಜೂನ್, ೧೯೧೨.

ಬೆಳಿಗ್ಗೆ ಶ್ರೀಮಾತೆ ಪೂಜಾಮಂದಿರದ ಪಕ್ಕದ ಕೋಣೆಯಲ್ಲಿ ಹಾಸಿಗೆಯ ಬಳಿ ಕುಳಿತಿದ್ದರು. ನಾವೆಲ್ಲಾ ಸಂಭಾಷಣೆಯಲ್ಲಿ ತೊಡಗಿದ್ದೆವು.

ಶಿಷ್ಯ :– ಕೆಲವರು ಸಾಧುಗಳಾದವರು (ಶ್ರೀರಾಮಕೃಷ್ಣ ಮಠದವರು) ಸೇವಾಶ್ರಮ, ಆಸ್ಪತ್ರೆ, ಪುಸ್ತಕ ಮಾರುವುದು, ಲೆಕ್ಕವನ್ನಿಡುವುದು ಇವುಗಳಲ್ಲಿ ನಿರತರಾಗಿರುವುದು ಒಳ್ಳೆಯದಲ್ಲವೆಂದು ಹೇಳುವರು. ಗುರುಮಹಾರಾಜರು ಎಂದಾದರೂ ಅಂತಹ ಕೆಲಸದಲ್ಲಿ ತೊಡಗಿದ್ದರೆ? ರಾಮಕೃಷ್ಣ ಮಠಕ್ಕೆ ದೇವರ ಸಾಕ್ಷಾತ್ಕಾರದ ಹಂಬಲದಿಂದ ಸೇರಿದವರ ಮೇಲೆ ಈ ಬಗೆಯ ಕೆಲಸಗಳು ಹೇರಲ್ಪಡುತ್ತವೆ. ಕರ್ಮ ಮಾಡಬೇಕಾದರೆ ಪೂಜಾಮಂದಿರದಲ್ಲಿ ಪೂಜೆಮಾಡುವುದು, ಧ್ಯಾನ, ಜಪ, ಕೀರ್ತನೆ ಇವನ್ನು ಮಾಡಬೇಕು. ಇವುಗಳಲ್ಲದ ಕೆಲಸಗಳು ಆಸೆಯಲ್ಲಿ ನಮ್ಮನ್ನು ಸಿಲುಕಿಸಿ ದೇವರಿಂದ ನಮ್ಮನ್ನು ವಿಮುಖರನ್ನಾಗಿ ಮಾಡುವುದು.

ಶ್ರೀಮಾತೆ :–ಈ ರೀತಿ ಮಾತಾಡುವವರಿಗೆ ನೀನು ಕಿವಿಗೊಡಬೇಡ. ಕೆಲಸದಲ್ಲಿ ತೊಡಗದಿದ್ದರೆ ಹಗಲೂ ರಾತ್ರೆ ನೀನೇನು ಮಾಡುವೆ? ದಿನದ ಇಪ್ಪತ್ತುನಾಲ್ಕು ಗಂಟೆಯೂ ನೀನು ಜಪ ಮತ್ತು ಧ್ಯಾನ ಮಾಡಲು ಸಾಧ್ಯವೆ? ಗುರುಮಹಾರಾಜರ ವಿಷಯ ಹೇಳಿದೆ. ಅವರ ವಿಚಾರ

ಬೇರೆ. ಮಠ ಅವರಿಗೆ ಸರಿಯಾದ ಆಹಾರವನ್ನು ಒದಗಿಸುತ್ತಿದ್ದ. ನೀವು ಯಾವುದಾದರೂ ಕೆಲಸಮಾಡುತ್ತಿರುವುದರಿಂದಲೇ ನಿಮಗೆ ಆಹಾರ ಸಿಗುವುದು. ಇಲ್ಲದಿದ್ದಲ್ಲಿ ನೀವು ಮನೆಮನೆಗೂ ಆಹಾರಕ್ಕಾಗಿ ಭಿಕ್ಷೆ ಬೇಡಬೇಕಾಗಿತ್ತು. ನೀವು ಖಾಯಿಲೆ ಬೀಳಬಹುದಿತ್ತು. ಅದೂ ಅಲ್ಲದೆ ಸಾಧುಗಳಿಗೆ ಭಿಕ್ಷೆ ನೀಡುವಂತಹವರು ಈಗ ಯಾರಿದ್ದಾರೆ? ಅಂತಹ ಮಾತುಗಳಿಗೆ ಸ್ವಲ್ಪವೂ ಕಿವಿಗೊಡಬೇಡ. ಗುರುಮಹಾರಾಜರು ನಡೆಸಿದಂತೆ ಎಲ್ಲವೂ ನಡೆಯುವುದು. ಮಠ ಈ ಹಾದಿಯಲ್ಲೇ ನಡೆಯುವುದು. ಯಾರು ಇದಕ್ಕೆ ಸರಿಹೊಂದಿಕೊಳ್ಳುವುದಿಲ್ಲವೋ ಅವರು ಹೊರಟುಹೋಗುವರು. ಒಮ್ಮೆ ಮಣಿಮಲ್ಲಿಕನು ಒಬ್ಬ ಸಾಧುವನ್ನು ಸಂದರ್ಶಿಸಿದನೆಂದು ಗುರುಮಹಾರಾಜರಿಗೆ ಹೇಳಿದ. ಅವರು, "ಸರಿ, ನೀನು ಹೇಗೆ ಅವನನ್ನು ಇಷ್ಟಪಟ್ಟೆ" ಎಂದು ಕೇಳಿದರು. ಅವನು, "ನಾನು ಸಾಧುವನ್ನೇನೋ ನೋಡಿದೆ ಆದರೆ—" ಗುರುಮಹಾರಾಜರು, "-ಆದರೆ —ಏನು?" ಎಂದರು. "ಎಲ್ಲರೂ ಹಣಕ್ಕೆ ಆಸೆಪಡುತ್ತಾರೆ" ಎಂದು ಮಣಿಮಲ್ಲಿಕ ಹೇಳಿದ. ಗುರುಮಹಾರಾಜರು, "ಒಬ್ಬ ಸಾಧುವಿಗೆ ಎಷ್ಟು ಹಣಬೇಕು? ಒಂದು ಚೂರು ಹೊಗೆಸೊಪ್ಪು ಅಥವಾ ಅಫೀಮು. ಅಷ್ಟೇ. ನಿಮಗೆಲ್ಲಾ ಕೊಪ್ಪರಿಗೆಯಷ್ಟು ಬೆಣ್ಣೆ, ಹಾಲು, ಸುಪ್ಪತ್ತಿಗೆ ಬೇಕು. ಸಾಧುವಿಗೆ ಸೇದಲು ಒಂದು ಚೂರು ತೊಂಬಾಕುಬೇಕು. ಅಷ್ಟನ್ನೂ ಅವನು ಹೊಂದಬಾರದೆ?" ಎಂದರು.

ಶಿಷ್ಯ :–ಆಸೆಯಿಂದಲೇ ಸುಖ ಅನುಭವಿಸುವ ಇಚ್ಛೆಯೂ ಉಂಟಾಗುವುದು. ಒಬ್ಬ ಮನುಷ್ಯ ನಾಲ್ಕು ಅಂತಸ್ತಿನ ಮನೆಯಲ್ಲಿ ವಾಸಿಸುತ್ತಿರಬಹುದು. ಆದರ ಮೇಲೆ ಅವನಿಚ್ಛೆ ಇಲ್ಲದಿದ್ದಲ್ಲಿ ಅವನಿಗೆ ಸ್ವಲ್ಪವೂ ಬಂಧನವಿಲ್ಲ. ಒಬ್ಬನು ಮರದ ಕೆಳಗೆ ವಾಸಿಸಬಹುದು. ಆದರೆ ಅವನಿಚ್ಛೆಪಟ್ಟಲ್ಲಿ ಅದರಿಂದಲೇ ಅವನು ಸುಖಪಡುವನು. ಗುರುಮಹಾರಾಜರು, "ಒಬ್ಬ ಮನುಷ್ಯನಿಗೆ ಎಲ್ಲಿಯೂ ಬಂಧುಗಳಿಲ್ಲದೇ ಇರಬಹುದು. ಆದರೆ ಮಹಾಮಾಯೆ ಒಂದು ಬೆಕ್ಕನ್ನು ಪ್ರೀತಿಸುವಂತೆ ಮಾಡಿ ಅದರಿಂದ ಅವನನ್ನು ಪ್ರಾಪಂಚಕ್ಕೆ ಎಳೆಯಬಹುದು. ಅವಳ ಆಟ ಹೀಗಿದೆ" ಎಂದು ಹೇಳುತ್ತಿದ್ದರು.

ಶ್ರೀಮಾತೆ :– ಅದು ನಿಜ. ಎಲ್ಲವೂ ಆಸೆಯಿಂದಲೇ ಆದುದು. ಆಸೆಯಿಲ್ಲದಿದ್ದ ಮನುಷ್ಯನಿಗೆ ಯಾವ ಬಂಧನವಿದೆ? ನೀನು ನೋಡುತ್ತಿ

ರುವಂತೆ ನಾನು ಇವೆಲ್ಲದರ ಮಧ್ಯೆ ಇರುವೆ. ಆದರೆ ಇದಾವುದರ ಮೇಲೂ ನನಗೆ ಸ್ವಲ್ಪಕೂಡ ಮನಸ್ಸು ಇಲ್ಲ.

ಶಿಷ್ಯ :— ನಿಮಗೆ ಯಾವ ಆಸೆ ಇರಬಹುದು! ನಮ್ಮ ಮನಸ್ಸಿನಲ್ಲಿ ಎಷ್ಟೊಂದು ಕ್ಷುದ್ರ ಆಸೆಗಳಿವೆ? ಅವುಗಳಿಂದ ಪಾರಾಗುವುದು ಹೇಗೆ?

ಶ್ರೀಮಾತೆ :— ನಿನ್ನಲ್ಲಿ ಯಾವ ನಿಜವಾದ ಆಸೆಯೂ ಇಲ್ಲ. ಅವು ಏನೂ ಅಲ್ಲ. ಅವೆಲ್ಲಾ ಕೇವಲ ನಿನ್ನ ಮನಸ್ಸಿನಲ್ಲಿ ಬಂದು ಮಾಯ ವಾಗುವ ಕಲ್ಪನೆ. ಅವುಗಳು ಬಂದುಹೋದಷ್ಟೂ ನಿನಗೆ ಒಳ್ಳೆಯದು.

ಶಿಷ್ಯ :— ನೆನ್ನೆ ತಾನೇ ನಾನು ದೇವರು ನನ್ನನ್ನು ಕಾಪಾಡುವನೆಂಬ ಭರವಸೆಯಿಲ್ಲದೆ ಈ ಮನಸ್ಸಿನೊಡನೆ ನಾನು ಹೇಗೆ ಹೋರಾಡಲಿ ಎಂದು ಯೋಚಿಸಿದೆ. ಒಂದು ಆಸೆ ಹೋಗುವುದಕ್ಕಿಲ್ಲ ಮತ್ತೊಂದು ತಲೆ ಯೆತ್ತುವುದು.

ಶ್ರೀಮಾತೆ :— ಎಲ್ಲಿಯುವರೆಗೆ ಅಹಂಭಾವ ವಿರುವುದೋ ಅಲ್ಲಿಯು ವರೆಗೂ ಆಸೆಯೂ ಇರುವುದು. ಆದರೆ ಆ ಆಸೆಗಳಿಂದ ನಿನಗೆ ಹಾನಿ ಯಾಗುವುದಿಲ್ಲ. ಗುರುಮಹಾರಾಜರು ನಿನ್ನ ರಕ್ಷಕರಾಗಿರುವರು. ಯಾರು ಆತನ ಪದತಲದಲ್ಲಿ ಶರಣಾಗಿರುವರೊ, ಯಾರು ಸರ್ವವನ್ನೂ ತ್ಯಜಿಸಿ ಆತನ ಮರೆ ಹೊಕ್ಕಿರುವರೋ, ಯಾರು ಒಳ್ಳೆಯ ಜೀವನ ನಡೆಸ ಲಿಚ್ಛಿಸುವರೋ, ಅಂತಹವರನ್ನೂ ಗುರುಮಹಾರಾಜರು ಕಾಪಾಡದಿದ್ದರೆ ಅದೊಂದು ಘೋರ ಪಾಪ. ನೀನು ಅವರಲ್ಲಿ ಪೂರ್ಣಭರವಸೆ ಇಡ ಬೇಕು. ಅವರು ನಿನಗೆ ಒಳ್ಳೆಯದನ್ನು ಮಾಡಬೇಕೆಂದಿಚ್ಛಿಸಿದರೆ ಹಾಗೇ ಆಗಲಿ, ಅಥವಾ ನಿನ್ನನ್ನು ಮುಳುಗಿಸಬೇಕೆಂದಿಚ್ಛೆಯಿದ್ದಲ್ಲಿ ಅದೂ ಆಗಲಿ. ಆದರೆ ನೀನು ಮಾತ್ರ ಯಾವಾಗಲೂ ಯಾವುದು ಸತ್ಯವೋ ಅದನ್ನೇ ಮಾಡು. ನಿನ್ನ ಶಕ್ತಿಯಿದ್ದಷ್ಟು ಮಾಡು.

ಶಿಷ್ಯ :— ಓ ತಾಯಿ, ಅಷ್ಟರಮಟ್ಟಿಗೆ ನಾನು ಭಗವಂತನಲ್ಲಿ ಶರ ಣಾಗಿದ್ದೇನೆಯೆ? ಕೆಲವುವೇಳೆ ಸ್ವಲ್ಪಮಟ್ಟಿಗೆ ಅವರನ್ನು ಅವಲಂಬಿಸಿದ್ದೇ ನೆಂದು ಭಾವಿಸುವೆ. ಮರುಗಳಿಗೆಯೇ ಅದು ಮಾಯವಾಗುವುದು. ಅವರು ನಮ್ಮನ್ನು ಕಾಪಾಡದಿದ್ದಲ್ಲಿ ನಮಗೆ ಬೇರಾವ ದಾರಿಯಿದೆ? ಕೆಲವುಬಾರಿ, ತಾಯಿ, ನೀವಿರುವುದರಿಂದ ನಾವು ನಮ್ಮ ಕಷ್ಟಸಂಕಟ ಗಳನ್ನು ಬಂದು ಹೇಳಿಕೊಳ್ಳುವೆವು, ನಿಮ್ಮ ಸಂದರ್ಶನದಿಂದ ಶಾಂತಿ

ಪಡೆಯುವೆವು ಎನ್ನಿಸುತ್ತದೆ. ನೀವು ಹೋದಮೇಲೆ ನಮ್ಮನ್ನಾರು ನೋಡಿಕೊಳ್ಳುವರು? ನೀವು ಭರವಸೆಯಿತ್ತರೆ ನಮಗೆ ಸಮಾಧಾನ ವಾಗುವುದು.

ಶ್ರೀಮಾತೆ :– ಮಗು ಹೆದರಬೇಡ. ನೀನು ಯಾವುದಕ್ಕೂ ಹೆದರ ಬೇಕಾದ್ದಿಲ್ಲ. ನೀನು ಹೆಂಡತಿ ಮಕ್ಕಳೊಡನೆ ಸಾಂಸಾರಿಕ ಜೀವನವನ್ನು ನಡೆಸುವುದಿಲ್ಲ. ನಿನಗೆ ಇದಾವುದೂ ಇರುವುದಿಲ್ಲ. ನಿನಗೇಕೆ ಹೆದರಿಕೆ? ಇಷ್ಟರಲ್ಲೇ, ನಾನು ಹೋಗುವ ಮುನ್ನ, ನಿನ್ನ ಆಧ್ಯಾತ್ಮಿಕ ಜೀವನಕ್ಕೆ ಸುರಕ್ಷಿತವಾದ ತಳಹದಿಯನ್ನು ಕಟ್ಟಲು ಶಕ್ತನಾಗುವೆ.

ಶಿಷ್ಯ :– ದೇವರು ತನ್ನ ದಯಾದೃಷ್ಟಿಯನ್ನು ನಮ್ಮ ಮೇಲೆ ಬೀರದಿದ್ದಲ್ಲಿ ನಮ್ಮ ಜಪತಪಾದಿಗಳಿಂದ ಏನು ಪ್ರಯೋಜನ? ಆತನು ಕಾಪಾಡಿದರೆ ಮಾತ್ರ ನಾವು ಉದ್ಧಾರವಾಗುವೆವು.

ಶ್ರೀಮಾತೆ :– ನೀನು ಹೇದರಬೇಕಾದ್ದಿಲ್ಲ. ಗುರುಮಹಾರಾಜರು ಖಂಡಿತ ನಿನ್ನನ್ನು ಕಾಪಾಡುವರು. ಕೊರಗಬೇಡ.

೭ ನೇ ಜುಲೈ, ೧೯೧೯.

ಶಿಷ್ಯ :– ತಾಯಿ ರಥೋತ್ಸವದ ಸಮಯದಲ್ಲಿ ನೀವು ಪೂರಿಗೆ ಹೋಗಬೇಕೆಂದು ಆಣಿಯಾಗಿದ್ದರಲ್ಲವೆ?

ಶ್ರೀಮಾತೆ:– ಅಷ್ಟೊಂದು ಜನಸಂದಣಿ ಇರುವಾಗ ಯಾರಾದರೂ ಹೋಗುವರೆ? ಬಹುಶಃ ಕಾಲರಾ ಜಾಡ್ಯಕೂಡ ಬರಬಹುದು. ಪೂಜಾರಿ ಲಕ್ಷ್ಮೀಕಾಂತ, "ಈಗಲೆ ಎಲ್ಲಾ ಮನೆಗಳೂ ಕೊಠಡಿಗಳೂ ಬಾಡಿಗೆಗೆ ಕೊಡಲ್ಪಟ್ಟವೆ. ವಾಸಿಸುವುದಕ್ಕೆ ಸ್ಥಳವೇ ಇಲ್ಲ; ಚಿಕ್ಕ ಕೊಠಡಿಗಳನ್ನೂ ಕೂಡ ಹತ್ತು ರೂಪಾಯಿ ಬಾಡಿಗೆಗೆ ಕೊಟ್ಟಿರುವರು. ದಯವಿಟ್ಟು ಚಳಿಗಾಲದಲ್ಲಿ ಬನ್ನಿ" ಎಂದು ಹೇಳಿದ.

ಶಿಷ್ಯ :– ಎಷ್ಟೊಂದು ದೇವಾಲಯಗಳು, ದೇವ ದೇವಿಯರನ್ನು ಮುಸಲ್ಮಾನರು ಭಿನ್ನಮಾಡಿದರು. ಕೆಲವು ವಿಗ್ರಹಗಳ ಮೂಗು, ಕೆಲವು ವಿಗ್ರಹಗಳ ಕಿವಿ ಕತ್ತರಿಸಿಹಾಕಿದ್ದಾರೆ.....ಗುಜರಾತಿನಲ್ಲಿ ಸೋಮನಾಥ ದೇವಾಲಯವಿದೆ. ಹಿಂದೆ ಪ್ರತಿನಿತ್ಯವೂ ದೇವರನ್ನು ಅರ್ಚಕರು ಗಂಗೆಯಲ್ಲಿ ಸ್ನಾನಮಾಡಿಸುತ್ತಿದ್ದರು. ಪ್ರತಿದಿನವೂ ಜನರು ತಮ್ಮ ತಲೆಯ ಮೇಲೆ ನೀರಿನ ಕೊಡವನ್ನು ಹಿಮಾಲಯದಿಂದ ಹೊತ್ತು ತರುತ್ತಿದ್ದರು. ಸುಲ್ತಾನ್ ಮಹಮ್ಮದನು ವಿಗ್ರಹವನ್ನು ಧ್ವಂಸ ಮಾಡಿ, ಗಂಧದಮರ

ದಿಂದ ಮಾಡಿದ್ದ ಆದರ ಬಾಗಿಲುಗಳನ್ನು ಹೊತ್ತುಕೊಂಡುಹೋದನು. ಹೀಗೇಕಾಯಿತು ?

ಶ್ರೀಮಾತೆ:-ಕೆಟ್ಟವರು ವಿಗ್ರಹದಲ್ಲಿ ದೇವರಿರುವನೆಂದು ಭಾವಿಸುವುದಿಲ್ಲ. ಅವರ ಮುಂದೆ ದೇವತೆ ಮಾಯವಾದಂತೆ ಕಾಣಿಸುವಳು. ಭಗವಂತ ತಾನಿಚ್ಛಿಪಟ್ಟದ್ದನ್ನು ಮಾಡಬಲ್ಲ. ಇದೂ ದೇವರ ಲೀಲೆ.

ಶಿಷ್ಯ:--ಕರ್ಮದ ಪರಿಣಾಮ ಎಂದಾದರೂ ಶೂನ್ಯವಾಗುವುದುಂಟೆ? ಪುರಾಣಗಳು ಜ್ಞಾನ ಮಾತ್ರ ಕರ್ಮವನ್ನು ನಿರ್ಮೂಲಮಾಡಬಲ್ಲದೆಂದು ಹೇಳುತ್ತವೆ. ಆದರೂ ಪ್ರಾರಬ್ಧಕರ್ಮವನ್ನು ಅನುಭವಿಸಲೇಬೇಕು.

ಶ್ರೀಮಾತೆ:-ಕರ್ಮವೇ ನಮ್ಮ ಸುಖ ಮತ್ತು ದುಃಖಗಳಿಗೆ ಕಾರಣ. ಗುರುಮಹಾರಾಜರೂ ಕರ್ಮದಫಲವಾಗಿ ಅಷ್ಟೊಂದು ಕಷ್ಟಪಡಬೇಕಾಯಿತು. ಒಮ್ಮೆ ಅವರ ದೊಡ್ಡ ಅಣ್ಣ ಜ್ವರದ ಅಮಲಿನಲ್ಲಿದ್ದಾಗ ನೀರನ್ನು ಕುಡಿಯುತ್ತಿದ್ದ. ಗುರುಮಹಾರಾಜರು ಅವರು ಕೊಂಚ ಕುಡಿಯುವಷ್ಟರಲ್ಲಿ ಅದನ್ನು ಬೇಗ ಕಿತ್ತುಕೊಂಡರು. ಅಣ್ಣನಿಗೆ ಕೋಪ ಬಂದು, "ನಾನು ನೀರು ಕುಡಿಯುವುದನ್ನು ನೀನು ತಪ್ಪಿಸಿದೆ. ನೀನೂ ಇದೇ ರೀತಿ ಅನುಭವಿಸುವೆ. ನಿನಗೂ ನಿನ್ನ ಗಂಟಲಿನಲ್ಲಿ ಹೀಗೆ ಯಾತನೆಯಾಗುವುದು" ಎಂದನು. ಗುರುಮಹಾರಾಜರು, "ಅಣ್ಣ! ನಿನಗೆ ಕಷ್ಟಕೊಡಲು ನಾನು ಹಾಗೆ ಮಾಡಲಿಲ್ಲ. ನೀನು ಖಾಯಿಲೆಯಾಗಿದ್ದೆ. ನೀರು ನಿನಗೆ ಕೆಡುಕನ್ನುಂಟುಮಾಡುವುದು. ನೀನೇಕೆ ನನಗೆ ಹೀಗೆ ಶಾಪಕೊಟ್ಟೆ?" ಎಂದರು. ಅಣ್ಣನು ಅಳುತ್ತಾ, "ನನಗೆ ಗೊತ್ತಿಲ್ಲ ತಮ್ಮ, ನನ್ನ ಬಾಯಿಂದ ಆ ಮಾತುಗಳು ಬಂದುವು. ಅವು ನಿಜವಾಗುತ್ತವೆ" ಎಂದ. ಗುರುಮಹಾರಾಜರು ಖಾಯಿಲೆ ಸಮಯದಲ್ಲಿ "ನನಗೆ ಗಂಟಲಿನಲ್ಲಿ ಹೀಗೆ ಹುಣ್ಣು ಬರಲು ಆ ಶಾಪವೇ ಕಾರಣ" ಎಂದು ಅವರು ಹೇಳಿದರು. ನಾನು ಅದಕ್ಕೆ, "ನಿಮಗೇ ಈ ರೀತಿಯಾಗಿರಬೇಕಾದರೆ ಸಾಧಾರಣ ಮನುಷ್ಯ ಬದುಕಲು ಹೇಗೆ ಸಾಧ್ಯ?" ಎಂದೆ. ಗುರುಮಹಾಜರು, "ನನ್ನ ಅಣ್ಣ ತುಂಬಾ ಧರ್ಮಿಷ್ಠ. ಅವನ ಮಾತು ಸತ್ಯವಾಗಲೇ ಬೇಕು. ಎಲ್ಲರೂ ಹೇಳುವ ಮಾತು ಫಲಕಾರಿಯಾಗುವುದೆ?" ಎಂದರು.

ಕರ್ಮಫಲ ಅನಿವಾರ್ಯ. ಆದರೆ ಭಗವನ್ನಾಮೋಚ್ಚಾರಣೆಯಿಂದ

ಅದರ ತೀವ್ರತೆಯನ್ನು ಕಡಿಮೆಮಾಡಬಹುದು. ನಿನಗೆ ನೇಗಿಲಿನಷ್ಟು ದೊಡ್ಡಗಾಯವಾಗಬೇಕಾದ ಕಡೆ ಒಂದು ಸೂಜಿ ಮೊನೆಯಷ್ಟು ನೋವಾಗಬಹುದು. ಜಪ ಧ್ಯಾನಗಳು ಬಹಳಮಟ್ಟಿಗೆ ಕರ್ಮಫಲಕ್ಕೆ ಪ್ರತಿಕ್ರಿಯೆ ಮಾಡುವುದು. ದೊರೆಯಾದ ಸುರಥನ ವಿಚಾರವೂ ಹೀಗೆ ಆಯಿತು. ಒಂದು ಲಕ್ಷ ಆಡುಗಳನ್ನು ದೇವತೆಗೆ ಬಲಿಕೊಟ್ಟು ಅವನು ಪೂಜೆಮಾಡಿದ್ದನು. ಮುಂದೆ ಅದೇ ಒಂದುನೂರುಸಾವಿರ ಆಡುಗಳು ಒಂದು ಕತ್ತಿಯೇಟಿನಿಂದ ಅವನನ್ನು ಕೊಂದುವು. ಅವನು ಒಂದು ಲಕ್ಷ ಬಾರಿ ಜನ್ಮವೆತ್ತಬೇಕಾಗಲಿಲ್ಲ. ಏಕೆಂದರೆ ಅವನು ಜಗನ್ಮಾತೆಯನ್ನು ಆರಾಧಿಸಿದ್ದ. ಭಗವನ್ನಾಮವನ್ನು ಜಪಿಸುವುದರಿಂದ ಕರ್ಮಫಲದ ತೀವ್ರತೆ ಕಡಿಮೆಯಾಗುವುದು.

ಶಿಷ್ಯ :– ಹೀಗಿದ್ದರೆ ಕರ್ಮಶಾಸ್ತ್ರವೇ ಪ್ರಪಂಚದಲ್ಲಿ ಪರಮೋತ್ಕೃಷ್ಟವಾಗುತ್ತಿತ್ತು. ಹಾಗಿದ್ದಮೇಲೆ ದೇವರಲ್ಲಿ ನಂಬಿಕೆಯೇಕಿಡಬೇಕು? ಬೌದ್ಧರು ಕರ್ಮನಿಯಮವನ್ನು ಒಪ್ಪಿಕೊಳ್ಳುವರು, ಆದರೆ ದೇವರನ್ನು ಒಪ್ಪಿಕೊಳ್ಳುವುದಿಲ್ಲ.

ಶ್ರೀಮಾತೆ:– ಕಾಳಿ, ಕೃಷ್ಣ, ದುರ್ಗಾ ಮುಂತಾದ ದೇವತೆಗಳಿಲ್ಲವೆಂದು ನೀನು ಹೇಳುವೆಯೇನು?

ಶಿಷ್ಯ:– ಕರ್ಮದ ಪರಿಣಾಮ ಜಪತಪಸ್ಸಾಧನೆಯಿಂದ ನಾಶಹೊಂದುತ್ತದೆಯೆ?

ಶ್ರೀಮಾತೆ:– ಏಕಿಲ್ಲ? ಸತ್ಕೃತ್ಯಗಳನ್ನು ಮಾಡುವುದು ಒಳ್ಳೆಯದು. ಒಳ್ಳೆಯ ಕೆಲಸಗಳನ್ನು ಮಾಡುವುದರಿಂದ ಆನಂದವಾಗುವುದು. ಕೆಟ್ಟ ಕೆಲಸಮಾಡುವುದರಿಂದ ದುಃಖವಾಗುವುದು....

ಶಿಷ್ಯ:– ಗುರುಮಹಾರಾಜರ ದರ್ಶನಕ್ಕೆ ಹಲವುಭಕ್ತರು ಬರುತ್ತಿದ್ದರು. ಅವರೆಲ್ಲಾ ಈಗೆಲ್ಲಿ? ಅವರಾರೂ ನಿಮ್ಮನ್ನು ನೋಡಲಿಕ್ಕೆ ಬರುವುದಿಲ್ಲ.

ಶ್ರೀಮಾತೆ:– ಓ! ಅವರೆಲ್ಲಾ ಸುಖಜೀವನ ನಡೆಸುತ್ತಿರುವರು!

ಶಿಷ್ಯ:– ಏನು? ಸುಖವೆ?

ಶ್ರೀಮಾತೆ:– ನೀನನ್ನುವುದು ನಿಜ. ಹೆಂಡತಿ ಮಕ್ಕಳೊಡನೆ ಇರುವ ಯಾವ ಮನುಷ್ಯನು ತಾನೆ ಈ ಪ್ರಪಂಚದಲ್ಲಿ ಸೌಖ್ಯವಾಗಿರಬಲ್ಲ? ಅವರು "ಕಾಮಿನಿ ಕಾಂಚನ" ದಲ್ಲಿ ತಮ್ಮನ್ನೇ ಮರೆತಿದ್ದಾರೆ. ಈ ಪ್ರಪಂಚ

ದಲ್ಲಿ ಪ್ರತಿಯೊಂದೂ ದುಃಖದಲ್ಲಿ ಪರ್ಯವಸಾನವಾಗುತ್ತದೆ.

ಶಿಷ್ಯ:— ಇದರ ಜೊತೆಗೆ ಮನಸ್ಸೂ ಚಂಚಲವಾಗಿದೆ.

ಶ್ರೀಮಾತೆ:— ವಿಶ್ವಮಾತೆಯಾದ ಕಾಳಿಯೇ ಎಲ್ಲರ ತಾಯಿ. ಅವಳೇ ಒಳ್ಳೆಯದು ಕೆಟ್ಟದ್ದನ್ನು ಸೃಷ್ಟಿಸಿರುವಳು. ಎಲ್ಲ ಅವಳ ಬಸಿರಿನಿಂದ ಉದ್ಭವಿಸಿವೆ. ಅನೇಕ ಬಗೆಯ ಮುಕ್ತಾತ್ಮರಿದ್ದಾರೆ— ಕೆಲವರು ಜೀವನ್ಮುಕ್ತರು, ಕೆಲವರು ಸಾಧನಸಿದ್ಧರು, ಕೆಲವರು ಗುರು ಕೃಪಾಸಿದ್ಧರು, ಕೆಲವರು ಹಟಾತ್‌ಸಿದ್ಧರು.

ಶಿಷ್ಯ:— "ಹಟಾತ್‌ಸಿದ್ಧಿ" ಎಂಬುದರ ಅರ್ಥವೇನು?

ಶ್ರೀಮಾತೆ:— ಮತ್ತೊಬ್ಬರ ಆಸ್ತಿಗೆ ಇದ್ದಕ್ಕಿದ್ದಂತೆ ಹಕ್ಕುದಾರನಾಗಿ ಐಶ್ವರ್ಯವಂತನಾಗುವುದು.

ಈ ಸಮಯಯದಲ್ಲಿ ಮಾತೆಯ ಸೋದರನ ಮಗಳು ನಳಿನಿ ಗಂಗಾ ಸ್ನಾನಮಾಡಿ ಕೊಠಡಿಗೆ ಹಿಂತಿರುಗಿದಳು. ಬಚ್ಚಲುಮನೆ ಕೊಳೆಯಾಗಿದ್ದುದರಿಂದ ಅದನ್ನು ಕೆಲವು ತಂಬಿಗೆ ನೀರಿನಿಂದ ತೊಳೆದಳು. ಅದರ ಪವಿತ್ರತೆಗಾಗಿ ಗಂಗಾಸ್ನಾನಕ್ಕೆ ಹೋಗಿದ್ದಳು. ಶಿಷ್ಯನೂ, ಮಾತೆಯೂ ಆಕೆ ನಲ್ಲಿಯಲ್ಲೇ ಸ್ನಾನಮಾಡಿದ್ದರೆ ಸಾಕಿತ್ತೆಂದು ಅಭಿಪ್ರಾಯ ಪಟ್ಟರು.

ನಳಿನಿ:— ಅದುಹೇಗೆ ಆಗುತ್ತದೆ? ಬಚ್ಚಲುಮನೆಯಲ್ಲವೆ?

ಶ್ರೀಮಾತೆ:— ಅದರಲ್ಲಿ ವ್ಯತ್ಯಾಸವೇನು? ನೀನೇನು ಕಸವನ್ನು ಕೈಯಿಂದ ಮುಟ್ಟಲ್ಲ. ಮುಟ್ಟಿದ್ದರೆ ತಾನೇ ಏನು? ನಮ್ಮ ಕರುಳಿನಲ್ಲೂ ಕಲ್ಮಷ ತುಂಬಿದೆ. ಗುರುಮಹಾರಾಜರು, "ಅನ್ನ, ಪಲ್ಯ, ಗಿಣ್ಣು, ಬೆಣ್ಣೆ ಮುಂತಾದುವನ್ನು ಒಂದು ಪಾತ್ರೆಯಲ್ಲಿ ಕೆಲವುದಿನ ಇಡಿ. ಅವು ಕೊಳೆತು ನಾರುತ್ತವೆ. ಮನುಷ್ಯರು ಮಾಡುವ ಹೇಸಿಗೆಯೂ ಅದಲ್ಲದೆ ಬೇರೆಯಲ್ಲ" ಎನ್ನುತ್ತಿದ್ದರು. ಇಂತಹ ಅಸಹ್ಯದಿಂದ ಪಾರಾಗಲು ಈ ಗುರುಮಹಾರಾಜರು ದಕ್ಷಿಣೇಶ್ವರದಲ್ಲಿ ತಮ್ಮ ಮಲವನ್ನೇರುಚಿ ನೋಡಿದರು. ತೋತಾಪುರಿ, ಓ! "ಅದು ನಿಮ್ಮದೇ!" ಎಂದ! ಆಗ ಅವರು ಇತರರ ಮಲವನ್ನೂ ತೆಗೆದು ಕೊಂಡರು.

ಹಳ್ಳಿಯಲ್ಲಿದ್ದಾಗ ನಾನೂ ಅನೇಕವೇಳೆ ಒಣಗಿದ ಮಲದಮೇಲೆ ತಿರುಗಾಡುತ್ತಿದ್ದೆ. ಗೋವಿಂದನ ನಾಮವನ್ನು ಕೆಲವುಬಾರಿ ಜಪಿಸಿದ ಕೂಡಲೇ ಪವಿತ್ರವಾದಂತೆ ಭಾಸವಾಯಿತು. ಮನಸ್ಸೇ ಎಲ್ಲಕ್ಕೂ ಮೂಲ. ಮನಸ್ಸಿನಲ್ಲೇ ಶುದ್ಧ ಅಶುದ್ಧ, ಭಾವನೆ ಇರುವುದು.

ಮೊದಲು ಮನುಷ್ಯ ತನ್ನ ಮನಸ್ಸಿನಲ್ಲಿ ತಪ್ಪುಮಾಡಿದ್ದರೆ ಇನ್ನೊಬ್ಬರ ತಪ್ಪನ್ನು ಕಂಡುಹಿಡಿಯಲು ಸಾಧ್ಯ. ಇನ್ನೊಬ್ಬರ ತಪ್ಪನ್ನು ಎಣಿಸುವುದರಿಂದ ಏನಾಗುವುದು? ಅದರಿಂದ ನಿನಗೇ ಹಾನಿ. ಇದು ನನ್ನ ಭಾವನೆ. ಅದಕ್ಕೇ ನಾನು ಇನ್ನೊಬ್ಬರಲ್ಲಿ ತಪ್ಪನ್ನು ನೋಡುವುದಿಲ್ಲ. ಒಬ್ಬ ಮನುಷ್ಯ ನನಗೆ ಏನಾದರೂ ಕೊಂಚ ಸಹಾಯಮಾಡಿದ್ದರೆ ನಾನು ಅದನ್ನು ನೆನಪಿನಲ್ಲಿಡಲೆತ್ನಿಸುವೆ. ಇನ್ನೊಬ್ಬರ ತಪ್ಪನ್ನು ಎಂದೂ ಗಮನಿಸಬಾರದು. ನಾನೆಂದೂ ಅದನ್ನು ಮಾಡುವುದಿಲ್ಲ. ಕ್ಷಮೆಯೇ ತಪಸ್ಸು.

ಶಿಷ್ಯ:-"ಈಗ ಒಬ್ಬ ಕಳ್ಳ ಒಂದು ಮನೆಗೆ ನುಗ್ಗಿ ಏನನ್ನೋ ಕದ್ದನೆಂದಿಟ್ಟುಕೊಳ್ಳಿ. ಕಳ್ಳನ ಯೋಚನೆ ನಿಮ್ಮ ಮನಸ್ಸಿಗೆ ಹೊಳೆಯುವುದು. ಆದರೆ ಒಂದು ಮಗುವಿಗೆ ಆ ಭಾವನೆ ಇರುವುದಿಲ್ಲ. ಅದಕ್ಕೇ ಅದು ಯಾರನ್ನೂ ಕಳ್ಳನೆಂದು ಭಾವಿಸುವುದಿಲ್ಲ" ಎಂದು ವಿವೇಕಾನಂದರು ಹೇಳುತ್ತಿದ್ದರು.

ಶ್ರೀಮಾತೆ:- ಅದು ನಿಜ. ಯಾರ ಮನಸ್ಸು ಪವಿತ್ರವಾಗಿರುವುದೋ ಅವರು ಎಲ್ಲೆಲ್ಲೂ ಪವಿತ್ರತೆಯನ್ನೇ ನೋಡುವರು. ಪೂರ್ವಜನ್ಮದಲ್ಲಿ ಬೇಕಾದಷ್ಟು ಸಾಧನೆ ಮಾಡಿದ್ದರೆ ಅಂಥವನು ಪರಿಶುದ್ಧನಾಗಿರುವನು.

ಶಿಷ್ಯ:- ತಾಯಿ, ಜಪ, ಧ್ಯಾನ್ಯವನ್ನು ಮಾಡುತ್ತಿರುವಾಗ ನನ್ನ ಮನಸ್ಸಿಗೆ ಸಂತೋಷವಾಗುವುದಿಲ್ಲ.

ಶ್ರೀಮಾತೆ:-[ನಗುತ್ತಾ] ಏಕೆ, ಸ್ವಲ್ಪಕೂಡ ಇಲ್ಲವೇನು?

ಶಿಷ್ಯ:- ಓ! ನಾನು ಅರೆ ಮನಸ್ಸಿನಿಂದ ಸ್ವಲ್ಪಹೊತ್ತು ಮಾಡುತ್ತೇನೆ. ಮರುಗಳಿಗೆಯಲ್ಲೇ, "ಹೀಗೆ ಗೊಣಗುಟ್ಟುವುದರಿಂದೇನು ಫಲ? ದೇವರು ಇರುವುದೇ ಆದರೆ ಇದ್ದೇ ಇರುತ್ತಾನೆ. ಆದ್ದರಿಂದ ಧ್ಯಾನವನ್ನಾದರೂ ಮಾಡೋಣ" ಎನ್ನಿಸುತ್ತದೆ.

ಶ್ರೀಮಾತೆ:- ಧ್ಯಾನ ಸಾಧ್ಯವೆ?

ಶಿಷ್ಯ:- ಇಲ್ಲ, ಅದನ್ನೂ ಮಾಡುವುದಕ್ಕಾಗುವುದಿಲ್ಲ. ನನಗೆಲ್ಲಾ ಅರ್ಥವಾಗುವುದು. ಆದರೆ ಅದನ್ನು ಸಾಧಿಸಿ, ಶಾಂತಿಪಡೆಯಲಾಗುತ್ತಿಲ್ಲ. ನಿಮಗೆ ದಕ್ಷಿಣೇಶ್ವರದ ಹಾದಿ ಚೆನ್ನಾಗಿ ಗೊತ್ತು. ಆದರೆ ನೀವು ಅಷ್ಟುದೂರ ನಡೆದುಕೊಂಡುಹೋಗಲು ಸಾಧ್ಯವೆ?

ಲಲಿತಬಾಬು ಕೊಠಡಿಯನ್ನು ಪ್ರವೇಶಿಸಿ ಮಾತೆಗೆ ಪ್ರಣಾಮ

ಮಾಡಿದರು. ಅವರಿಬ್ಬರೂ ಸಂಭಾಷಣೆಗೆ ತೊಡಗಿದರು. ಶಿಷ್ಯನೂ ಆಗಾಗ್ಗೆ ಸೇರಿಕೊಳ್ಳುತ್ತಿದ್ದ.

ಶ್ರೀಮಾತೆ:– ಗುರುಮಹಾರಾಜರು, "ತೀಕ್ಷ್ಣವಾದ ಕತ್ತಿಯ ಮೊನೆಯಂತೆ ಈ ಹಾದಿ ದುರ್ಗಮವಾದದ್ದು" ಎಂದು ಹೇಳುತ್ತಿದ್ದರು. (ಸ್ವಲ್ಪ ಹೊತ್ತು ಸುಮ್ಮನಿದ್ದು) ಆದರೆ ಅವರು ನಿಮ್ಮನ್ನು ತಮ್ಮ ತೋಳಿನಲ್ಲೆತ್ತಿಕೊಂಡಿರುವರು. ನಿಮ್ಮನ್ನು ಕಾಪಾಡುತ್ತಿರುವರು.

ಲಲಿತ:– ಸತ್ತಮೇಲೆ ಗುರುಮಹಾರಾಜರು ನಮ್ಮನ್ನೆತ್ತಿಕೊಳ್ಳುವರು. ಅದರಲ್ಲೇನು ಮಹತ್ವವಿದೆ? ಈ ಶರೀರದಲ್ಲಿರುವಾಗ ಅವರು ಹಾಗೆ ಮಾಡಿದರೆ!

ಶ್ರೀಮಾತೆ:– ಈ ದೇಹದಲ್ಲೇ ನಿಮ್ಮನ್ನು ಅವರು ಎತ್ತಿಕೊಂಡಿದ್ದಾರೆ. ಅವರು ನಿಮ್ಮ ತಲೆಯ ಮೇಲಿದ್ದಾರೆ. ನಿಮ್ಮನ್ನು ಖಂಡಿತ ಅವರು ಎತ್ತಿಕೊಂಡಿದ್ದಾರೆ.

ಶಿಷ್ಯ:– ನಿಜವಾಗಿಯೂ ಅವರು ನಮ್ಮನ್ನು ಹಿಡಿದಿದ್ದಾರೆಯೆ? ನೀವು ಹೇಳುವುದು ನಿಜವೆ?

ಶ್ರೀಮಾತೆ:– (ಧೃಢವಾಗಿ) ಹೌದು, ನಿಜವಾಗಿ ಸತ್ಯ.

ಶ್ರೀಮಾತೆ ಪ್ರಾತಃಕಾಲದ ಪೂಜೆಯನ್ನು ಮುಗಿಸಿ ಪ್ರಸಾದವನ್ನು ಶಲಾಕಪತ್ರದಲ್ಲಿ ಭಕ್ತರಿಗೆಲ್ಲಾ ಹಂಚಿದರು. ನಂತರ ಕೊಠಡಿಯನ್ನು ಗುಡಿಸಿದರು. ಕಸವನ್ನು ಕೈಯಲ್ಲೆತ್ತಿಕೊಂಡಾಗ ಒಂದು ಮುಳ್ಳು ಬೆರಳಿಗೆ ಚುಚ್ಚಿಕೊಂಡಿತು. ರಕ್ತ ಸುರಿದು ಶ್ರೀಮಾತೆಗೆ ತುಂಬಾ ನೋವಾಯಿತು. ಶಿಷ್ಯನಿಗೆ ಇದು ತಿಳಿದಕೂಡಲೇ ಮಹಡಿಗೆ ಓಡಿ ಬಂದ. ಯಾರೋ ಬಿಸಿಸುಣ್ಣ ಹಚ್ಚುವಂತೆ ಹೇಳಿದರು. ಆದರಿಂದ ನೋವು ಬಹುಮಟ್ಟಿಗೆ ಕಡಿಮೆಯಾಯಿತು. ಶ್ರೀಮಾತೆ ಪ್ರೇಮದಿಂದ ಶಿಷ್ಯನಿಗೆ, "ಮಗು, ನೀನು ನನ್ನವನು. ನಿಜವಾಗಿ ನೀನು ನನ್ನವನೇ" ಎಂದರು.

ಕಾಶಿ, ನವೆಂಬರ್ ೧೯೧೨.

ಶ್ರೀಮಾತೆಯವರು ಪವಿತ್ರ ಕಾಶೀಕ್ಷೇತ್ರಕ್ಕೆ ಬಂದಿದ್ದಾಗ ಈ ಸಂಭಾಷಣೆ ನಡೆಯಿತು.

ಶಿಷ್ಯ:– ಎಲ್ಲಾ ಯಾತ್ರಿಕರೂ ವಿಶ್ವನಾಥನ ವಿಗ್ರಹವನ್ನು ಮುಟ್ಟುತ್ತಾರೆ. ಆದ ಕಾರಣವೆ ಸಂಜೆ ಅದಕ್ಕೆ ಸ್ನಾನಮಾಡಿಸುವರು. ನಂತರ ಅರ್ಚಕರು ಪೂಜೆಮಾಡಿ ನೈವೇದ್ಯವನ್ನರ್ಪಿಸುವರು.

ಶ್ರೀಮಾತೆ:— ಅರ್ಚಕರು ದುಡ್ಡಿನಾಸೆಯಿಂದ ಜನರಿಗೆ ವಿಗ್ರಹ ವನ್ನು ಮುಟ್ಟಲವಕಾಶ ಕೊಡುವರು. ಅವರೇಕೆ ಹಾಗೆ ಮಾಡಬೇಕು? ದೂರದಿಂದ ಲಿಂಗವನ್ನು ನೋಡಿದರೇ ಸಾಕು. ಇಲ್ಲದಿದ್ದಲ್ಲಿ ಕೆಟ್ಟ ನಡತೆ ಜನರೂ ಕೂಡ ಅದನ್ನು ಮುಟ್ಟುವರು.

ಕೆಲವರಿದ್ದಾರೆ, ಅವರ ಸ್ಪರ್ಶಮಾತ್ರದಿಂದಲೇ ಮೈಯೆಲ್ಲಾ ಉರಿ ಯುವುದು. ಅದರಿಂದ ತುಂಬಾ ನೋವಾಗುವುದು. ಅದಕ್ಕೇ ಅವರು ಮುಟ್ಟಿದಮೇಲೆ ನಾನು ನನ್ನ ಕೈಕಾಲುಗಳನ್ನು ತೊಳೆದುಕೊಳ್ಳುವೆ. ಅದೃಷ್ಟವಶದಿಂದ ಈ ಸ್ಥಳದಲ್ಲಿ ಕಲ್ಕತ್ತೆಯಷ್ಟು ಜನಸಂದಣಿ ಇಲ್ಲ.

ಶಿಷ್ಯ:— ಹಿರಿಯಸ್ವಾಮಿಗಳ ಅಪ್ಪಣೆಪಡೆದಮೇಲೆ ಮಾತ್ರ ಇಲ್ಲಿ ಯಾರಾದರೂ ನಿಮ್ಮನ್ನು ನೋಡಬಹುದು. ಜನರ ಗುಂಪನ್ನು ತಡೆ ಗಟ್ಟಲು ಈ ವ್ಯವಸ್ಥೆಮಾಡಿದೆ.

ಶ್ರೀಮಾತೆ:— ಎಲ್ಲಾ ಕಡೆಯಲ್ಲೂ ಯಾರು ನ್ಯಾಯಾಸ್ಥಾನ ನಡೆಸ ಲೊಪ್ಪುವರು?

ಹುಚ್ಚುಹಿಡಿದ ಶ್ರೀಮಾತೆಯ ಅತ್ತಿಗೆ ಕಾಶಿಯಲ್ಲೂ ಅವರಿಗೆ ತುಂಬಾ ತೊಂದರೆಕೊಡುತ್ತಿದ್ದರು.

ಶ್ರೀಮಾತೆ:— ಬಹುಶಃ ನಾನು ಶಿವನನ್ನು ಮುಳ್ಳಿನ ಬಿಲ್ವಪತ್ರೆ ಯಿಂದ ಅರ್ಚಿಸಿರಬೇಕು. ಅದಕ್ಕೇ ಇಂತಹ ಮುಳ್ಳನ್ನು ಈ ಜೀವನ ದಲ್ಲಿ ನಾನು ಪಡೆದಿರುವೆ.

ಶಿಷ್ಯ:— ಅದು ಹೇಗೆ? ತಿಳಿಯದೆ ಶಿವನಿಗೆ ಮುಳ್ಳಿನ ಬಿಲ್ವಪತ್ರೆ ಯನ್ನರ್ಪಿಸಿದರೆ ಹಾನಿಯೇನು?

ಶ್ರೀಮಾತೆ:— ಇಲ್ಲ, ಇಲ್ಲ. ಈಶ್ವರನ ಪೂಜೆ ಬಹಳ ಕಠಿಣ. ತಿಳಿ ಯದೆ ಒಬ್ಬ ಮನುಷ್ಯ ತಪ್ಪುಮಾಡಿದರೂ ಅವನಿಗೆ ಕೇಡಾಗುತ್ತದೆ. ನಿಜಸ್ಥಿತಿಯೇನೆಂದರೆ ತನ್ನ ಹಿಂದಿನ ಕರ್ಮದಫಲವಾಗಿ, ಇದೇ ಕಡೆಯ ಜನ್ಮತಾಳಿದವರು, ಈ ಜನ್ಮದಲ್ಲೇ ಅದನ್ನು ಅನುಭವಿಸುವರು.

ಹುಟ್ಟಿದಂದಿನಿಂದ ಯಾವ ಪಾಪವನ್ನು ಮಾಡಿದ ನೆನಪೂ ನನಗಿಲ್ಲ. ನನ್ನ ಐದನೆಯ ವಯಸ್ಸಿನಲ್ಲಿ ನಾನು ಗುರುಮಹಾರಾಜರನ್ನು ಸ್ಪರ್ಶಿಸಿದೆ. ನನಗಾಗ ಅರ್ಥವಾಗುತ್ತಿತ್ತೋ ಇಲ್ಲವೊ ಕಾಣೆ. ಆದರೆ ಅವರು ನಿಸ್ಸಂದೇಹವಾಗಿ ನನ್ನನ್ನು ಸ್ಪರ್ಶಿಸಿದರು. ನನಗೇಕೆ ಇಷ್ಟೊಂದು ಯಾತನೆ? ಅವರ ಸ್ಪರ್ಶಮಾತ್ರದಿಂದ ಎಲ್ಲರೂ ಮಾಯೆಯಿಂದ

ವಿಮುಕ್ತರಾಗುವರು. ಕೇವಲ ನಾನು ಮಾತ್ರ ಏಕೆ ಇಷ್ಟೊಂದು ಕೋಟಲೆಗೆ ಸಿಕ್ಕಬೇಕು? ಹಗಲೂ ರಾತ್ರಿ ನನ್ನ ಮನಸ್ಸು ಮೇಲಕ್ಕೆ ಹೋಗಲಿಚ್ಛಿಸುವುದು. ನಾನು ಅದನ್ನು ಬಲವಂತದಿಂದ, ಈ ಜನರಮೇಲಿನ ಕರುಣೆಯಿಂದ ಕೆಳಗಿಳಿಸುವೆ. ಆದರೂ ನನಗೆಷ್ಟೊಂದು ಕಷ್ಟ!

ಶಿಷ್ಯ :– ಅವರಿಷ್ಟ ಬಂದದ್ದನ್ನು ಅವರು ಮಾಡಿಕೊಳ್ಳಲಿ. ದಯವಿಟ್ಟು ನಮ್ಮನ್ನು ಮನ್ನಿಸಿ. ಆತ್ಮಪರಿಜ್ಞಾನವುಳ್ಳವನು ಎಂದಿಗೂ ಕೋಪಿಸಿಕೊಳ್ಳುವುದಿಲ್ಲ.

ಶ್ರೀಮಾತೆ:– ನೀನೆನ್ನುವುದು ನಿಜ ಮಗು. ತಾಳ್ಮೆಗಿಂತ ಹೆಚ್ಚಿನ ಗುಣ ಯಾವುದೂ ಇಲ್ಲ. ಈ ದೇಹ ರಕ್ತಮಾಂಸದಿಂದ ಕೂಡಿದ್ದು. ಕೆಲವು ವೇಳೆ ಕೋಪದಭರದಲ್ಲಿ ನಾನು ಏನಾದರೂ ಅನ್ನಬಹುದು.

ನಂತರ ಶ್ರೀಮಾತೆ ತಮಗೆ ತಾವೇ, "ಯಾರು ಸಮಯದಲ್ಲಿ ಎಚ್ಚರಿಸುವರೋ ಅವರೇ ನಿಜವಾದ ಮಿತ್ರರು. ಆ ವೇಳೆ ಕಳೆದು ಹೋದಮೇಲೆ 'ಅಯ್ಯೋ?' ಅಂದರೆ ಫಲವೇನು?" ಎಂದುಕೊಂಡರು.

೧೧ ನೇ ಡಿಸೆಂಬರ್, ೧೯೧೨.

ಕಾಶಿಯಲ್ಲಿರುವವರೆಗೆ ಶ್ರೀಮಾತೆ ಕಾಶಿಖಾಂಡವನ್ನು ಓದಿಸಿ ಕೇಳುತ್ತಿದ್ದರು. ಒಂದು ಸಂಜೆ ಪುಸ್ತಕ ಓದಿಯಾದಮೇಲೆ ಆಕೆ ಶಿಷ್ಯನೊಡನೆ ಸಂಭಾಷಣೆಗೆ ತೊಡಗಿದರು.

ಶಿಷ್ಯ :– ಕಾಶಿಯಲ್ಲಿ ಸತ್ತವರೆಲ್ಲಾ ಮುಕ್ತಿಪಡೆಯುವರೆ?

ಶ್ರೀಮಾತೆ :– ಪುರಾಣಗಳು ಅಹುದೆಂದು ಹೇಳುತ್ತವೆ.

ಶಿಷ್ಯ :– ನಿಮ್ಮ ಪ್ರತ್ಯಕ್ಷ ಅನುಭವವೇನು? ಗುರುಮಹಾರಾಜರು ಪ್ರತ್ಯಕ್ಷ ಶಿವನೇ ಸತ್ತವರ ಕಿವಿಯಲ್ಲಿ ಪವಿತ್ರತಾರಕಮಂತ್ರ (ತಾರಕ ಬ್ರಹ್ಮ) ವನ್ನು ಉಸುರುತ್ತಿರುವುದನ್ನು ನೋಡಿರುವೆನೆನ್ನುತ್ತಿದ್ದರು.

ಶ್ರೀಮಾತೆ.– ಆ ವಿಷಯ ನಾನರಿಯೆ ಮಗು. ಅಂತಹುದೇನನ್ನೂ ನಾನು ನೋಡಲಿಲ್ಲ.

ಶಿಷ್ಯ :–ನಿಮ್ಮಿಂದ ಈ ವಿಷಯವಾಗಿ ಸ್ವಲ್ಪವನ್ನಾದರೂ ಕೇಳಿದ ಹೊರತು ನಾನು ಇದನ್ನು ನಂಬಲಾರೆ.

ಶ್ರೀಮಾತೆ:– ನಾನು ಗುರುಮಹಾರಾಜರಲ್ಲಿ "ರಾ— ಇದನ್ನು ನಂಬಲಿಚ್ಛಿಸುವುದಿಲ್ಲ. ದಯವಿಟ್ಟು ಅದರ ವಿಷಯವಾಗಿ ನನಗೇನಾದರೂ

ತೋರಿಸಿ” ಎಂದು ಹೇಳುವೆ.

ನಾನು ಮಹಮ್ಮದೀಯರ ಆಳ್ವಿಕೆಯಲ್ಲಿ ಅನೇಕ ದೇವಾಲಯಗಳು ಹಾಳಾದ ಸಮಾಚಾರವನ್ನು ಹೇಳುತ್ತಿದ್ದೆ. ಆಗ “ಎಷ್ಟೊಂದು ದಬ್ಬಾಳಿಕೆಯಿತ್ತು. ದೇವರು ಅದಕ್ಕೇನನ್ನು ಮಾಡಿದ?” ಎಂದು ಕೇಳಿದೆ.

ಶ್ರೀಮಾತೆ:– ದೇವರಿಗೆ ಅನಂತ ಸಹನೆಯಿದೆ. ಹಗಲೂ ರಾತ್ರೆ ಕೊಡಗಳಲ್ಲಿ ಶಿವನ ತಲೆಯ ಮೇಲೆ ನೀರನ್ನು ಸುರಿದು ಜನರು ಶಿವನನ್ನು ಆರಾಧಿಸುವರು. ಅದರಿಂದ ಅವನಿಗೇನಾದರೂ ಆಗುವುದೆ? ಒಣಗಿದ ಬಟ್ಟೆಯನ್ನುಡಿಸಿಯೇ ಆರಾಧಿಸುವರು. ಅದರಿಂದ ಅವನಿಗೇನಾದರೂ ತೊಂದರೆಯಾಗುವುದೇ? ದೇವರ ತಾಳ್ಮೆಗೆ ಎಲ್ಲೆಯೇ ಇಲ್ಲ.

ಮರುದಿನ ಬೆಳಿಗ್ಗೆ ಶ್ರೀಮಾತೆ. ಕ— ಮಹಾರಾಜರಿಗೆ ಹೀಗೆಂದರು: “ನೆನ್ನೆ ರಾತ್ರೆ ನನ್ನ ಹಾಸಿಗೆಯಲ್ಲಿ ಎಚ್ಚರವಾಗಿದ್ದಾಗ ಇದ್ದಕ್ಕಿದ್ದಂತೆ ನಾನು ಬೃಂದಾವನದ ಸೇಟ್ ದೇವಸ್ಥಾನದ ನಾರಾಯಣ ವಿಗ್ರಹದ ಬಳಿ ನಿಂತಿರುವಂತೆ ಕಂಡೆ. ದೇವರ ಕೊರಳಿನಲ್ಲಿದ್ದ ಪುಷ್ಪ ಹಾರವು ಕಾಲಿನವರೆಗೂ ನೇತಾಡುತ್ತಿತ್ತು. ಗುರುಮಹಾರಾಜರು ನಮ್ರಭಾವದಿಂದ ಕೈ ಜೋಡಿಸಿ ಆ ವಿಗ್ರಹದ ಮುಂದೆ ನಿಂತಿದ್ದರು. ನಾನು, “ಗುರುಮಹಾರಾಜರು ಇಲ್ಲಿಗೆ ಹೇಗೆ ಬಂದರು?” ಎಂದು ಯೋಚಿಸಿದೆ. ನಾನು ಅವರನ್ನು “ರ— ನಂಬಲಿಚ್ಛಿಸುವುದಿಲ್ಲ” ಎಂದೆ. ಗುರುಮಹಾರಾಜರು, “ಅವನು ನಂಬಲೇ ಬೇಕು. ಇವೆಲ್ಲಾ ನಿಜ” ಎಂದರು. ಎಂದರೆ ಯಾರು ಕಾಶಿಯಲ್ಲಿ ಸತ್ತರೂ ಅವರು ಮೋಕ್ಷಪಡೆಯುವರೆಂಬುದು ನಿಜವೆಂದು ಹೇಳಿದಂತಾಯಿತು. ಆ ನಾರಾಯಣ ವಿಗ್ರಹ ಎರಡು ವಿಷಯಗಳನ್ನು ನನಗೆ ಹೇಳಿತು. ಅದರಲ್ಲಿ ಒಂದು, ಭಗವಂತನ ಸಾಕ್ಷಾತ್ಕಾರವಿಲ್ಲದೆ ಸತ್ಯವನ್ನು ತಿಳಿಯಲಾರ ಎಂಬುದು, ಮತ್ತೊಂದು ವಿಷಯ ಏನೆಂದು ನನಗೆ ನೆನಪಿಲ್ಲ.”

ಕ– ಮಹಾರಾಜ್:– ನಾರಾಯಣನ ವಿಗ್ರಹದ ಎದುರಿಗೆ ಗುರುಮಹಾರಾಜರೇಕೆ ಕೈ ಜೋಡಿಸಿ ನಿಂತಿದ್ದರು.

ಶ್ರೀಮಾತೆ:– ಅದು ಅವರ ಸ್ವಭಾವ. ಅವರು ಎಲ್ಲರೆದುರಿಗೂ ದೀನ ಭಾವದಿಂದಿರುತ್ತಿದ್ದರು.

ನಾನು ಬೆಳಿಗ್ಗೆ ಶ್ರೀಮಾತೆಯವರ ಬಳಿಗೆ ಹೋಗಿದ್ದೆ. ಹಿಂದಿನ ದಿನದ

ನಮ್ಮ ಮಾತುಕತೆಯ ವಿಚಾರ ಕೇಳಿದೆ: "ದಯವಿಟ್ಟು ಕಾಶಿಯಲ್ಲಿ "ಸತ್ತವರಿಗೆಲ್ಲಾ ಮೋಕ್ಷಲಾಭವಾಗುವುದೆ" ನೀವೇನು ನೋಡಿದಿರಿ?"

ಶ್ರೀಮಾತೆ:– ಶಾಸ್ತ್ರಗಳು ಹಾಗೆ ಹೇಳಿವೆ. ಅದೂ ಅಲ್ಲದೆ ಬೇಕಾದಷ್ಟು ಮಂದಿ ಆ ಶ್ರದ್ಧೆಯಿಂದಲೇ ಇಲ್ಲಿಗೆ ಬಂದಿದ್ದಾರೆ. ಭಗವಂತನಲ್ಲಿ ಶರಣಾದವರಿಗೆಲ್ಲಾ ಮತ್ತೇನಾಗಬಲ್ಲುದು?

ಶಿಷ್ಯ:– ಯಾರು ಭಗವಂತನಲ್ಲಿ ಮರೆಹೊಕ್ಕಿರುವರೋ ಅವರಿಗೆಲ್ಲಾ ಮುಕ್ತಿಸಿಗುವುದೆಂಬುದು ನಿಜ. ಆದರೆ ಭಗವಂತನಲ್ಲಿ ಯಾರು ಶರಣಾಗತರಾಗಿಲ್ಲವೊ, ಯಾರು ಆತನ ಭಕ್ತರಾಗಿಲ್ಲವೊ, ಅಥವಾ ಇತರ ಪಂಥಗಳಿಗೆ ಸೇರಿರುವರೋ ಅವರೆಲ್ಲ ಕಾಶಿಯಲ್ಲಿ ಮರಣಹೊಂದಿದರೆ ಮೋಕ್ಷಸಿಗುವುದೆ?

ಶ್ರೀಮಾತೆ:– ಹೌದು, ಅವರೂ ಮುಕ್ತಿಯನ್ನೈದುವರು. ಕಾಶಿಯು ಭಗವಂತನ ಸ್ವರೂಪದಿಂದಾವೃತವಾಗಿದೆ. ಇಲ್ಲಿ ಜೀವಿಸುವ ಎಲ್ಲಾ ಜೀವಿಗಳೂ, ಕ್ರಿಮಿಕೀಟಗಳೂ ದೈವೀಕ ಚಿತ್ತವುಳ್ಳವಾಗಿರುತ್ತವೆ. ಯಾವ ಜೀವಿ ಇಲ್ಲಿ ಸಾಯಲಿ ಅವನೊಬ್ಬ ಭಕ್ತನಾಗಿರಲಿ ಅನ್ಯಧರ್ಮದವನಿರಲಿ, ನಾಸ್ತಿಕನಾಗಲಿ, ಕ್ರಿಮಿಕೀಟವಾಗಲಿ — ಎಲ್ಲರೂ ಮೋಕ್ಷಪಡೆಯುವರು.

ಶಿಷ್ಯ:– ನೀವು ಸತ್ಯವನ್ನು ನುಡಿಯುತ್ತಿರುವಿರಾ?

ಶ್ರೀಮಾತೆ:– ಖಂಡಿತವಾಗಿಯೂ ಸತ್ಯ. ಇಲ್ಲದಿದ್ದಲ್ಲಿ ಪವಿತ್ರಕ್ಷೇತ್ರಗಳನ್ನು ಹೇಗೆ ವಿವರಿಸುವೆ?

ದೇವರಿಗೆ ನೈವೇದ್ಯಮಾಡಿದ ಕೆಲವು ಸಿಹಿಪದಾರ್ಥಗಳು ಹತ್ತಿರ ಇದ್ದುವು. ಒಂದುನೊಣ ಝೇಂಕರಿಸುತ್ತಾ ಬಂದು ನನ್ನ ತೋಳ ಮೇಲೆ ಕುಳಿತುಕೊಂಡಿತು. ಅದರ ಕಡೆ ಬೆರಳುಮಾಡಿ "ಈ ನೊಣವೂ ಕೂಡ?" ಎಂದು ಕೇಳಿದೆ.

ಶ್ರೀಮಾತೆ:– ಹೌದು, ಅದೂ ಕೂಡ. ಇಲ್ಲಿ ಜೀವಿಸುವ ಪ್ರತಿಯೊಂದು ಪ್ರಾಣಿಯಲ್ಲೂ ದೇವರತೇಜಸ್ಸಿದೆ. ಭೂದೇವನು ಮೆಟ್ಟಿಲಿನ ಮೇಲೆ ಕುಳಿತಿದ್ದಾಗ ಹಿಡಿದಿದ್ದ ಎರಡು ಎಳೆ ಪಾರಿವಾಳಗಳನ್ನು ಮನೆಗೆ ಒಯ್ಯಲು ಇಚ್ಛಿಸಿದ್ದ. ನಾನು "ಬೇಡ., ಅವು ಕಾಶಿಯಲ್ಲಿ ವಾಸಮಾಡುವುವು" ಎಂದೆ. ಪೂರ್ವಬಂಗಾಳದಿಂದ ಬಂದ ಹೆಂಗಸರು

ಬಂಗಾಲಿತೋಲದಲ್ಲಿ ವಾಸಿಸುವರು. ಅವರಿಗೆ ತಮ್ಮ ಮನೆ ಮಠ ಮಿತ್ರರು ಬಂಧುಗಳು ಯಾರಮೇಲೂ ಪ್ರೀತಿ ಇಲ್ಲವೆ? ಕಾಶಿಯಲ್ಲಿ ತಮ್ಮ ಕೊನೆ ದಿನಗಳನ್ನು ಕಳೆಯಲು ಅವರು ಇಲ್ಲಿಗೆ ಬಂದು ನೆಲಸಿದ್ದಾರೆ. ಅವರಿಗೆ ಅಂತಹ ಬುದ್ಧಿ ಇದೆ. ಅವರಿಗೆ ಮೋಹವಿಲ್ಲ.

ಶಿಷ್ಯ:— ನೋಡಿ, ಪೂರ್ವಬಂಗಾಳದ ಜನರು ಎಷ್ಟು ದರ್ಮಿಷ್ಠರು!

ಶ್ರೀಮಾತೆ:— ಹೌದು, ಅದು ನಿಜ. ನಮ್ಮ ಊರಿನ ಜನರಿಗೆ ಆಧ್ಯಾತ್ಮಿಕ ಬುದ್ಧಿ ಕೊಂಚವೂ ಇಲ್ಲ. ರಾಘುವಿನ ಮಾವನನ್ನೇ ಉದಾಹರಣೆಗೆ ತೆಗೆದುಕೊ. ಅವನಿಗೆ ಕಾಶಿಯಲ್ಲೊಂದು ಮನೆ ಇದೆ. ಆದರೂ ಕಾಶಿಯ ಹೆಸರೆತ್ತಿದ ಕೂಡಲೇ ಮನೆಯವರೆಲ್ಲಾ ಹೆದರುವರು. ತಮ್ಮ ಹಳ್ಳಿಯಲ್ಲೇ ಇದ್ದರೆ ತಾವು ಸಾಯುವುದಿಲ್ಲೆಂದು ಅವರು ನಂಬಿದ್ದಾರೆ. ಮೃತ್ಯು ನಮ್ಮ ಛಾಯೆಯಂತೆ ನಮ್ಮನ್ನನುಸರಿಸುತ್ತದೆ.

ಶಿಷ್ಯ:— ನೀವು ನಿಜವಾಗಿಯೂ ಕಾಶಿಯಲ್ಲಿ ಸತ್ತವರಿಗೆ ಮೋಕ್ಷವೆಂದು ಹೇಳಿದಾಗ ಸತ್ಯವನ್ನೇ ನುಡಿದಿರಾ?

ಶ್ರೀಮಾತೆ:— (ಕಠಿಣವಾಗಿ) ನಿನ್ನ ಮುಂದೆ ನಾನು ಮೂರು ಬಾರಿ ಪ್ರಮಾಣಮಾಡಲಾರೆ? ಒಂದು ಬಾರಿ ಆಣೆ ಇಟ್ಟುಕೊಳ್ಳುವುದೇ ತಪ್ಪು. ಮೂರು ಬಾರಿ ಮಾಡುವುದೆಂದರೆ! ಅದೂ ಕಾಶಿಯಲ್ಲಿ!

ಶಿಷ್ಯ:— ದಯವಿಟ್ಟು ನಾನು ಕಾಶಿಯಲ್ಲಿ ಸಾಯುವಂತೆಮಾಡಬೇಡಿ. ಹಾಗಾದರೆ ನಾನೆಲ್ಲಿರುವೆ, ನೀನೆಲ್ಲಿರುವಿರಿ? ನಾವಿಬ್ಬರೂ ಒಬ್ಬರನ್ನೊಬ್ಬರು ನೋಡಲಾಗುವುದೇ ಇಲ್ಲ.

ಶ್ರೀಮಾತೆ:— (ನಗುತ್ತಾ) ಎಷ್ಟು ಮೂಢತನ! ತಾನು ಕಾಶಿಯಲ್ಲಿ ಸಾಯಲಿಚ್ಛಿಸುವುದಿಲ್ಲವೆನ್ನುತ್ತಾನೆ!

ಶಿಷ್ಯ:— ತಾಯಿ, ನೋಡುವುದೇ ನಂಬಿಕೆ. ನಾವೇನಾದರೂ ನಂಬಬೇಕಾದಾಗ ಅದನ್ನು ಕಣ್ಣಿನಿಂದ ನೋಡಿದರೆ ಸಂಪೂರ್ಣ ನಂಬಿಕೆಯಾಗುವುದು.

ಶ್ರೀಮಾತೆ:— ಮಹಾತ್ಮರಾದವರ ಮಾತುಗಳನ್ನು ನೀನು ನಂಬದಿದ್ದಲ್ಲಿ ಮತ್ತೇನು ಮಾಡುವೆ? ಋಷಿಗಳು, ಪವಿತ್ರ ಪುರುಷರು ಹೋದ ಜಾಡನ್ನನುಸರಿಸದೆ ಮತ್ತಾವ ಹಾದಿ ಇದೆ?

ಶಿಷ್ಯ:— ಇಲ್ಲ ನಿಜ! ಪ್ರತ್ಯಕ್ಷ ನೋಡಿದ ಮುನಿಗಳು ಹೇಳುವ ಮಾತನ್ನು ಕೇಳದೆ ಮತ್ತೇನು ತಾನೆ ಮಾಡಬಲ್ಲೆ? ಅದಕ್ಕೇ ನಾನು

ನಿಮ್ಮನ್ನು ಈ ಪ್ರಶ್ನೆ ಕೇಳಿದೆ. ನೀವು ನನಗೆ ನೇರವಾದ ಉತ್ತರಕೊಟ್ಟ ಹೊರತು ನಿಮ್ಮನ್ನು ಬಿಡುವುದಿಲ್ಲ.

ಶ್ರೀಮಾತೆ:– ನೀನು ನಂಬಿದರೆ ಅಥವಾ ನಂಬದಿದ್ದರೆ ದೇವರಿಗೇನಾಗಬೇಕು? ಶುಕದೇವನಂಥ ಮುನಿಯೂ ಕೂಡ ಅವನಿಗೆ ಹೆಚ್ಚೆಂದರೆ ಒಂದು ದೊಡ್ಡ ಇರುವೆಯ ಸಮಾನ. ಅನಂತನಾತನು. ಅವನನ್ನು ನೀನೆಷ್ಟು ಅರಿಯಬಲ್ಲೆ? ಗುರುಮಹಾರಾಜರು ಅವನ ಪ್ರತ್ಯಕ್ಷ ಅನುಭವ ಪಡೆದಿದ್ದರು. ಅವರು ಪ್ರತಿಯೊಂದನ್ನೂ ನೋಡಿದ್ದರು. ಎಲ್ಲವನ್ನೂ ತಿಳಿದಿದ್ದರು—ಅವರ ಮಾತು ವೇದವಾಕ್ಯ. ಅವರ ಮಾತಿನಲ್ಲಿ ನೀನು ನಂಬಿಕೆ ಇಡದಿದ್ದಲ್ಲಿ ಮತ್ತೇನು ಮಾಡುವೆ?

ಶಿಷ್ಯ:– ಶಾಸ್ತ್ರಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ಶಾಸ್ತ್ರಗಳು "ಇದು" ಎಂದೂ ಮತ್ತೆ ಕೆಲವು "ಅದು" ಎಂದೂ ಹೇಳುತ್ತವೆ. ಯಾವುದನ್ನು ನಾವು ತೆಗೆದುಕೊಳ್ಳಬೇಕು? ಅದಕ್ಕೇ ನಿಮ್ಮನ್ನು ಕಾಡುತ್ತಿದ್ದೇನೆ.

ಶ್ರೀಮಾತೆ:– ಅದು ನಿಜ. ಪಂಚಾಂಗ ಮುಂಬರುವ ಮಳೆದಿನ ಹೇಳುತ್ತದೆ. ಆದರೆ ಅದರ ಪುಟಗಳನ್ನು ಹಿಂಡಿದರೆ ನಿಮಗೆ ಒಂದು ತೊಟ್ಟೂ ನೀರು ಬರುವುದಿಲ್ಲ. ಅಲ್ಲದೆ ಪುರಾಣಗಳಲ್ಲಿ ಅನೇಕ ನಿಷ್ಪ್ರಯೋಜಕವಾದುವುಗಳು ಇವೆ. ಅಕ್ಷರಶಃ ಪ್ರತಿಯೊಂದನ್ನೂ ಶಾಸ್ತ್ರದಲ್ಲಿರುವಂತೆ ಅನುಸರಿಸಲು ಅಸಾಧ್ಯ. ಗುರುಮಹಾರಾಜರು, "ಶಾಸ್ತ್ರಗಳ ನಿಯಮಗಳಿಂದ ಸುತ್ತುವರಿಯಲ್ಪಟ್ಟ ಭಕ್ತಿ ತನ್ನ ಹೆಸರನ್ನೇ ಉಳಿಸಿಕೊಳ್ಳಲಾರದು. . . ." ಎನ್ನುತ್ತಿದ್ದರು.

ಈ ಕಲಿಯುಗದಲ್ಲಿ ಸತ್ಯಕ್ಕೆ ಅಂಜಿ ನಡೆದರೆ ಸಾಕು. ಭಗವಂತ ಲಭಿಸುವನು. ಗುರುಮಹಾರಾಜರು, "ಯಾರು ಸತ್ಯವನ್ನು ಹೊರತು ಬೇರೇನನ್ನೂ ನುಡಿಯುವುದಿಲ್ಲವೋ ಅವರು ದೇವರ ತೊಡೆಯಮೇಲೆ ಮಲಗಿದ್ದಂತೆ" ಎನ್ನುತ್ತಿದ್ದರು. ದಕ್ಷಿಣೇಶ್ವರದಲ್ಲಿ ಅವರು ಹಾಸಿಗೆ ಹಿಡಿದಿದ್ದಾಗ ನಾನು ಹಾಲನ್ನು ಕಾಯಿಸಿ ಗಟ್ಟಮಾಡಿ ಎರಡು ಪೌಂಡು ಹಾಲನ್ನು ಒಂದು ಪೌಂಡೆಂದುಹೇಳಿ ಕೊಡುತ್ತಿದ್ದೆ. ನಾನು ನಿಜವಾದ ಅಳತೆಯನ್ನು ಹೇಳುತ್ತಿರಲಿಲ್ಲ, ಒಂದು ದಿನ ಅವರಿಗೆ ನಿಜಸ್ಥಿತಿ ತಿಳಿದು, "ಇದೇನು? ಸತ್ಯಕ್ಕೆ ಮಣಿ. ನಾನು ಈರೀತಿ ಹೆಚ್ಚು ಹಾಲನ್ನು ತೆಗೆದುಕೊಳ್ಳುತ್ತಿರುವುದರಿಂದ ಮಲಭಾವೆಯುಂಟಾಗಿದೆ" ಎಂದರು. ಅದಕ್ಕೆ

ಸರಿಯಾಗಿ ಆ ದಿನವೇ ಅವರಿಗೆ ಮಲಭಾದೆಯಿಂದ ತೊಂದರೆಯಾಯಿತು. ಅವರಿಗೆ ಎಲ್ಲಾ ಬಗೆಯ ಶಕ್ತಿಯೂ ಇತ್ತು; ಆದರೆ ನಮಗೆ ಹಾಗಲ್ಲ.

ಶಿಷ್ಯ:—ನಾನು ಈರೀತಿ ನಿಮ್ಮನ್ನು ಕೇಳುತ್ತಿರುವುದು ಅಥವಾ ಈರೀತಿ ಮಾತಾಡುತ್ತಿರುವುದು ನನಗೋಸುಗ ಅಲ್ಲ. ನನಗೆ ಇದರಿಂದ ಚಿಂತೆಯೇನೂ ಇಲ್ಲ. ನನಗೆ ಅವುಗಳ ವಿಷಯದಲ್ಲಿ ಬೇರೆ ಭಾವನೆ ಇದೆ. ನಾನು ತಿಳಿಯಬೇಕೆಂದಿರುವುದು ಇಷ್ಟು—ನಾನು ನಿಮ್ಮನ್ನು ನನ್ನ ತಾಯಿಯೆಂದು, ಕರೆಯುವೆ. ನೀವು ನಿಜವಾಗಿ ನನ್ನ ತಾಯಿಯೆ ?

ಶ್ರೀಮಾತೆ:—ನಾನು ಮತ್ತಾರು ? ನಾನು ನಿನ್ನ ಸ್ವಂತ ತಾಯಿ.

ಶಿಷ್ಯ:—ನೀವು ಹಾಗೆ ಹೇಳಬಹುದು. ನಾನದನ್ನು ಸ್ಪಷ್ಟವಾಗಿ ನೋಡುತ್ತಿಲ್ಲ. ಸ್ವಾಭಾವಿಕವಾಗಿ ಮತ್ತು ಅಂತಃಸ್ಫೂರ್ತಿಯಿಂದ ಯಾರು ನನಗೆ ಈ ಜನ್ಮವನ್ನು ಕೊಟ್ಟಳೋ ಅವಳನ್ನು ನನ್ನ ಸ್ವಂತ ತಾಯಿಯೆಂದು ಅರಿತಿರುವೆ. ಆದರೆ ನಿಮ್ಮನ್ನು ಆರೀತಿ ಭಾವಿಸಲು ಸಾಧ್ಯವೆ ?

ಶ್ರೀಮಾತೆ:— ಅಯ್ಯೊ! ಅದು ನಿಜ.

ಕೆಲವು ನಿಮಿಷಗಳ ತರುವಾಯ ಶ್ರೀಮಾತೆ, "ಮಗು, ಭಗವಂತನೇ ನಮ್ಮ ತಾಯಿ ನಮ್ಮ ತಂದೆ. ಅವನೇ ನಮ್ಮ ತಂದೆತಾಯಿಯಾಗಿರುವನು" ಎಂದರು.

ಡಿಸೆಂಬರ್, ೧೯೧೨.

ಶಿಷ್ಯ:— ತಪಸ್ಸಿನ ಆವಶ್ಯಕತೆಯೇನು ?

ಶ್ರೀಮಾತೆ:— ಅದು ತುಂಬಾ ಆವಶ್ಯಕ. ಯೋಗಿನ್‌ಮಾ ನೋಡು ಈಗಲೂ ಆಕೆ ಎಷ್ಟು ಉಪವಾಸಮಾಡುತ್ತಾಳೆ ? ಅವಳು ಕಠಿಣ ತಪಸ್ಸನ್ನಾಚರಿಸುವಳು. ಗುಲಾಬ್ ಜಪದಲ್ಲಿ ನಿಸ್ಸೀಮಳು. ಒಂದು ದಿನ ನರೇಂದ್ರನ ತಾಯಿ ನನ್ನನ್ನು ನೋಡಲು ಬಂದಳು. ನರೇಂದ್ರ, "ಬಹುಶಃ ನೀನು ತಪಸ್ಸಾಧನೆಮಾಡಿರಬೇಕು. ಅದಕ್ಕೇ ನೀನು ವಿವೇಕಾನಂದನಂತಹ ಮಗನನ್ನು ಪಡೆದೆ. ಪುನಃ ಮಾಡು ನಿನಗೆ ಮತ್ತೊಬ್ಬ ದೊರೆಯಬಹುದು......." ಎಂದು ಹೇಳಿದ.

ಗುರುಮಹಾರಾಜರು ಎಲ್ಲಾ ಬಗೆಯ ಸಾಧನೆಯನ್ನೂ ಮಾಡಿದ್ದರು. ಅವರು, "ನಾನು ಎರಕಹೊಯ್ದಿರುವೆ. ನೀನು ವಿಗ್ರಹವನ್ನು ಮಾಡು" ಎನ್ನುತ್ತಿದ್ದರು.

ಶಿಷ್ಯ:– ವಿಗ್ರಹವನ್ನು ಎರಕಹೊಯ್ಯುವುದೆಂದರೇನು ?

ಭೂದೇವ್ :– ಎಂದರೆ ಗುರುಮಹಾರಾಜರನ್ನು ಧ್ಯಾನಿಸುವುದೆಂದರ್ಥ.

ಶ್ರೀಮಾತೆ:– ಹೌದು, ಅವನು ಅರ್ಥಮಾಡಿಕೊಂಡ. ವಿಗ್ರಹವನ್ನು ಮಾಡವುದೆಂದರೆ ಗುರುಮಹಾರಾಜರನ್ನು ಕುರಿತು ಧ್ಯಾನಮಾಡುವುದು, ಅವರ ಜೀವನದ ಘಟನೆಗಳನ್ನು ಕುರಿತು ಯೋಚಿಸುವುದು ಎಂದು. ಅವರನ್ನು ಧ್ಯಾನಿಸುವುದರಿಂದ ಎಲ್ಲಾ ಬಗೆಯ ಆಧ್ಯಾತ್ಮಿಕ ಭಾವಗಳೂ ಬರುವುವು. ಅವರು, "ಯಾರು ನನ್ನನ್ನು ನೆನಸುತ್ತಾರೋ ಅವರಿಗೆ ಆಹಾರದ ಅಥವಾ ಮತ್ತಾವ ಶಾರೀರಕ ಅಭಾವಗಳೂ ಉಂಟಾಗುವುದಿಲ್ಲ" ವೆನ್ನುತ್ತಿದ್ದರು.

ಮಾಕು :– ಅವರೇ ಅದನ್ನು ಹೇಳಿದರೆ?

ಶ್ರೀಮಾತೆ:– ಹೌದು. ಇದು ಅವರ ಬಾಯಿಂದ ಬಂದ ಮಾತು. ಅವರ ಸ್ಮರಣೆಯಿಂದ ನಮ್ಮೆಲ್ಲಾ ಕಷ್ಟಗಳೂ ಪರಿಹಾರವಾಗುವುವು. ಅವರ ಭಕ್ತರೆಲ್ಲಾ ಆನಂದದಲ್ಲಿರುವುದನ್ನು ನೀನು ನೋಡುತ್ತಿಲ್ಲವೆ? ಗುರುಮಹಾರಾಜರ ಶಿಷ್ಯರಂತಹ ಭಕ್ತರು ಮತ್ತೆಲ್ಲೂ ಇಲ್ಲ. ಇಲ್ಲಿ, ಈ ಕಾಶೀಪಟ್ಟಣದಲ್ಲಿ ಅಷ್ಟೊಂದು ಪವಿತ್ರ ಪುರುಷರಿದ್ದಾರೆ, ಒಬ್ಬರಾದರೂ ಅವರ ಭಕ್ತರಂತಿರುವುದನ್ನು ತೋರಿಸುವೆಯಾ ?

ಶಿಷ್ಯ :– ಅದಕ್ಕೊಂದು ಕಾರಣವಿದೆ ತಾಯಿ. ಶ್ರೀರಾಮಕೃಷ್ಣರ ವಿಷಯವಾಗಿ ಸಂತೆ ಈಗತಾನೇ ಮುಗಿದಂತೆ ಇದೆ. ಸಂತೆಯ ಗುರುತೆಲ್ಲಾ ಅಲ್ಲಿದೆ. ಜನರು ಇನ್ನೂ ತಿರುಗಾಡುತ್ತಿರುವರು. ಗುರುಮಹಾರಾಜರ ಭಕ್ತರು, ಆಪ್ತ ಶಿಷ್ಯರು ಇನ್ನೂ ಬದುಕಿದ್ದಾರೆ. ಅವರು ತೀರ ಹತ್ತಿರದಲ್ಲೇ ಇದ್ದಾರೆಯೇ ಎನ್ನಿಸುತ್ತದೆ. ಅವರು ನಮ್ಮಿಂದ ಬಹು ದೂರ ಹೋಗಿಲ್ಲ. ನಾವು ಅವರನ್ನು ಕರೆದರೆ ಖಂಡಿತ ಉತ್ತರ ಕೊಡುವರು.

ಶ್ರೀಮಾತೆ :– ಹೌದು. ಅನೇಕ ಜನರು ಪಡೆದಿದ್ದಾರೆ.

ಶಿಷ್ಯ :– ರಾಮ, ಕೃಷ್ಣ ಮುಂತಾದವರು ಬಹಳ ಹಿಂದಿನ ಕಾಲಕ್ಕೆ ಸೇರಿದವರೆಂದು ಅನ್ನಿಸುತ್ತದೆ. ನಮ್ಮ ಪ್ರಾರ್ಥನೆಗೆ ಕಿವಿಗೊಡುವಷ್ಟು ಹತ್ತಿರದಲ್ಲಿಲ್ಲ ಎನ್ನಿಸುವುದು.

ಶ್ರೀಮಾತೆ :– ಹೌದು, ಅದು ನಿಜ.

ಕಾಶೀಪುರ ತೋಟದ ವಿಚಾರಮಾತನಾಡುತ್ತಾ ಶಿಷ್ಯ "ಅದು ಪವಿತ್ರಸ್ಥಳ. ಒಬ್ಬ ಪಾಶ್ಚಾತ್ಯ ಅಲ್ಲಿ ವಾಸಮಾಡುತ್ತಿದ್ದಾನೆ" ಎಂದನು.

ಶ್ರೀಮಾತೆ:— ಗುರುಮಹಾರಾಜರು ತಮ್ಮ ಅಂತ್ಯ ದಿನಗಳನ್ನು ಆ ಕಾಶೀಪುರದ ತೋಟದಲ್ಲಿ ಕಳೆದರು. ಆ ಸ್ಥಳ ಎಷ್ಟೊಂದು ಧ್ಯಾನ, ತಪಸ್ಸು, ಸಮಾಧಿ ಇವುಗಳಿಂದ ಕೂಡಿದೆ. ಗುರುಮಹಾರಾಜರು ಮಹಾ ಸಮಾಧಿ ಹೊಂದಿದ ಸ್ಥಳ ಅದು. ತೀವ್ರ ಆಧ್ಯಾತ್ಮಿಕ ವಾತಾವಣದಿಂದ ಆ ಸ್ಥಳ ತುಂಬಿತುಳುಕಾಡುತ್ತಿದೆ. ಅಲ್ಲಿ ಧ್ಯಾನಮಾಡುವುದರಿಂದ ಭಗವಂತನ ಸಾಕ್ಷಾತ್ಕಾರವಾಗುವುದು. ಗುರುಮಹಾರಾಜರು ಆ ಮನುಷ್ಯನ ಕನಸಿನಲ್ಲಿ ಬಂದು ಅದನ್ನು ಬೇಲೂರು ಮಠಕ್ಕೆ ಕೊಡುವಂತೆ ಪ್ರೇರೇಪಿಸಿದರೆ ಅದನ್ನು ಪಡೆಯಬಹುದು.

ನಂತರ ಶ್ರೀಮಾತೆ ಗುರುಮಹಾರಾಜರ ಶಿಷ್ಯರ ವಿಚಾರ ಮಾತನಾಡಿದರು. ಶಿಷ್ಯನು, "ದಯವಿಟ್ಟು ಈ ಶಿಷ್ಯರು ಯಾರೆಂದು ಹೇಳಿ. ನಮಗೆ ಗುರುತಿಸಲಾಗುವುದಿಲ್ಲ"

ಶ್ರೀಮಾತೆ:— ನನಗೇನು ಗೊತ್ತು? ಅಂತೂ, ಯಾರು ಗುರು ಮಹಾರಾಜರ ಪೂರ್ವ ಜನ್ಮಗಳಲ್ಲಿ ಅವರೊಡನೆ ಹುಟ್ಟಿದ್ದರೋ ಅವರೇ ಈ ಜನ್ಮದಲ್ಲೂ ಬಂದಿದ್ದಾರೆಂಬುದು ಮಾತ್ರ ನಿಜ.

ಶಿಷ್ಯ:— ನನಗೆ ನಾಲ್ಕು ಕೈಗಳುಳ್ಳ ದೇವತೆ ಮುಂತಾದುವನ್ನು ನೋಡಲಿಚ್ಛೆ ಇಲ್ಲ. ನಮಗೆ ಈಗ ಇರುವಷ್ಟರಲ್ಲೇ ತೃಪ್ತಿ ಇದೆ.

ಶ್ರೀಮಾತೆ:— ನನ್ನ ವಿಚಾರ ಕೂಡ ಹಾಗೆಯೇ. ಈ ಅಲೌಕಿಕ ದರ್ಶನದಿಂದ ನಮಗೇನು ಲಾಭ? ನಮಗೆ ಗುರು ಮಹಾರಾಜರು ಬದುಕಿದ್ದಾರೆ, ಅವರೇ ಸರ್ವವೂ ಆಗಿದ್ದಾರೆ.

ಜಯರಾಮವಟ, ಮಾರ್ಚ್ ೧೯೧೩

ಶ್ಯಾಮಾಬಜಾರಿನ ಲಲಿತ ಬಾಬು ಮತ್ತು ಪ್ರಬೋಧಬಾಬು ಬಂದರು. ಮಧ್ಯಾಹ್ನ ನಾಲ್ಕು ಗಂಟೆಗೆ ಶ್ರೀಮಾತೆಯವರ ಹತ್ತಿರ ಬಂದು ಪ್ರಣಾಮಮಾಡಿದರು. ಸಂಭಾಷಣೆಗೆ ಮೊದಲಾಯಿತು.

ಲಲಿತ ಬಾಬು :— ತಾಯಿ, ಆಹಾರದ ವಿಷಯವಾಗಿ ನಾವು ಯಾವ ನಿಯಮ ಮತ್ತು ಕಾಲಾವಧಿಯನ್ನಿಟ್ಟುಕೊಳ್ಳಬೇಕು.

ಶ್ರೀಮಾತೆ:— ಶ್ರಾದ್ಧ ಮುಂತಾದುವುಗಳಲ್ಲಿ ಮಾಡಿದ ಆಹಾರವನ್ನು ಸೇವಿಸಕೂಡದು. ಅದರಿಂದ ಆಧ್ಯಾತ್ಮಿಕ ಜೀವನಕ್ಕೆ ಹಾನಿಯಾಗು

ವುದು. ಶ್ರೀರಾಮಕೃಷ್ಣರು ಅದನ್ನು ನಿಷೇಧಿಸುತ್ತಿದ್ದರು. ಅಲ್ಲದೆ ನೀವೇನು ತಿನ್ನಬೇಕಾದರೂ ಮೊದಲು ಅದನ್ನು ದೇವರಿಗರ್ಪಿಸಿ ನಂತರ ತಿನ್ನಿ. ನೈವೇದ್ಯಮಾಡದೆ ಆಹಾರವನ್ನು ತೆಗೆದುಕೊಳ್ಳಬೇಡಿ. ನಿನ್ನ ಆಹಾರದಂತೆ ನಿನ್ನ ರಕ್ತಕೂಡ. ಶುದ್ಧವಾದ ಆಹಾರದಿಂದ ಶುದ್ಧ ರಕ್ತ, ಪವಿತ್ರ ಮನಸ್ಸು ಮತ್ತು ಶಕ್ತಿ ಲಭಿಸುವುದು. ಪರಿಶುದ್ಧವಾದ ಮನಸ್ಸಿನಲ್ಲಿ ಪ್ರೇಮ, ಭಕ್ತಿ ಉದಿಸುವುದು.

ಲಲಿತ ಬಾಬು:– ತಾಯಿ, ನಾವು ಗೃಹಸ್ಥರು. ನಮ್ಮ ಬಂಧುಗಳ ಶ್ರಾದ್ಧಸಮಯದಲ್ಲಿ ನಾವೇನು ಮಾಡಬೇಕು?

ಶ್ರೀಮಾತೆ:– ಶ್ರಾದ್ಧದ ಮೇಲ್ವಿಚಾರಣೆ ನೋಡಿಕೊ, ಅವರಿಗೆ ಬೇಕಾದ ಸಹಾಯಮಾಡಿ ಅವರಿಗೆ ಅಸಮಾಧಾನವಾಗದಂತೆ ಮಾಡು. ಆದರೆ ಹೇಗಾದರೂ ಆ ದಿನದ ಊಟವನ್ನು ದೂರಮಾಡು. ಹಾಗೆ ಮಾಡ ಲಾಗದಿದ್ದಲ್ಲಿ ವಿಷ್ಣು ಅಥವಾ ಇತರ ದೇವರಿಗೆ ಅರ್ಪಿಸಿದ ಆಹಾರ ಸೇವಿಸು. ಆದಿನ ದೇವರಿಗೆ ನೈವೇದ್ಯಮಾಡಿದ ಆಹಾರವನ್ನು ಭಕ್ತರೂ ಸೇವಿಸ ಬಹುದು.

ಲಲಿತಬಾಬು:– ಶ್ರಾದ್ಧಕ್ಕೋಸ್ಕರ ಮಾಡಿದ ಅನೇಕ ಉಪಯೋಗಿ ಸದ ಆಹಾರ ಪದಾರ್ಥ ಹೆಚ್ಚಾಗಿ ಮಿಗುವುದು. ಅದನ್ನು ಸೇವಿಸಬಹುದೆ?

ಶ್ರೀ ಮಾತೆ:– ಸೇವಿಸಬಹುದು. ಅದರಿಂದೇನೂ ಹಾನಿಯಿಲ್ಲ. ಗೃಹಸ್ಥ ಇನ್ನೇನೂ ಮಾಡಲಾರ.

ಪ್ರಬೋಧಬಾಬು:– ತಾಯಿ, ಗುರುಮಹಾರಾಜರು ತ್ಯಾಗಪ್ರೇಮಿ ಗಳು ನಾವೆಷ್ಟು ಅಲ್ಪವಾಗಿ ಅದನ್ನು ಸಾಧಿಸುತ್ತಿದ್ದೇವೆ!

ಶ್ರೀಮಾತೆ:– ಹೌದು, ನೀವು ಅದನ್ನು ನಿಧಾನವಾಗಿ ಪಡೆಯುವಿರಿ. ಈ ಜನ್ಮದಲ್ಲಿ ಸ್ವಲ್ಪ, ಮುಂದಿನ ಜನ್ಮದಲ್ಲಿ ಇನ್ನೂ ಸ್ವಲ್ಪ, ಹೀಗೇ ಮುಂದು ವರಿಯುವಿರಿ. ದೇಹಮಾತ್ರ ಬದಲಾವಣೆ ಹೊಂದುವುದು. ಆತ್ಮ ಒಂದೇ. "ಕಾಮನಿ ಕಾಂಚನ ತ್ಯಾಗ!" ಗುರುಮಹಾರಾಜರು, "ನಾನು ಇಷ್ಟಪಟ್ಟಲ್ಲಿ ಮಥುರಬಾಬುವಿಗೆ ಹೇಳಿ ಕಮಾರಪುಕುರ ವನ್ನೆಲ್ಲಾ ಬಂಗಾರವನ್ನಾಗಿ ಮಾರ್ಪಡಿಸಬಲ್ಲೆ. ಆದರೆ ಅದ ರಿಂದೇನು ಒಳ್ಳೆಯದಾಗುತ್ತದೆ? ಅವೆಲ್ಲಾ ಕ್ಷಣಿಕ" ಎಂದರು. ಕೆಲವು ಭಕ್ತರ ವಿಚಾರವಾಗಿ, ಇದು ಅವರಿಗೆ ಕಡೆಯ ಜನ್ಮವೆಂದೂ, ಕೆಲವು ಭಕ್ತರ ವಿಚಾರವಾಗಿ, "ಅವನಿಗೆ ಯಾವುದರಮೇಲೂ ಆಸಕ್ತಿಯಿಲ್ಲ. ಇದು

ಅವನ ಕೊನೆಯ ಜನ್ಮ"ವೆಂದು ಹೇಳುತ್ತಿದ್ದರು.

ಭಕ್ತರು ಶ್ರೀಮಾತೆಗೆ ಪ್ರಣಾಮಮಾಡಿ ಅವರನ್ನು ಬೀಳ್ಕೊಟ್ಟರು. ಕೆಲವರು ಶ್ರೀರಾಮಕೃಷ್ಣರ ಸನ್ಯಾಸಿ ಶಿಷ್ಯರಲ್ಲಿ ಕೆಲವು ಶೂದ್ರರಿರುವುದರಿಂದ ಅವರು ಸನ್ಯಾಸಿ ದೀಕ್ಷೆಗೆ ಸನಾತನ ಧರ್ಮಾರ್ಥ ಪ್ರಕಾರ ಅರ್ಹರಲ್ಲ ಎಂದು ಆಕ್ಷೇಪಿಸುತ್ತಿದ್ದರು. ಶ್ರೀಮಾತೆ ಈ ವಿಚಾರವಾಗಿ ಹೀಗೆಂದರು:

"ಶ್ರೀರಾಮಕೃಷ್ಣರ ಶಿಷ್ಯರೆಲ್ಲಾ ಜ್ಞಾನಿಗಳು, ಸನ್ಯಾಸಿಗಳು. ಜ್ಞಾನಿ ಸನ್ಯಾಸಿಯಾಗಬಲ್ಲ. ಗೌರಿದಾಸಿಯ ವಿಚಾರವನ್ನೇ ತೆಗೆದುಕೊ. ಹೆಂಗಸಿಗೆ ಸನ್ಯಾಸ ಕೊಡಲಾಗುವುದಿಲ್ಲ. ಆದರೆ ಗೌರಿದಾಸಿ ಸ್ತ್ರೀಯೇನು? ಆಕೆ ಗಂಡಸನ್ನು ಮೀರಿಸಿದ್ದಾಳೆ. ಎಷ್ಟು ಮಂದಿ ಗಂಡಸರು ಅವಳಹಾಗಿರಬಲ್ಲರು? ಅವಳು ಎಷ್ಟೊಂದು ಸಾಧಿಸಿದ್ದಾಳೆ. ಪಾಠಶಾಲೆ ಕಟ್ಟಿದ್ದಾಳೆ, ಕುದುರೆಗಳು, ಗಾಡಿ ಎಲ್ಲವನ್ನೂ ಪಡೆದಿದ್ದಾಳೆ. ಗುರುಮಹಾರಾಜರು, "ಹೆಂಗಸು ಸನ್ಯಾಸ ಸ್ವೀಕರಿಸಿದರೆ ಅವಳು ಖಂಡಿತ ಸ್ತ್ರೀಯಲ್ಲ, ಅವಳು ನಿಜವಾಗಿ ಗಂಡಸೇ. ನಾನು ನೀರನ್ನು ಸುರಿಯುತ್ತಿದ್ದೇನೆ. ನೀನು ಮಣ್ಣನ್ನು ಕಲಸು" ಎಂದು ಹೇಳುತ್ತಿದ್ದರು.

೨೮ ನೇ ಮಾರ್ಚ್, ೧೯೧೩

ಪ್ರಾತಃಕಾಲ. ಶ್ರೀಮಾತೆಯವರ ಮನೆಯ ಒಳಗಣ ಕೋಣೆಗೆ ಶಿಷ್ಯ ಪ್ರವೇಶಿಸಿದನು. ಮಾತೆ ಕಾಲ್‌ಮಾಯ್ ಸೊಪ್ಪನ್ನು ಹೆಚ್ಚುತ್ತಿದ್ದರು. ಶಿಷ್ಯ, "ಇದೇನು, ನೀವು ಕಾಲ್‌ಮಾಯ್ ಸೊಪ್ಪನ್ನು ಹೆಚ್ಚಿ ಮಾಡುತ್ತಿರುವುದು?" ಎಂದನು. ಶ್ರೀಮಾತೆ, "ಇದು ಸೊಪ್ಪು ಇದು ಒಂದು ಬಗೆಯ ಹಸರು, ಕೃಷ್ಣನ ಮೈಬಣ್ಣವೂ ಇದರಂತೆಯೇ ಇತ್ತು" ಎಂದರು.

ಶಿಷ್ಯ ಮಧ್ಯಾಹ್ನದ ಊಟಕ್ಕೆ ಕುಳಿತಿದ್ದ. ರಾಧು ತಾಯಿ ತನ್ನ ಮನೆ ಎದುರಿನ ವರಾಂಡದಲ್ಲಿ ಎಲೆಹಾಕಿ ನೀರಿಟ್ಟು ಮತ್ತೊಬ್ಬ ಅತಿಥಿಗೆ, ಊಟಕ್ಕೆ ಅಣಿಮಾಡುತ್ತಿದ್ದಳು. ಬಹುಶಃ ಒಬ್ಬ ನಂಟರಿಗೆ ಇರಬಹುದು. ಒಂದು ಬೆಕ್ಕು ಅಲ್ಲಿಯ ನೀರಿನಲ್ಲಿ ಕೊಂಚ ಕುಡಿದು ಬಿಟ್ಟಿತು. ರಾಧು ತಾಯಿ ನೀರನ್ನು ಚೆಲ್ಲಿ ಪುನಃ ನೀರಿಟ್ಟಳು. ಪುನಃ ಬೆಕ್ಕು ಸ್ವಲ್ಪ ನೀರನ್ನು ಕುಡಿಯಿತು. ಪುನಃ ಆಕೆ ಬದಲಾಯಿಸಿದಳು. ಮೂರನೆಯ ಸಲವೂ ಬೆಕ್ಕು ಕುಡಿಯಿತು. ರಾಧು ತಾಯಿ ಅದನ್ನು ಅಟ್ಟಿಸಿಕೊಂಡು, "ಹಾಳಾದೆ, ಸುಟ್ಟ ಮೋರೆಯ ಬೆಕ್ಕೆ, ಕೊಂದುಬಿಡುತ್ತೇನೆ" ಎಂದು ಕೂಗಿ ಕೊಂಡಳು.

ಶ್ರೀಮಾತೆ ಅಲ್ಲಿದ್ದರು. ಅವರು, "ಬೇಡ ಬೇಡ ಬಾಯಾರಿದ ಪ್ರಾಣಿಯನ್ನು ತಡೆಯಬೇಡ. ಅಲ್ಲದೆ ಬೆಕ್ಕು ನೀರನ್ನು ಆಗಲೇ ಮುಟ್ಟಿಬಿಟ್ಟಿದೆ" ಎಂದರು. ರಾಧು ತಾಯಿ ಕೋಪದಿಂದ, "ನೀವು ಬೆಕ್ಕಿಗೂ ಕರುಣೆ ತೋರಬೇಕಾಗಿಲ್ಲ. ಮನುಷ್ಯನ ಮೇಲೆ ಬೇಕಾದಷ್ಟು ಕನಿಕರ ತೋರಿದ್ದೀರಿ. ಮನುಷ್ಯನಿಗೇ ಅದನ್ನು ಕಾದಿಡಿ" ಎಂದಳು.

ಶ್ರೀಮಾತೆ ಗಂಭೀರವಾಗಿ, "ಯಾರು ನನ್ನ ಕರುಣೆ ಪಡೆದಿಲ್ಲವೊ ಅವನು ಅದೃಷ್ಟಹೀನ. ಯಾರಿಗಾದರೂ ಅದೊಂದು ಕ್ರಿಮಿಯಾಗಿದ್ದರೂ ನಾನು ಕನಿಕರ ಪಡದೆ ಇರುವುದು ನನಗೆ ತಿಳಿದಿಲ್ಲ. ನನಗೆ ಎಲ್ಲರಮೇಲೂ ಕನಿಕರ" ಎಂದರು.

ಶಿಷ್ಯ ರಾತ್ರಿ ಊಟಕ್ಕೆ ಕುಳಿತಿದ್ದ. ಶ್ರೀಮಾತೆಯೇ ಪಲ್ಯ ಮುಂತಾದ ತರಕಾರಿಯನ್ನು ಅಡಿಗೆ ಮಾಡಿದ್ದರು. ಸ್ವಲ್ಪವನ್ನು ಶಿಷ್ಯನಿಗೆ ಬಡಿಸಿ, "ರುಚಿನೋಡು. ಚೆನ್ನಾಗಿದೆಯೆ?" ಎಂದು ಕೇಳಿದರು.

ಶಿಷ್ಯ:– ಇದು ರೋಗಿಯ ಆಹಾರ? ಯಾರು ಇದನ್ನು ಮಾಡಿದರು.

ಶ್ರೀಮಾತೆ:– ನಾನೇ.

ಶಿಷ್ಯ:– ನೀವು ಮಾಡಿದ್ದೆ?

ಶ್ರೀಮಾತೆ:– ಹೌದು.

ಶಿಷ್ಯ:– ಇದನ್ನು ಇನ್ನೂ ಚೆನ್ನಾಗಿ ಮಾಡಬಹುದು. ನಮ್ಮ ಕಡೆಯ ಜನರಿಗೆ ಇದು ಅಷ್ಟು ರುಚಿಸುವುದಿಲ್ಲ.

ಶ್ರೀಮಾತೆ:– ನೀನು ಅದರಲ್ಲಿ ನೀರಾಗಿರುವ ಭಾಗವನ್ನು ಸ್ವಲ್ಪ ತಿಂದರೆ ವಾಸಿ.

ನಳಿನಿ:– ಅತ್ತೆ, ನೀವು ಪಲ್ಯಕ್ಕೆ ಮೆಣಸಿನಕಾಯನ್ನು ಹಾಕುವುದೇ ಇಲ್ಲ. ಯಾರಿಗೆ ಅದು ರುಚಿಸುತ್ತೆ.

ಶ್ರೀಮಾತೆ:–(ನಳಿನಿಗೆ) ಅವನ ಮಾತು ಕೇಳಬೇಡ. (ಶಿಷ್ಯನನ್ನುದ್ದೇಶಿಸಿ) ನೀನು ಅದನ್ನು ತಿಂದಾಗ ಅದು ರುಚಿಯಾಗಿದೆ ಎಂದು ಗೊತ್ತಾಗುವುದು.

ಶಿಷ್ಯ:– ಈಗ್ಗೆ ಕೆಲವುದಿನಗಳಿಂದ ನೀವು ಮಾಡಿದ ಪಲ್ಯ ಬೇಕೆಂದು ನಾನು ಕೇಳುತ್ತಿದ್ದೆ. ಕೆಲವನ್ನು ತಿಂದೆ. ಆದರೆ ಎಲ್ಲದರ ರುಚಿಯೂ ಒಂದೇ.

ಶ್ರೀಮಾತೆ:– ಆಗಲಿ, ಒಮ್ಮೆ ನಿಮ್ಮ ಊರಿನಕಡೆ ಮಾಡುವಹಾಗೇ ಮಾಡುವೆ. ಹೇಗೆ ಮಾಡಬೇಕೆಂದು ನೀನೇ ತೋರಿಸಿಕೊಡಬೇಕು. ನೀವು ತುಬಾ ಮೆಣಸಿನಕಾಯಿ ಹಾಕುವಿರಿ ಅಲ್ಲವೆ?

ಶಿಷ್ಯ:– ತುಂಬಾ ಹಾಕುವುದಿಲ್ಲ. ಆದರೆ ತುಂಬಾ ಮೆಣಸಿನ ಕಾಯಿ ಹಾಕದಿದ್ದರೂ ಪಲ್ಯ ರುಚಿಯಾಗಿಲ್ಲದೇ ಇರುವುದಿಲ್ಲ.

ಶ್ರೀಮಾತೆ:–(ನಳಿನಿಗೆ) ನಾಳೆ ಸ್ವಲ್ಪ ಕಾಳನ್ನು ತೆಗೆದುಕೊಂಡು ಬಾ. ನಾನು ಸಾರನ್ನು ಮಾಡುವೆ. ನಾನು ತುಂಬಾ ಚೆನ್ನಾಗಿ ಅಡಿಗೆ ಮಾಡುತ್ತಿದ್ದೆ. ಈಗ ಅಭ್ಯಾಸ ತಪ್ಪಿಹೋಗಿದೆ. ಕಮಾರಪುಕುರದಲ್ಲಿ ಲಕ್ಷ್ಮಿಯತಾಯಿ ಮತ್ತು ನಾನು ಅಡಿಗೆ ಮಾಡುತ್ತಿದ್ದೆವು. ಆಕೆ ತುಂಬಾ ಚೆನ್ನಾಗಿ ಅಡಿಗೆ ಮಾಡುತ್ತಿದ್ದಳು.

೧೨ನೇ ಮೇ ೧೯೧೩.

ಜ್ವರದ ತಾಪದಿಂದ ರಾಧು ಹಾಸಿಗೆ ಹಿಡಿದಿದ್ದಳು. ಅವಳ ಹುಚ್ಚಿ ತಾಯಿ ಶ್ರೀಮಾತೆಯನ್ನು, "ನೀನು ಔಷಧಿಕೊಟ್ಟು ನನ್ನ ಮಗಳನ್ನು ಕೊಲ್ಲಬೇಕೆಂದಿರುವೆ" ಎಂದು ಬೈಯ ತೊಡಗಿದಳು. ಆಕೆ ಬೈಯುತ್ತಾ ಹೋದಂತೆ ನಾಲಿಗೆಯ ಹಿಡಿತ ತಪ್ಪಿಹೋಯಿತು. ಬರೋದಾದನನ್ನು ಕರೆದರು. ಅವನು ರಾಧು ತಾಯಿಯನ್ನು ಮನೆಯಿಂದ ಅಟ್ಟದನು. ಶ್ರೀಮಾತೆಗೂ ಇನ್ನು ಸಹಿಸಲಶಕ್ಯವಾಯಿತು. ಆಕೆ ರಾಧು ತಾಯನ್ನು ಸ್ವಲ್ಪ ಗದರಿಸಿ ಶಿಷ್ಯನಿಗೆ ಹೇಳಿದರು: "ನನ್ನ ಕೈ ಹಿಡಿದವರು ಒಮ್ಮೆ ಯಾದರೂ ಬಾಯಿತಪ್ಪಿ ನನ್ನನ್ನು 'ನೀನು,' ಎನ್ನುತ್ತಿರಲಿಲ್ಲ. ಈ ರಾಧುತಾಯಿ: ಹಗಲೂ ರಾತ್ರಿ ನನ್ನನ್ನು ಹೇಗೆ ನಿಂದಿಸುವಳು? ನಾನೇನು ಪಾಪಮಾಡಿದ್ದೆನೋ ಇದನ್ನೆಲ್ಲ ಅನುಭವಿಸಲು! ಬಹುಶಃ ಮುಳ್ಳಿನ ಬಿಲ್ವಪತ್ರೆಯಿಂದ ಶಿವನನ್ನು ಪೂಜಿಸಿರಬೇಕು. ಆ ಮುಳ್ಳೇ ಈಗ ರಾಧುವಿನ ತಾಯಾಗಿದ್ದಾಳೆ."

ರಾಧು ಖಾಯಿಲೆ ವಿಚಾರ ಮಾತಾಡುತ್ತಾ, ಶ್ರೀಮಾತೆ, "ನನ್ನ ಮನಸ್ಸು ಸ್ವಲ್ಪ ಕೂಡ ರಾಧು ಮೇಲಿಲ್ಲ. ನನಗೆ ಅವಳ ಖಾಯಿಲೆ ಯಿಂದ ಬೇಸರವಾಗಿದೆ. ನನ್ನ ಮನಸ್ಸನ್ನು ಬಲಾತ್ಕಾರದಿಂದ ಅವಳ ಮೇಲಿಡುವೆ. ಗುರುಮಹಾರಾಜರನ್ನು, "ಓ ಸ್ವಾಮಿ, ಸ್ವಲ್ಪ ನನ್ನ ಮನ ಸ್ಸನ್ನು ರಾಧುಕಡೆಗಿಡುವಂತೆ ಮಾಡಿ. ಇಲ್ಲದಿದ್ದಲ್ಲಿ ಅವಳನ್ನು ನೋಡಿ ಕೊಳ್ಳುವವರಾರು?" ಎಂದು ಪ್ರಾರ್ಥಿಸುವೆ. ನಾನು ಎಂದೂ ಅಂತಹ

ರೋಗವನ್ನು ಕಂಡುದಿಲ್ಲ. ಬಹುಶಃ ಅವಳು ಹಿಂದಿನ ಜನ್ಮದಲ್ಲಿ ಏನೇನೋ ಮಾಡಿದ ಕರ್ಮಕ್ಕೆ ಪ್ರಾಯಶ್ಚಿತ್ತವನ್ನನುಭವಿಸದೆಯೇ ಸತ್ತಿರಬೇಕು. ಒಬ್ಬ ಮನುಷ್ಯ ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳದೆ ಖಾಯಿಲೆಯಿಂದ ಸತ್ತರೆ ಮುಂದಿನ ಜನ್ಮದಲ್ಲಿ ಅದೇ ಖಾಯಿಲೆ ಬರುತ್ತದೆ. ಆದರೆ ಸಾಧುಗೆ ಇದು ಅನ್ವಯಿಸುವುದಿಲ್ಲ.

ಕೇದಾರನ ತಾಯಿ :– ಸನ್ಯಾಸಿ ದೇವರನಾಮ ಪುನಶ್ಚರಣೆ ಮಾಡುತ್ತಾ ಸಾಯುತ್ತಾನಾದ್ದರಿಂದ ಅವನು ದೇವರನ್ನು ಪಡೆಯುವನು.

ಶ್ರೀಮಾತೆ :– ಹೌದು, ಅದು ನಿಜ. ಅಂದು ಕೋಲಪಾರಾದಲ್ಲಿ ಒಬ್ಬ ಮನುಷ್ಯ ಸತ್ತುಹೋದ. ಅವನು ಪುನಃ ಹುಟ್ಟುವನೇನು? ಇಲ್ಲ. ಇದು ಅವನ ಕಡೆಯ ಜನ್ಮ.

ಕಾಶೀಪುರದಲ್ಲಿ ಖಾಯಿಲೆಯಾಗಿದ್ದಾಗ ಗುರುಮಹಾರಾಜರು ಒಮ್ಮೆ, "ನನಗೆ ಖಾಯಿಲೆಯಾಗಿದೆ. ಕಾಳೀದೇವಾಲಯದ ಮೇಲ್ವಿಚಾರಕರು ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳಲಿಲ್ಲವೆಂದು ಆಕ್ಷೇಪಿಸಬಹುದು" ಎಂದು ರಾಮಲಾಲನಿಗೆ, "ಈ ಹತ್ತುರೂಪಾಯಿಗಳನ್ನು ತೆಗೆದುಕೊಂಡು ದಕ್ಷಿಣೇಶ್ವರಕ್ಕೆ ಹೋಗು. ಕಾಳಿಮಾತೆಗೆ ಇದನ್ನರ್ಪಿಸಿ ಅದನ್ನು ಬ್ರಾಹ್ಮಣರಿಗೂ, ಇತರರಿಗೂ ಹಂಚು" ಎಂದರು. ಸಾಧುವಾದವನು ವಿಧಿಪೂರ್ವಕ ಕರ್ಮಗಳನ್ನು ಮಾಡಲೇಬೇಕೆಂಬ ನಿಯಮವಿಲ್ಲ. ಅದಕ್ಕೇ ರಾಮಕೃಷ್ಣರು ಇಷ್ಟದೇವತೆಗೆ ದುಡ್ಡನ್ನರ್ಪಿಸುವಂತೆಯೂ ಇತರರಿಗೆ ಹಂಚುವಂತೆಯೂ ಹೇಳಿದರು. ಹಿಂದಿನಕಾಲದಲ್ಲಿ ಯತಿಗಳು, ಋಷಿಗಳು, ಕಾಡಿನಲ್ಲಿ ವಾಸಿಸುತ್ತಿದ್ದರು. ಅವರು ಚಂದ್ರಾಯನ ಮುಂತಾದ ವಿಧಿಗಳನ್ನು ಮಾಡುತ್ತಿದ್ದರೆ! ಅವರು ಕೇವಲ ಹಣ್ಣು ಬೇರುಗಳನ್ನು ಇಷ್ಟದೇವತೆಗರ್ಪಿಸಿ ಯಾರಿಗೆ ಅಗತ್ಯವೋ ಅವರಿಗೆ ಹಂಚುತ್ತಿದ್ದರು. ಅಷ್ಟೇ ಅವರಿಗೆ ಸಾಕಾಗಿತ್ತು.

ರಾಧು ತಾಯಿ :– ನನ್ನ ಅತ್ತೆ ಖಾಯಿಲೆಯಿಂದ ಸತ್ತುಹೋದಳು. ಹಾಗಾದರೆ ಅವಳು ಪುನಃ ರೋಗಿಷ್ಠೆಯಾಗಿ ಹುಟ್ಟುವಳೆಂದು ನೀನು ಹೇಳುತ್ತಿರುವೆಯೇನು?

ಶ್ರೀಮಾತೆ :– ನಿನ್ನ ಅತ್ತೆ ಪುನಃ ಹುಟ್ಟಲ್ಲವೆಂದು ತಿಳಿದಿರುವೆಯೇನು? ಖಂಡಿತವಾಗಿ ಆಕೆ ಪುನಃ ಹುಟ್ಟಿದ್ದಾಳೆ, ರೋಗಿಷ್ಟೆಯಾಗಿಯೂ ಇದ್ದಾಳೆ. ಅನೇಕ ವೇಳೆ ಮನುಷ್ಯ ತನ್ನ ಕರ್ಮಫಲದಿಂದ

ಅದೇ ಸಂಸಾರದಲ್ಲೇ ಹುಟ್ಟಿ, ಸಾಯುವನು, ಪುನಃ ಹುಟ್ಟುವನು, ಸಾಯುವನು.

೮ ನೇ ಜೂನ್, ೧೯೧೨.

ಸುರೇಂದ್ರನಾಥ ಭೌಮಿಕ ಮತ್ತು ಡಾಕ್ಟರ್ ದುರ್ಗಾಪ್ರಸಾದನೂ ಶ್ರೀಮಾತೆಯವರ ಮನೆಯಲ್ಲಿ ಇದ್ದರು. ಮಧ್ಯಾಹ್ನ ಅವರು ಹೊರಡುವವರಿದ್ದರು. ಬೆಳಿಗ್ಗೆ, ಸ್ನಾನವಾದಮೇಲೆ ಅವರು ಶ್ರೀಮಾತೆಗೆ ನಮಸ್ಕರಿಸಿದರು.

ಶ್ರೀಮಾತೆ ತಮ್ಮ ಹಸ್ತವನ್ನು ಅವರ ತಲೆಯಮೇಲಿಟ್ಟು ಆಶೀರ್ವದಿಸಿ ಕುಳಿತುಕೊಳ್ಳಲು ಹೇಳಿದರು. ಒಂದೆರಡು ಮಾತಾದಮೇಲೆ ಸುರೇಂದ್ರನು ಶ್ರೀಮಾತೆಗೆ ಹೀಗೆಂದನು: "ತಾಯಿ, ಗುರುಮಹಾರಾಜರನ್ನು ಪೂಜಿಸುತ್ತಿರುವಾಗ ನನಗೆ ಒಂದು ಕಷ್ಟವಾಗುವುದು. ಒಬ್ಬ ಭಕ್ತ, ತನ್ನ ಗುರು ಮತ್ತು ಇಷ್ಟದೇವತೆ ಎರಡೂ ಒಂದೇ ಎಂಬ ಭಾವನೆ ಹೊಂದಿದ್ದನೆಂದಿಟ್ಟುಕೊಳ್ಳೋಣ. ಗುರುಮಹಾರಾಜರ ಆಕಾರದ ಮೂಲಕ ಅವನು ಇಷ್ಟದೈವದ ಪೂಜೆ ಮಾಡುವನು. ನಂತರ ಅವನು ತನ್ನ ಜಪದ ಫಲವನ್ನು ಗುರುವಿನ ವಿಗ್ರಹಕ್ಕೆ 'ಓ ಮಹಾಮಾತೆ, ನಿನ್ನ ಕೃಪೆಯಿಂದ' ಎಂದು ಅರ್ಪಿಸುವನು. ಇದು ನನಗೆ ಬಹಳ ಗೊಂದಲವಾಗುವುದು." ಶ್ರೀಮಾತೆ ನಗುತ್ತಾ ಹೇಳಿದರು: "ಚಿಂತೆಯಿಲ್ಲ. ಗುರುಮಹಾರಾಜರೇ ಮಹೇಶ್ವರ, ಮಹೇಶ್ವರಿಯೂ ಆಗಿದ್ದಾರೆ. ಅವರೇ ಎಲ್ಲಾ ದೇವದೇವತೆಯರ ಸ್ವರೂಪರಾಗಿದ್ದಾರೆ. ಎಲ್ಲಾ ಬಗೆಯ ಬೀಜಮಂತ್ರಗಳ ಜೀವಾಳವೂ ಅವರೆ ಆಗಿದ್ದಾರೆ. ಅವರ ಮೂಲಕ ಎಲ್ಲಾ ದೇವದೇವೀಯರನ್ನೂ ನಾವು ಆರಾಧಿಸಬಹುದು. ನೀನು ಅವರನ್ನು ಮಹೇಶ್ವರ ಅಥವಾ ಮಹೇಶ್ವರಿ ಎಂದು ಹೇಗೆ ಬೇಕಾದರೂ ಕರೆಯಬಹುದು."

ಸುರೇಂದ್ರ:– ಶ್ರೀಮಾತೆ, ನನಗೆ ಧ್ಯಾನದಲ್ಲಿ ಮನಸ್ಸನ್ನು ಕೇಂದ್ರೀಕರಿಸಲಾಗುವುದೇ ಇಲ್ಲ.

ಶ್ರೀಮಾತೆ:– ಚಿಂತೆ ಇಲ್ಲ. ನೀನು ಗುರುಮಹಾರಾಜರ ಚಿತ್ರವನ್ನು ನೋಡಿದರೆ ಸಾಕು. ಗುರುಮಹಾರಾಜರಿಗೆ ಕಾಶಿಪುರದಲ್ಲಿ ಖಾಯಿಲೆಯಾಗಿತ್ತು. ಚಿಕ್ಕ ಶಿಷ್ಯರು ಒಬ್ಬೊಬ್ಬರಾಗಿ ಸರದಿ ಪ್ರಕಾರ ನೋಡಿಕೊಳ್ಳುತ್ತಿದ್ದರು. ಗೋಪಾಲನೂ ಅಲ್ಲಿದ್ದ. ಒಂದು ದಿನ ಗುರು

ಮಹಾರಾಜರನ್ನು ಸೇವಿಸುವ ಬದಲು ಧ್ಯಾನಕ್ಕೆ ಹೋದ. ಬಹಳ ಹೊತ್ತು ಧ್ಯಾನ ಮಾಡಿದ. ಗಿರೀಶಬಾಬು ಇದನ್ನು ಕೇಳಿದಾಗ "ಅವನು ಯಾರನ್ನು ಕಣ್ಣುಮುಚ್ಚಿ ಧ್ಯಾನಿಸುತ್ತಿರುವನೋ ಅವರು ಖಾಯಿಲೆಯಿಂದ ಹಾಸಿಗೆ ಹಿಡಿದಿದ್ದಾರೆ. ಈ ಮನುಷ್ಯ ಅವರನ್ನು ಧ್ಯಾನಿಸುತ್ತಿದ್ದಾನೆ" ಎಂದು ಗೋಪಾಲನನ್ನು ಕರೆಕಳುಹಿದರು. ಗುರು ಮಹಾರಾಜರು ತಮ್ಮ ಪಾದವನ್ನು ಸವರುವಂತೆ ಕೇಳಿದರು. ಅವರು "ನನ್ನ ಪಾದಗಳು ನೋಯುವುದೆಂದು ನಿಮ್ಮನ್ನು ಸವರುವಂತೆ ಕೇಳಿದೆನೆಂದು ಭಾವಿಸಿದ್ದಿರಾ? ಇಲ್ಲ, ಇಲ್ಲ. ನಿಮ್ಮ ಹಿಂದಿನ ಜನ್ಮದಲ್ಲಿ ನೀವು ಅನೇಕ ಸತ್ಕೃತ್ಯಗಳನ್ನು ಮಾಡಿದ್ದಿರಿ. ಆದ್ದರಿಂದಲೇ ನಾನು ನಿಮ್ಮ ಸೇವೆಯನ್ನು ಸ್ವೀಕರಿಸುತ್ತಿರುವೆ" ಎಂದರು. ಶ್ರೀರಾಮಕೃಷ್ಣರ ಭಾವ ಚಿತ್ರವನ್ನು ನೋಡು. ಅದೇ ಸಾಕು.

ಸುರೇಂದ್ರ:– ಮಾತೆ, ಜಪಮಾಲೆಯನ್ನು ಸರಿಯಾಗಿ ದಿನಕ್ಕೆ ಮೂರು ಬಾರಿ ಕೂಡ ಎಣಿಸಲಾಗುತ್ತಿಲ್ಲ.

ಶ್ರೀಮಾತೆ:– ಪರವಾ ಇಲ್ಲ. ಗುರುದೇವರನ್ನು ಸ್ಮರಿಸು. ನಿನಗೆ ಸಾಧ್ಯವಾದಾಗ ಜಪಮಾಡು. ಕಡೆಯಪಕ್ಷ ಮಾನಸಿಕವಾಗಿ ನೀನು ನಮಿಸಬಲ್ಲೆ ಅಲ್ಲವೆ?

ದುರ್ಗಾಬಾಬು:– ತಾಯಿ ನಾವು ಆಹಾರ ತೆಗೆದುಕೊಳ್ಳುವಾಗ ಅದರ ವಿಷಯವಾಗಿ ಯಾವ ನಿಯಮಗಳನ್ನನುಸರಿಸಬೇಕೆಂದು ಅರ್ಥ ವಾಗುತ್ತಿಲ್ಲ.

ಶ್ರೀಮಾತೆ:- ಗುರುಮಹಾರಾಜರು ಆಹಾರದ ವಿಷಯದಲ್ಲಿ ಒಂದನ್ನು ಜ್ಞಾಪಕದಲ್ಲಿಟ್ಟುಕೊಂಡಿರುತ್ತಿದ್ದರು. ಶ್ರಾದ್ಧಕಾಲದ ಆಹಾರವನ್ನು ಶಿಷ್ಯರಿಗೆ ನಿಷೇಧಿಸಿದ್ದರು. ಅದು ನಮ್ಮ ಭಕ್ತಿಗೆ ಹಾನಿ ತರುವುದೆಂದು ಹೇಳುತ್ತಿದ್ದರು. ಇದನ್ನು ಹೊರತು ಮತ್ತಾವ ಆಹಾರ ವನ್ನು ಬೇಕಾದರೂ ತಿನ್ನಬಹುದು. ಆದರೆ ತಿನ್ನುವಾಗ ಗುರುಮಹಾ ರಾಜರನ್ನು ನೆನಸು.

ದುರ್ಗಾಬಾಬು:– ತಾಯಿ, ನಾನು ಆಸ್ಪತ್ರೆಯಲ್ಲಿ ಕೆಲಸಮಾಡು ತ್ತಿರುವಾಗ ನನಗೆ ಅನೇಕವೇಳೆ ಬಾಯಾರಿಕೆಯಾಗುವುದು. ಮನುಷ್ಯರು ಅಥವಾ ಸ್ಥಳ ಯಾವುದನ್ನೂ ಗಣನೆಗೆ ತರದೆ ನೀರುಕುಡಿಯಬೇಕಾಗು ವುದು. ನಾನು ಹಾಗೇ ಮಾಡುತ್ತಿರುವೆ. ಇದಕ್ಕೆ ನೀವೇನು ಹೇಳುವಿರಿ?

ಶ್ರೀಮಾತೆ:– ನೀನು ಮತ್ತೇನು ತಾನೇ ಮಾಡಲಾದೀತು? ನಿನ್ನ ಕರ್ತವ್ಯ ಪಾಲನೆಗೋಸುಗ ನೀನು ಅದನ್ನು ಮಾಡುವೆ. ನೀರನ್ನು ಕುಡಿಯುವಾಗ ಗುರುದೇವನನ್ನು ನೆನೆ. ನೀನು ಕರ್ತವ್ಯದಲ್ಲಿರುವಾಗ ಇದನ್ನು ಮಾಡುವುದರಿಂದ ನಿನಗೆ ಹಾನಿಯೇನೂ ಇಲ್ಲ. ಅನೇಕ ಬಗೆಯ ಕೆಲಸ ಕಾರ್ಯಗಳಲ್ಲಿ ನಿರತರಾಗಿರುವವರಿಗೆ ಆಹಾರದ ವಿಷಯವಾಗಿ ಎಲ್ಲಾ ಶಾಸ್ತ್ರೋಕ್ತ ವಿಧಿಗಳನ್ನೂ ಅನುಸರಿಸಲಾಗುವುದೆ?

ಸುರೇಂದ್ರ:– ತಾಯಿ, ನಾವು ಗೃಹಸ್ಥರು ಅನೇಕ ಬಂಧು ಗಳೊಡನೆ ಸಂಸಾರದಲ್ಲಿ ವಾಸಿಸುತ್ತೇವೆ. ಕೆಲವುವೇಳೆ ಇನ್ನೂ ಪೂರ್ತಿ ಅಡಿಗೆ ಆಗಿರುವುದೇ ಇಲ್ಲ. ಕೆಲವರು ಅದನ್ನೇ ಊಟಮಾಡಿರುತ್ತಾರೆ. ನಂತರ ಅದನ್ನು ನನಗೆ ಬಡಿಸುವರು. ನಾನು ಆ ಆಹಾರವನ್ನು ದೇವರಿಗರ್ಪಿಸಲು ಹಿಂಜರಿಯುವೆ.

ಶ್ರೀಮಾತೆ:– ಗೃಹಸ್ಥರಿಗೆ ಇದು ಅನಿವಾರ್ಯ. ನಮಗೂ ಕೂಡ ಇಂತಹ ಸಂದರ್ಭಗಳು ಒದಗುತ್ತವೆ. ಉದಾಹರಣೆಗೆ, ಮನೆಯಲ್ಲಿ ಒಬ್ಬ ರೋಗಿ ಇರಬಹುದು. ಅವನಿಗೆ ಆಗಲೆ ಸ್ವಲ್ಪ ಆಹಾರ ತೆಗೆದಿಟ್ಟಿರ ಬಹುದು. ಆದರೆ ಅಡಿಗೆಯನ್ನು ತಟ್ಟೆಗೆ ಹಾಕಿದ ನಂತರ ದೇವರನ್ನು ಜ್ಞಾಪಿಸಿಕೊ. ಅವನೇ ಆ ಆಹಾರವನ್ನು ಕೊಟ್ಟಿರುವನೆಂದು ತಿಳಿದು ಸ್ವೀಕರಿಸು. ನಂತರ ಅದರಿಂದ ನಿನ್ನ ಭಕ್ತಿಗೆ ಹಾನಿಯಿಲ್ಲ.

ಸುರೇಂದ್ರ:– ತಾಯಿ, ನನ್ನ ಮಾನಸಿಕಸ್ಥಿತಿಯನ್ನು ನಿಮಗೆ ಹೇಗೆ ವಿವರಿಸಲಿ? ನೀವು ಆಂತರಿಕ ಮಾರ್ಗದರ್ಶಿಗಳು. ನಿಮಗೆಲ್ಲಾ ಅರ್ಥ ವಾಗುವುದು. ಕೆಲವು ವರ್ಷಗಳಿಂದ ನಾನು ಇಷ್ಟೊಂದು ಬಾಧೆಗಳಿಗೊಳ ಗಾಗಿದ್ದೇನೆ. ನಿಮ್ಮ ಆಶೀರ್ವಾದವಿಲ್ಲದಿದ್ದಲ್ಲಿ ಇಷ್ಟು ಹೊತ್ತಿಗೆ ನಾನು ಬದುಕಿರುತ್ತಿರಲಿಲ್ಲ.

ಶ್ರೀಮಾತೆ:– ಹೌದು ಮಗು. ಈ ಜಗತ್ತಿನಲ್ಲಿ ಜೀವನ ಕಷ್ಟ ಮಯವೆಂದು ನೀನು ನನಗೆ ಹೇಳಬೇಕಾದ್ದಿಲ್ಲ. ಅದಕ್ಕೆ ಮಿತಿಯೇ ಇಲ್ಲ. ನಿನ್ನ ವಿಚಾರದಲ್ಲಿ ಇದು ಅನಿವಾರ್ಯ. ನನ್ನನ್ನು ನೋಡು ಮಗು, ಗುರು ಮಹಾರಾಜರ ಇಷ್ಟದಂತೆ ನಾನು ಎಂತಹ ಜೀವನ ನಡೆಸುತ್ತಿರುವೆ! ಈ ಹುಡುಗಿಯ (ರಾಧು) ಸಲುವಾಗಿ ನಾನೆಷ್ಟೊಂದು ಕಷ್ಟವನ್ನನುಭವಿಸು ತ್ತಿರುವೆ.

ಸುರೇಂದ್ರ:– ಹೌದು ತಾಯಿ, ನಿಮ್ಮ ಸ್ಥಿತಿಯೇ ನಮಗೆ ಶಾಂತಿ

ಸಮಾಧಾನ ನೀಡುವುದು. ನಿಮಗೆ ಪ್ರಪಂಚದ ಕಷ್ಟಗಳ ಅರಿವುಂಟು. ಆದ್ದರಿಂದ ನಿಮ್ಮ ಕರುಣೆಯನ್ನು ಬಯಸುವೆವು.

ಶ್ರೀ ಮಾತೆ:– ಅಂಜಬೇಡ ಮಗು. ಗುರುಮಹಾರಾಜರಿದ್ದಾರೆ. ಅವರೇ ನಿಮ್ಮನ್ನು ಇಹ ಮತ್ತು ಪರ ಲೋಕಗಳಲ್ಲೂ ಕಾಪಾಡುವರು.

ಸುರೇಂದ್ರ:– ತಾಯಿ, ನಾವು ಬಹುದೂರದಲ್ಲಿರುವೆವು. ಕನಸು ನಿಜವೇ?

ಶ್ರೀಮಾತೆ:– ಹೌದು ನಿಜ. ಗುರುಮಹಾರಾಜರಿಗೆ ಸಂಬಂಧಪಟ್ಟ ಕನಸು ನಿಜ. ಆದರೆ ಅವರು ಶಿಷ್ಯರಿಗೆ ತಮ್ಮ ವಿಚಾರವಾಗಿ ಆದ ಕನಸನ್ನು ತಮಗೆ ಕೂಡ ವಿವರಿಸುವುದನ್ನು ನಿಷೇಧಿಸುತ್ತಿದ್ದರು.

ಸುರೇಂದ್ರ:– ತಾಯಿ, ನಮಗೆ ಗುರುಮಹಾರಾಜರು ಹೇಗಿದ್ದರೋ ಗೊತ್ತಿಲ್ಲ. ನಾವು ಅವರನ್ನು ನೋಡಿಲ್ಲ. ಇಲ್ಲಿಯವರೆಗೆ ನೀವೇ ನಮಗೆ ಗುರುಗಳು, ಮತ್ತು ಸರ್ವಸ್ವ.

ಶ್ರೀಮಾತೆ:– ಹೆದರಬೇಡ ಮಗು, ಗುರುಮಹಾರಾಜರು ನಿನ್ನನ್ನು ಕಾಪಾಡುವರು. ನಿನ್ನನ್ನು ಇಹ ಮತ್ತು ಪರದಲ್ಲೂ ನೋಡಿಕೊಳ್ಳುವರು. ಯಾವಾಗಲೂ ನಿನ್ನನ್ನು ರಕ್ಷಿಸುವರು.

ಊಟವಾದಮೇಲೆ ಇಬ್ಬರು ಭಕ್ತರೂ ಹೊರಟರು. ವರದಾಮಾವನು ಅವರ ಸಂಗಡ ಹೋದನು. ಅವನು ಕಲಿಕತ್ತೆಗೆ ಹೋಗುತ್ತಿದ್ದನು. ಶ್ರೀಮಾತೆ ಅವರೊಡನೆ ಸ್ವಲ್ಪದೂರದವರೆಗೆ ನಡೆದು ಬಂದು ಅವರು ಕಣ್ಮರೆಯಾಗುವವರೆಗೂ ನೋಡುತ್ತಿದ್ದರು.

ಸುರೇಂದ್ರ ಬಲ್ಲರತನ್ ಗಂಜ್‌ನ ಸ್ಕೂಲಿನಲ್ಲಿ ಮುಖ್ಯೋಪಾಧ್ಯಾಯನಾಗಿದ್ದ. ಅಲ್ಲಿಯ ಅನೇಕ ಕಟುಕರು ಹಸುಗಳನ್ನು ಜೀವಸಹಿತ ಚರ್ಮಸುಲಿಯುತ್ತಿದ್ದರು. ಒಂದು ದಿನ ಅವರು ಪಾಠಶಾಲೆಯ ಮುಂದೆಯೇ ಹಾಗೆ ಮಾಡಿದರು. ಸುರೇಂದ್ರ ಮತ್ತು ಇತರ ಉಪಾಧ್ಯಾಯರು, ಹುಡುಗರು, ಹಿಂದೂಗಳು, ಮುಸಲ್ಮಾನರು ಎಲ್ಲರೂ ಕಲೆತು ಸೇರಿ ಇದನ್ನು ನಿಷೇಧಿಸಿದರು. ಆ ಕಟುಕರನ್ನು ಹೊಡೆದೋಡಿಸಲಾಯಿತು. ಇದರಿಂದ ಸ್ವಲ್ಪ ತೊಂದರೆಯಾಯಿತು. ಸುರೇಂದ್ರನಿಗೆ ಕಟುಕರಿಂದ ಅಪಾಯವಾಗಬಹುದೆಂದು ತೋರಿತು. ಇದೇ ಸಮಯದಲ್ಲಿ ಆ ಪಾಠಶಾಲೆಯ ಅನೇಕ ಯುವಕರು ಜಯರಾಮವಟಿಗೆ ದೀಕ್ಷೆ ಪಡೆಯಲು ಹೋದರು.

ಶ್ರೀಮಾತೆ:– ನೀನು ಮತ್ತೇನು ತಾನೇ ಮಾಡಲಾದೀತು? ನಿನ್ನ ಕರ್ತವ್ಯ ಪಾಲನೆಗೋಸುಗ ನೀನು ಅದನ್ನು ಮಾಡುವೆ. ನೀರನ್ನು ಕುಡಿಯುವಾಗ ಗುರುದೇವನನ್ನು ನೆನೆ. ನೀನು ಕರ್ತವ್ಯದಲ್ಲಿರುವಾಗ ಇದನ್ನು ಮಾಡುವುದರಿಂದ ನಿನಗೆ ಹಾನಿಯೇನೂ ಇಲ್ಲ. ಅನೇಕ ಬಗೆಯ ಕೆಲಸ ಕಾರ್ಯಗಳಲ್ಲಿ ನಿರತರಾಗಿರುವವರಿಗೆ ಆಹಾರದ ವಿಷಯವಾಗಿ ಎಲ್ಲಾ ಶಾಸ್ತ್ರೋಕ್ತ ವಿಧಿಗಳನ್ನೂ ಅನುಸರಿಸಲಾಗುವುದೆ?

ಸುರೇಂದ್ರ:– ತಾಯಿ, ನಾವು ಗೃಹಸ್ಥರು ಅನೇಕ ಬಂಧು ಗಳೊಡನೆ ಸಂಸಾರದಲ್ಲಿ ವಾಸಿಸುತ್ತೇವೆ. ಕೆಲವುವೇಳೆ ಇನ್ನೂ ಪೂರ್ತಿ ಅಡಿಗೆ ಆಗಿರುವುದೇ ಇಲ್ಲ. ಕೆಲವರು ಅದನ್ನೇ ಊಟಮಾಡಿರುತ್ತಾರೆ. ನಂತರ ಅದನ್ನು ನನಗೆ ಬಡಿಸುವರು. ನಾನು ಆ ಆಹಾರವನ್ನು ದೇವರಿಗರ್ಪಿಸಲು ಹಿಂಜರಿಯುವೆ.

ಶ್ರೀಮಾತೆ:– ಗೃಹಸ್ಥರಿಗೆ ಇದು ಅನಿವಾರ್ಯ. ನಮಗೂ ಕೂಡ ಇಂತಹ ಸಂದರ್ಭಗಳು ಒದಗುತ್ತವೆ. ಉದಾಹರಣೆಗೆ, ಮನೆಯಲ್ಲಿ ಒಬ್ಬ ರೋಗಿ ಇರಬಹುದು. ಅವನಿಗೆ ಆಗಲೆ ಸ್ವಲ್ಪ ಆಹಾರ ತೆಗೆದಿಟ್ಟಿರ ಬಹುದು. ಆದರೆ ಅಡಿಗೆಯನ್ನು ತಟ್ಟೆಗೆ ಹಾಕಿದ ನಂತರ ದೇವರನ್ನು ಜ್ಞಾಪಿಸಿಕೊ. ಅವನೇ ಆ ಆಹಾರವನ್ನು ಕೊಟ್ಟಿರುವನೆಂದು ತಿಳಿದು ಸ್ವೀಕರಿಸು. ನಂತರ ಅದರಿಂದ ನಿನ್ನ ಭಕ್ತಿಗೆ ಹಾನಿಯಿಲ್ಲ.

ಸುರೇಂದ್ರ:– ತಾಯಿ, ನನ್ನ ಮಾನಸಿಕಸ್ಥಿತಿಯನ್ನು ನಿಮಗೆ ಹೇಗೆ ವಿವರಿಸಲಿ? ನೀವು ಅಂತರಿಕ ಮಾರ್ಗದರ್ಶಿಗಳು. ನಿಮಗೆಲ್ಲಾ ಅರ್ಥ ವಾಗುವುದು. ಕೆಲವು ವರ್ಷಗಳಿಂದ ನಾನು ಇಷ್ಟೊಂದು ಭಾದೆಗಳಿಗೊಳ ಗಾಗಿದ್ದೇನೆ. ನಿಮ್ಮ ಆಶೀರ್ವಾದವಿಲ್ಲದಿದ್ದಲ್ಲಿ ಇಷ್ಟು ಹೊತ್ತಿಗೆ ನಾನು ಬದುಕಿರುತ್ತಿರಲಿಲ್ಲ.

ಶ್ರೀಮಾತೆ:– ಹೌದು ಮಗು. ಈ ಜಗತ್ತಿನಲ್ಲಿ ಜೀವನ ಕಷ್ಟ ಮಯವೆಂದು ನೀನು ನನಗೆ ಹೇಳಬೇಕಾದ್ದಿಲ್ಲ. ಅದಕ್ಕೆ ಮಿತಿಯೇ ಇಲ್ಲ. ನಿನ್ನ ವಿಚಾರದಲ್ಲಿ ಇದು ಅನಿವಾರ್ಯ. ನನ್ನನ್ನು ನೋಡು ಮಗು, ಗುರು ಮಹಾರಾಜರ ಇಷ್ಟದಂತೆ ನಾನು ಎಂತಹ ಜೀವನ ನಡೆಸುತ್ತಿರುವೆ! ಈ ಹುಡುಗಿಯ (ರಾಧು) ಸಲುವಾಗಿ ನಾನೆಷ್ಟೊಂದು ಕಷ್ಟವನ್ನನುಭವಿಸು ತ್ತಿರುವೆ.

ಸುರೇಂದ್ರ:– ಹೌದು ತಾಯಿ, ನಿಮ್ಮ ಸ್ಥಿತಿಯೇ ನಮಗೆ ಶಾಂತಿ

ಸಮಾಧಾನ ನೀಡುವುದು. ನಿಮಗೆ ಪ್ರಪಂಚದ ಕಷ್ಟಗಳ ಅರಿವುಂಟು. ಆದ್ದರಿಂದ ನಿಮ್ಮ ಕರುಣೆಯನ್ನು ಬಯಸುವೆವು.

ಶ್ರೀ ಮಾತೆ :- ಅಂಜಬೇಡ ಮಗು. ಗುರುಮಹಾರಾಜರಿದ್ದಾರೆ. ಅವರೇ ನಿಮ್ಮನ್ನು ಇಹ ಮತ್ತು ಪರ ಲೋಕಗಳಲ್ಲೂ ಕಾಪಾಡುವರು.

ಸುರೇಂದ್ರ :- ತಾಯಿ, ನಾವು ಬಹುದೂರದಲ್ಲಿರುವೆವು. ಕನಸು ನಿಜವೇ?

ಶ್ರೀಮಾತೆ :- ಹೌದು ನಿಜ. ಗುರುಮಹಾರಾಜರಿಗೆ ಸಂಬಂಧಪಟ್ಟ ಕನಸು ನಿಜ. ಆದರೆ ಅವರು ಶಿಷ್ಯರಿಗೆ ತಮ್ಮ ವಿಚಾರವಾಗಿ ಆದ ಕನಸನ್ನು ತಮಗೆ ಕೂಡ ವಿವರಿಸುವುದನ್ನು ನಿಷೇಧಿಸುತ್ತಿದ್ದರು.

ಸುರೇಂದ್ರ :- ತಾಯಿ, ನಮಗೆ ಗುರುಮಹಾರಾಜರು ಹೇಗಿದ್ದರೋ ಗೊತ್ತಿಲ್ಲ. ನಾವು ಅವರನ್ನು ನೋಡಿಲ್ಲ. ಇಲ್ಲಿಯವರೆಗೆ ನೀವೇ ನಮಗೆ ಗುರುಗಳು, ಮತ್ತು ಸರ್ವಸ್ವ.

ಶ್ರೀಮಾತೆ :- ಹೆದರಬೇಡ ಮಗು, ಗುರುಮಹಾರಾಜರು ನಿನ್ನನ್ನು ಕಾಪಾಡುವರು. ನಿನ್ನನ್ನು ಇಹ ಮತ್ತು ಪರದಲ್ಲೂ ನೋಡಿಕೊಳ್ಳುವರು. ಯಾವಾಗಲೂ ನಿನ್ನನ್ನು ರಕ್ಷಿಸುವರು.

ಊಟವಾದಮೇಲೆ ಇಬ್ಬರು ಭಕ್ತರೂ ಹೊರಟರು. ವರದಾಮಾವನು ಅವರ ಸಂಗಡ ಹೋದನು. ಅವನು ಕಲಿಕತ್ತೆಗೆ ಹೋಗುತ್ತಿದ್ದನು. ಶ್ರೀಮಾತೆ ಅವರೊಡನೆ ಸ್ವಲ್ಪದೂರದವರೆಗೆ ನಡೆದು ಬಂದು ಅವರು ಕಣ್ಮರೆಯಾಗುವವರೆಗೂ ನೋಡುತ್ತಿದ್ದರು.

ಸುರೇಂದ್ರ ಬಲ್ಲರತನ್ ಗಂಜ್‌ನ ಸ್ಕೂಲಿನಲ್ಲಿ ಮುಖ್ಯೋಪಾಧ್ಯಾಯನಾಗಿದ್ದ. ಅಲ್ಲಿಯ ಅನೇಕ ಕಟುಕರು ಹಸುಗಳನ್ನು ಜೀವಸಹಿತ ಚರ್ಮಸುಲಿಯುತ್ತಿದ್ದರು. ಒಂದು ದಿನ ಅವರು ಪಾಠಶಾಲೆಯ ಮುಂದೆಯೇ ಹಾಗೆ ಮಾಡಿದರು. ಸುರೇಂದ್ರ ಮತ್ತು ಇತರ ಉಪಾಧ್ಯಾಯರು, ಹುಡುಗರು, ಹಿಂದೂಗಳು, ಮುಸಲ್ಮಾನರು ಎಲ್ಲರೂ ಕಲೆತು ಸೇರಿ ಇದನ್ನು ನಿಷೇಧಿಸಿದರು. ಆ ಕಟುಕರನ್ನು ಹೊಡೆದೋಡಿಸಲಾಯಿತು. ಇದರಿಂದ ಸ್ವಲ್ಪ ತೊಂದರೆಯಾಯಿತು. ಸುರೇಂದ್ರನಿಗೆ ಕಟುಕರಿಂದ ಅಪಾಯವಾಗಬಹುದೆಂದು ತೋರಿತು. ಇದೇ ಸಮಯದಲ್ಲಿ ಆ ಪಾಠಶಾಲೆಯ ಅನೇಕ ಯುವಕರು ಜಯರಾಮವಟಿಗೆ ದೀಕ್ಷೆ ಪಡೆಯಲು ಹೋದರು.

ಅವರು ಶ್ರೀಮಾತೆಯವರಿಗೆ ಇದನ್ನೆಲ್ಲಾ ಹೇಳಿದರು. ಅವರು ತುಂಬಾ ಕಳವಳಗೊಂಡು, "ನೀವೇ ಇಂತಹ ಕೃತ್ಯವನ್ನು ನಿಷೇಧಿಸದಿದ್ದಲ್ಲಿ ಮತ್ತಾರು ಧಿಕ್ಕರಿಸುವರು?" ಎಂದರು. ಆಕೆಯ ಹೇಳಿಕೆಯಂತೆ. ಸುರೇಂದ್ರನಿಗೆ ಅಭಯ ಮತ್ತು ಪ್ರೋತ್ಸಾಹ ಕೊಡಲು ಪತ್ರ ಬರೆಯಲಾಯಿತು. ಅವನು ಮತ್ತೊಮ್ಮೆ ಆ ಕೃತ್ಯನಡೆಯದಂತೆ ನೋಡಿಕೊಳ್ಳಬೇಕೆಂದೂ ಹೇಳಲಾಯಿತು. ಮುಂದೆ ಶ್ರೀಮಾತೆ ಸುರೇಂದ್ರನಿಗೆ ಪತ್ರದಲ್ಲಿ, "ನಿಜವಾಗಿಯೂ ದೇವರಿರುವುದು ನಿಶ್ಚಯವಾದರೆ ಇಂತಹ ಕೃತ್ಯಗಳನ್ನು ಅವನು ನಿಲ್ಲಿಸುವನು" ಎಂದು ಬರೆದರು. ಸ್ವಲ್ಪಕಾಲದ ತರವಾಯ ಈ ವಿಷಯವಾಗಿ ಕೊರ್ಟಿಗೆ ಒಂದು ಅರ್ಜಿ ಬರೆದು ಅದರಿಂದ ಈ ಹೀನ ಹತ್ಯಾಕಾರ್ಯವನ್ನು ಸಂಪೂರ್ಣವಾಗಿ ನಿಲ್ಲಿಸಿದರು.

೧೪ನೇ ಜುಲೈ ೧೯೧೩.

ಶಿಷ್ಯ ಮತ್ತು ಮುಕುಂದ ಇಬ್ಬರೂ ಶ್ರೀಮಾತೆಯವರ ಮನೆಯ ವರಾಂಡದಲ್ಲಿ ಮಧ್ಯಾಹ್ನದ ಊಟಕ್ಕೆ ಕುಳಿತಿದ್ದರು. ಪಕ್ಕದ ಮನೆಯ ವರಾಂಡದಲ್ಲಿ ಶ್ರೀಮಾತೆ ಕುಳಿತಿದ್ದರು. ನಳಿನಿ ಬಿಳಿ ಬಟ್ಟೆಯುಟ್ಟುಕೊಂಡು ಬಂದಳು. ಆಗತಾನೇ ಕಾಗೆಯೊಂದು ಆಕೆಯಮೇಲೆ ಹೇಸಿಗೆ ಮಾಡಿತ್ತೆಂದು ಅವಳು ಸ್ನಾನಮಾಡಲು ಹೋಗಿದ್ದಳು.

ಶ್ರೀಮಾತೆ:— ನನಗೀಗ ವಯಸ್ಸಾಗಿದೆ. ಆದರೂ ನಾನೆಂದೂ ಕಾಗೆ ಹಾಗೆ ಹೇಸಿಗೆ ಮಾಡಿದ್ದನ್ನು ಕೇಳಿಲ್ಲ. ನಿನ್ನ ಮನಸ್ಸು ಅಶುದ್ಧವಾಗಿದೆ. ಬಹು ಪಾಪಮಾಡಿದರೇ ಮನಸ್ಸು ಅಶುದ್ಧವಾಗುವುದು. ಕೃಷ್ಣಬೋಸನ ಸಹೋದರಿಗೆ ಹೀಗೆ ಆಗುತ್ತಿತ್ತು. ಗಂಗಾನದಿಯಲ್ಲಿ ಸ್ನಾನಮಾಡುವಾಗ, ತನ್ನ ತಲೆ ಮುಳುಗಿತೇ? ಎಂದು ಆಕೆ ಕೇಳುತ್ತಿದ್ದಳು. ಇದು ಒಂದು ಪಾಪ. ಇದರ ಪರಿಣಾಮವಾಗಿ ಮನಸ್ಸು ಎಂದೂ ಪರಿಶುದ್ಧವಾಗುವುದಿಲ್ಲ. ಅಪವಿತ್ರವಾದ ಮನಸ್ಸು ಪವಿತ್ರವಾಗಲು ಬಹು ಕಷ್ಟ. ನೀನು ನಿನ್ನ ಪಾಪವನ್ನು ಒತ್ತಿಹೇಳಿದಷ್ಟೂ ನೀನು ಹೆಚ್ಚು ಕಲುಷಿತವಾಗುವೆ. ಪ್ರತಿಯೊಂದರ ವಿಷಯದಲ್ಲೂ ಇದು ನಿಜ.

ಶಿಷ್ಯ:—ಮಹಾಪುರುಷಮಹಾರಾಜರು (ಸ್ವಾಮಿ ಶಿವಾನಂದ) ನಾಯಿಗಳನ್ನು ಸ್ಪರ್ಶಿಸಿ ನಂತರ ಗುರುಮಹಾರಾಜರ ಪೂಜೆಗೆ ಪೂಜಾಮಂದಿರಕ್ಕೆ ಹೋಗುತ್ತಿದ್ದುದನ್ನು ನಾನು ನೋಡಿರುವೆ. ಬಹುಶಃ ಯಾರೋ

ಅವರ ಕೈಗೆ ಕೊಂಚ ನೀರನ್ನು ಹಾಕುತ್ತಿರಬಹುದು. ಅದನ್ನು ತಮ್ಮ ಮುಖದಮೇಲೆ ಚುಮುಕಿಸುತ್ತಿದ್ದರು. ಆ ಕಾಲದಲ್ಲಿ ಗಂಗಾನದಿಯ ನೀರನ್ನೇ ಎಲ್ಲಾ ಕೆಲಸಕ್ಕೂ ಉಪಯೋಗಿಸುತ್ತಿದ್ದರು.

ಶ್ರೀಮಾತೆ:– ಅವರ ವಿಷಯದಲ್ಲಿ ಇವೆಲ್ಲಾ ಬೇರೆ. ಅವರ ಮನಸ್ಸು ಎಷ್ಟು ಪವಿತ್ರವಾಗಿದೆ. ಅದು ಸಾಧುವಿನ ಮನಸ್ಸು. ಗಂಗಾತೀರದಲ್ಲಿ ವಾಸಿಸುವವರೆಲ್ಲಾ ದೇವತೆಗಳು. ಗಂಗಾತೀರದಲ್ಲಿ ದೇವತೆಗಳಲ್ಲದೆ ಮತ್ತಾರಾದರೂ ವಾಸಿಸಬಲ್ಲರೆ? ಗಂಗೆಯಲ್ಲಿ ಪ್ರತಿದಿನವೂ ಸ್ನಾನಮಾಡುವುದರಿಂದ ಪಾಪ ಪರಿಹಾರವಾಗುವುದು.

ನಳಿನಿ:– ಒಂದು ದಿನ ಗುಲಾಪ್‌ಮಾ ಉದ್ಬೋಧನ ಆಫೀಸಿನ ಬಚ್ಚಲುಮನೆ ತೊಳೆದು ನಂತರ ಕೇವಲ ಬಟ್ಟೆ ಬದಲಾಯಿಸಿ ದೇವರ ನೈವೇದ್ಯಕ್ಕೆ ಹಣ್ಣುಗಳನ್ನು ಅಣಿಮಾಡಿದಳು. ನಾನು ಅವಳಿಗೆ, "ಇದೇನು ನೀವು ಮಾಡುವುದು ಅಕ್ಕ! ಹೋಗಿ ಗಂಗೆಯಲ್ಲಿ ಸ್ನಾನ ಮಾಡಿ" ಎಂದೆ. ಗುಲಾಪ್ ಮಾ "ನಿನಗಿಷ್ಟವಿದ್ದಲ್ಲಿ ನೀನು ಹೋಗಿ ಮಾಡು" ಎಂದರು.

ಶ್ರೀಮಾತೆ:– ಗುಲಾಪ್‌ಮಾ ಮನಸ್ಸು ಎಷ್ಟು ಪರಿಶುದ್ಧವಾಗಿದೆ! ಎಷ್ಟು ಸಾತ್ತ್ವಿಕ ಜೀವಿ ಅವಳು! ಅದಕ್ಕೇ ಅವಳು ಈ ಪವಿತ್ರ, ಅಪವಿತ್ರತೆಗೆ ಅಷ್ಟು ಗಮನ ಕೊಡುವುದಿಲ್ಲ. ಬಾಹ್ಯ ಶುದ್ಧಿಗೆ ಅವಳು ಮನಸ್ಸುಕೊಡುವುದಿಲ್ಲ. ಇದು ಅವಳ ಕಡೆಯ ಜನ್ಮ. ಅಂತಹ ಮನಸ್ಸನ್ನು ಪಡೆಯಬೇಕಾದರೆ ಬೇರೆ ಬಗೆಯ ದೇಹ ಅವಶ್ಯಕ. ಗಂಗಾನದಿಯ ಎರಡೂ ತೀರಗಳಿಂದಲೂ ಹತ್ತು ಮೈಲಿ ದೂರಕ್ಕೆ ಗಾಳಿ ಬೀಸುವುದು. ಇಂತಹ ಗಾಳಿ ನಾರಾಯಣನಿಂದ ವ್ಯಾಪಿತವಾಗಿದೆ. ಮನಸ್ಸು ತಪಸ್ಸಿನ ಆಧಿಕ್ಯದಿಂದ ಪವಿತ್ರವಾಗುವುದು. "ಪವಿತ್ರಮಯನಾದ ದೇವರನ್ನು ತಪಸ್ಸನ್ನಾಚರಿಸದೆ ಹೊಂದಲಾಗುವುದಿಲ್ಲ."

ದೇವರ ಸಾಕ್ಷಾತ್ಕಾರದಿಂದ ಮತ್ತೇನನ್ನು ಪಡೆಯಲು ಸಾಧ್ಯ? ಅವನಿಗೆ ಎರಡುಕೊಂಬು ಹುಟ್ಟುವುದೇನು? ಇಲ್ಲ. ಮನಸ್ಸು ಪರಿಶುದ್ಧವಾಗುವುದು. ಪವಿತ್ರಮನಸ್ಸಿನಿಂದ ಜ್ಞಾನಲಾಭವಾಗುವುದು. ಆಧ್ಯಾತ್ಮಿಕತೆ ಜಾಗ್ರತೆಯಾಗುವುದು.

ಶಿಷ್ಯ?–ಭಗವಂತನಲ್ಲಿ ಶರಣುಹೊಂದಿದ ಭಕ್ತರಿರುವರು. ಅವರು ತಪಸ್ಸುಮಾಡುವುದಿಲ್ಲ. ಅಂತಹ ಸ್ಥಿತಿಪಡೆಯಲು ಅವರಿಗೆ ಸಾಧ್ಯವೆ?

ಶ್ರೀಮಾತೆ?— ಅವರು ಭಗವಂತನಲ್ಲಿ ಮರೆಹೊಕ್ಕಿರುವುದು, ಆತನಲ್ಲೇ ಅಚಲ ನಂಬಿಕೆಯನ್ನಿಡುವುದು ಇದೇ ಅವರಿಗೆ ತಪಸ್ಸು. ಅಯ್ಯೋ, ನರೇನ್, "ನನಗೆ ಲಕ್ಷಾಂತರ ಜನ್ಮಗಳು ಬರಲಿ, ನನಗೇನು ಭಯ?" ಎಂದ. ಅದು ನಿಜ. ಜ್ಞಾನಿ ಪುನರ್ಜನ್ಮಕ್ಕೆ ಎಂದಾದರೂ ಹೆದರುವನೆ? ಅವನು ಪಾಪವನ್ನು ಮಾಡುವುದಿಲ್ಲ. ಅಜ್ಞಾನಿಯಾದವನಿಗೇ ಯಾವಾಗಲೂ ಅಂಜಿಕೆ. ಅವನೇ ಬಲೆಯಲ್ಲಿ ಸಿಕ್ಕಿಬೀಳುವವನು. ಪಾಪಮಯನಾಗುವನು. ಲಕ್ಷಾಂತರ ಜನ್ಮಗಳು ಕಷ್ಟರಾಶಿಯಲ್ಲಿ ಬೆಂದು ಅನಂತ ಕಷ್ಟನಷ್ಟಗಳಿಗೀಡಾಗಿ ಕಡೆಗೆ ದೇವರಿಗಾಗಿ ಹಂಬಲಿಸುವನು.

ಶಿಷ್ಯ:— ಅನುಭವದಿಂದ ಅವನಿಗೆ ಬುದ್ಧಿ ಬಂದು ನಂತರ ಜ್ಞಾನ ಪಡೆಯುವನು.

ಶ್ರೀಮಾತೆ:— ಹೌದು. ಕರು, "ಹಂಬಾ, ಹಂಬಾ" (ನಾನು, ನಾನು) ಎಂದು ಕೂಗುತ್ತದೆ. ಅದರ ಚರ್ಮ ಕರುಳಿನಿಂದ ತಮಟೆ ಮುಂತಾದುವನ್ನು ಮಾಡಿದಾಗಲೂ ಅದು ಹಾಗೆಯೇ ಕೂಗುತ್ತದೆ. ಕಡೆಗೆ ಅದು ಎಕ್ಕುವವನ ಕೈಗೆ ಸಿಕ್ಕಿದಾಗಮಾತ್ರ ತುಹು! ತುಹು! (ನೀನು, ನೀನು) ಎನ್ನುವುದು.

೧೮ನೇ ಸೆಪ್ಟೆಂಬರ್ ೧೯೧೩.

ಒಬ್ಬ ಭಕ್ತನಿಗೆ ಕಾಗದ ಬರೆಯುವಾಗ ಶ್ರೀಮಾತೆ, "ಈ ಮಾನವ ಜನ್ಮದಲ್ಲಿ ಸುಖವೆಂಬುವುದಿಲ್ಲ. ಈ ಜಗತ್ತು ದುಃಖಮಯ. ಇಲ್ಲಿ ಸುಖವೆಂಬುದು ನಾಮಮಾತ್ರ. ಯಾರಮೇಲೆ ಭಗವಾನರ ಕೃಪೆ ಬೀಳುವುದೋ ಅವನಿಗೆ ಮಾತ್ರ ಅವರು ದೇವರು ಎಂಬ ಅರಿವಾಗುವುದು. ಇದೊಂದೇ ಅವನಿಗೆ ಸುಖದಾಯಕ ಎಂಬುದನ್ನು ನೆನಪಿನಲ್ಲಿಡಿ" ಎಂದು ಬರೆದರು.

ಒಬ್ಬ ಸನ್ಯಾಸಿ ಭಕ್ತ ಶ್ರೀಮಾತೆಯವರ ದರ್ಶನಕ್ಕೆ ಜಯರಾಮವಟಿಗೆ ಬಂದಿದ್ದ. ನಂತರ ಅವನು ಹೃಷೀಕೇಶಕ್ಕೆ ಹೊರಟುಹೋದ. ಕೊಂಚದಿನಗಳಲ್ಲೇ ಅವನು ಶ್ರೀಮಾತೆಗೆ, "ತಾಯಿ, ಒಮ್ಮೆ ನೀವು ನನಗೆ ಕಾಲಾನುಕ್ರಮಣ ನಿನಗೆ ಗುರುಮಹಾರಾಜರ ದರ್ಶನ ವಾಗುವುದೆಂದು ಹೇಳಿದ್ದಿರಿ. ಇನ್ನೂ ನನಗೆ ಅದು ಲಭಿಸಿಲ್ಲ" ಎಂದು ಪತ್ರ ಬರೆದಿದ್ದ. ಶ್ರೀಮಾತೆ ಇದನ್ನು ಕೇಳಿ ಶಿಷ್ಯನಿಗೆ, "ಶ್ರೀರಾಮಕೃಷ್ಣರು ಹೃಷೀ

ಕೇಶಕ್ಕೆ ಅವನಿಗೋಸ್ಕರ ಹೋಗಿಲ್ಲ: ಅವನು ಈಗ ಸನ್ಯಾಸಿ. ದೇವರ ಪ್ರಾರ್ಥನೆಯಲ್ಲದೆ ಅವನಿಗೇನು ಈಗ ಕೆಲಸ? ಅವರಿಚ್ಛೆಬಂದಾಗ ಅವನು ಭಕ್ತನಿಗೆ ದರ್ಶನವೀಯುವನು ಎಂದು ಪತ್ರ ಬರೆ'' ಎಂದರು.

ಒಬ್ಬ ಹೆಂಗಸು ಶ್ರೀಮಾತೆಗೆ, "ತಾಯಿ, ನನಗಿನ್ನೂ ಚಿಕ್ಕ ವಯಸ್ಸು. ನನ್ನ ಅತ್ತೆಮಾವಂದಿರು ನಿಮ್ಮ ಹತ್ತಿರ ಬರಲು ನನ್ನನ್ನು ಬಿಡುವುದಿಲ್ಲ. ಅವರಿಷ್ಟಕ್ಕೆ ವಿರೋಧವಾಗಿ ನಾನು ಹೇಗೆ ಬರಲಿ? ನಿಮ್ಮಾಶೀರ್ವಾದ ಬೇಕೆಂದು ಬೇಡುವೆ'' ಎಂದು ಕಾಗದ ಬರೆದಿದ್ದಳು.

ಶ್ರೀಮಾತೆ ಶಿಷ್ಯಳಿಗೆ, "ಮಗು, ನೀನು ಇಲ್ಲಿಗೆ ಬರಬೇಕಾದ ಆವಶ್ಯಕತೆಯೇನೂ ಇಲ್ಲ. ಭೂಮಂಡಲವನ್ನೆಲ್ಲಾ ವ್ಯಾಪಿಸಿರುವ ಆ ಭಗವಂತನಿಗೆ ಮೊರೆಯಿಡು. ಆತ ನಿನ್ನನ್ನು ಆಶೀರ್ವದಿಸುವನು'' ಎಂದು ಬರೆಯುವಂತೆ ಹೇಳಿದರು.

೩೦ ನೇ ಸೆಪ್ಟೆಂಬರ್, ೧೯೧೮.

ಶ್ರೀಮಾತೆ ಪೂಜೆಗೆ ಫಲವನ್ನು ಅಣಿಮಾಡುತ್ತಿದ್ದರು. ಶಿಷ್ಯ ಒಬ್ಬ ಭಕ್ತನಿಂದ ಬಂದ ಪತ್ರವನ್ನೋದುತ್ತಿದ್ದ. ದೇವರಮೇಲೆ ಕೋಪ ಉಂಟಾಗಿರುವಂತೆ ಅವನು ಬರೆದಿದ್ದ. ಶ್ರೀಮಾತೆ, 'ಗುರುಮಹಾರಾಜರು, ಶುಕ ವ್ಯಾಸ ಮುಂತಾದ ಋಷಿಗಳೇ ದೊಡ್ಡ ಇರುವೆಯ ಸಮಾನವೆಂದು' ಹೇಳುತ್ತಿದ್ದರು. ದೇವರ ಸೃಷ್ಟಿಯಲ್ಲಿ ಅನಂತ ಜೀವರಾಶಿಗಳಿವೆ. ನೀನು ಅವನನ್ನು ಪ್ರಾರ್ಥಿಸದಿದ್ದಲ್ಲಿ ಅದರಿಂದ ಅವನಿಗೇನು? ದೇವರನ್ನು ನೆನಸಿಕೊಳ್ಳದೆ ಇರತಕ್ಕವರು ಕೂಡ ಬೇಕಾದಷ್ಟು ಮಂದಿಯಿದ್ದಾರೆ. ನೀನು ಪ್ರಾರ್ಥಿಸದಿದ್ದಲ್ಲಿ ಅದು ನಿನ್ನ ದುರದೃಷ್ಟ. ತನ್ನನ್ನು ಮರೆಯುವಂತೆ ಕೂಡ ಮಾಡಿರುವುದು ಆತನ ದೈವಲೀಲೆ. 'ಅವರು ಸುಖವಾಗಿದ್ದಾರೆ,ಹಾಗೇ ಇರಲಿ' ಎನ್ನುವನು.'' ಎಂದು ಬರೆ ಎಂದರು.

ಶಿಷ್ಯ?– ತಾಯಿ, ಈ ಪತ್ರಬರೆದಿರುವವನಂತೆ ಜನರು ದೇವರನ್ನು ನೋಡಲಿಚ್ಛಿಸುವುದಿಲ್ಲನೆಂದಲ್ಲ. ಇಲ್ಲದಿದ್ದಲ್ಲಿ ಅವರ ಮನಸ್ಸಿನಲ್ಲಿ ಈ ಪ್ರಶ್ನೆಯೇಕೆ ಏಳುತ್ತಿತ್ತು? "ತಮ್ಮವ'' ನೆಂದು ತಿಳಿದಿರುವ ದೇವರು ತಮ್ಮಿಂದ ದೂರ ಹೋಗುತ್ತಿದ್ದಾನೆಂದು ಅವರಿಗೆ ಬಹಳ ದುಃಖವಾಗಿದೆ. ಬುದ್ಧ, ಚೈತನ್ಯ, ಕ್ರಿಸ್ತ ಮುಂತಾದವರು ತಮ್ಮ ಭಕ್ತರಿಗೋಸ್ಕರ ಎಷ್ಟೊಂದು ಮಾಡಿದರು.

ಶ್ರೀಮಾತೆ:– ನಮ್ಮ ಗುರುಮಹಾರಾಜರ ಆಶಯವೂ ಅದೇ.

ಎಲ್ಲಾ ಭಕ್ತರನ್ನೂ ಜ್ಞಾಪಿಸಿಕೊಳ್ಳುವುದು ನನಗೆ ಅಸಾಧ್ಯ. ನಾನು ಗುರುದೇವನಿಗೆ, "ಹೇ ಸ್ವಾಮಿ, ಅವರು ಎಲ್ಲಿದ್ದರೂ ಆಶೀರ್ವದಿಸು. ನನಗೆ ಎಲ್ಲರನ್ನೂ ನೆನಸಲಾಗುವುದಿಲ್ಲ" ಎಂದು ಬೇಡುವೆ. ನೋಡು, ಅವರೇ ಎಲ್ಲವನ್ನೂ ಮಾಡುತ್ತಿರುವರು. ಇಲ್ಲದಿದ್ದರೆ ಇಷ್ಟೊಂದು ಮಂದಿ ಏಕೆ ಬರುತ್ತಿದ್ದರು?

ಶಿಷ್ಯ:– ಅದು ನಿಜ. ಕಾಳಿ, ದುರ್ಗಾ, ಮುಂತಾದ ದೇವತೆಗಳನ್ನು ದೇವರೆಂದು ತಿಳಿಯುವುದು ಜನರಿಗೆ ಸುಲಭ. ಆದರೆ ಮನುಷ್ಯನನ್ನು ದೇವರೆಂದು ತಿಳಿಯಲು ಸುಲಭವೆ?

ಮರುದಿನ ಒಬ್ಬ ಭಕ್ತ ಬಂದ. ಶಿಷ್ಯ ಶ್ರೀಮಾತೆಗೆ, "ತಾಯಿ, ಈ ಶಿಷ್ಯನೇ ನಿಮಗೆ ಪತ್ರ ಬರೆದವನು" ಎಂದು ಹೇಳಿದ. ಶ್ರೀಮಾತೆ, "ಹೌದೇನು? ಅವನು ಒಳ್ಳೆ ಹುಡುಗನಂತೆ ತೋರುತ್ತಾನೆ" ಎಂದರು. ನಂತರ ಶ್ರೀಮಾತೆ ಅವನಿಗೆ, "ನೀರಿನ ಸ್ವಭಾವ ಕೆಳಗೆ ಹರಿಯುವುದು. ಆದರೆ ಸೂರ್ಯನ ಕಿರಣಗಳು ಅವನ್ನು ಮೇಲಕ್ಕೆತ್ತುತ್ತವೆ. ಹಾಗೆಯೇ ಮನಸ್ಸು ವಿಷಯವಸ್ತುವನ್ನು ಭೋಗಿಸುವುದಕ್ಕೆ ಇಳಿಯುವುದು ಸಹಜ. ಆದರೆ ದೇವರ ಕೃಪೆ ಆ ಮನಸ್ಸು ಪವಿತ್ರ ವಸ್ತುಗಳೆಡೆ ಹೋಗುವಂತೆ ಮಾಡುವುದು" ಎಂದರು.

ಬೆಳಿಗ್ಗೆ ಹತ್ತೂವರೆಯಾಗಿತ್ತು. ಒಬ್ಬ ಗೃಹಸ್ಥಭಕ್ತ ಬಂದು ಶ್ರೀಮಾತೆಗೆ ಪ್ರಣಾಮಮಾಡಿದ. "ತಾಯಿ, ನನಗೇಕೆ ಗುರುಮಹಾರಾಜರ ದರ್ಶನವಾಗಿಲ್ಲ?" ಎಂದು ಕೇಳಿದ. ಶ್ರೀಮಾತೆ ಹೀಗೆಂದರು: "ಎಡೆಗೆಡದೆ ಪ್ರಾರ್ಥನೆ ಮಾಡುತ್ತಾ ಹೋಗು. ಯೋಗ್ಯಕಾಲದಲ್ಲಿ ಎಲ್ಲಾ ಬರುವುದು. ಹಿಂದಿನ ಮುನಿಗಳು ಮತ್ತು ಋಷಿಗಳು ಎಷ್ಟೊಂದು ತಪಸ್ಸು ಮಾಡಿದರೂ ಎಷ್ಟುಬಾರಿ ಜನ್ಮವೆತ್ತಲಿಲ್ಲ? ಒಂದೇ ಕ್ಷಣದಲ್ಲಿ ನಿನಗೆ ದೇವರು ದೊರೆಯಬೇಕೆಂದು ನೀನಿಚ್ಛೆಪಡುವೆಯೇನು? ಈ ಜನ್ಮದಲ್ಲಿಲ್ಲದಿದ್ದರೆ ಮುಂದಿನ ಜನ್ಮದಲ್ಲಿ ಪಡೆಯುವೆ. ಇಲ್ಲದಿದ್ದರೆ ಅದರ ಮುಂದಿನದರಲ್ಲಿ ಪಡೆಯುವೆ. ದೇವರಸಾಕ್ಷಾತ್ಕಾರ ಅಷ್ಟೊಂದು ಸುಲಭವೆ? ಆದರೆ ಈ ವೇಳೆ ಗುರುಮಹಾರಾಜರು ಸುಲಭದ ಹಾದಿಯನ್ನು ತೋರಿಸಿದ್ದಾರೆ. ಎಲ್ಲರೂ ಅವನನ್ನು ಪಡೆಯಲು ಸಾಧ್ಯ."

ಭಕ್ತನು ಹೊರಟುಹೋದಮೇಲೆ ಶ್ರೀಮಾತೆ, "ಅವನು ಪ್ರಾಪಂಚಿಕತೆಯಲ್ಲಿ ಮುಳುಗಿದ್ದಾನೆ. ಲೆಕ್ಕವಿಲ್ಲದಷ್ಟು ಮಕ್ಕಳ ತಂದೆ.

ಆದರೂ, 'ನಾನೇಕೆ ಗುರುಮಹಾರಾಜರ ದರ್ಶನ ಪಡೆದಿಲ್ಲ?' ಎನ್ನುತ್ತಾನೆ. ಗುರುಮಹಾರಾಜರಲ್ಲಿಗೆ ಅನೇಕಮಂದಿ ಸ್ತ್ರೀಯರು ಬರುತ್ತಿದ್ದರು. ಅವರು, 'ದೇವರಲ್ಲಿ ನಮ್ಮ ಮನಸ್ಸನ್ನು ಇಡಲಾರೆವು. ನಮ್ಮ ಮನಸ್ಸೇಕೆ ಸ್ಥಿರವಾಗಿಲ್ಲ?' ಎಂದು ಕೇಳುತ್ತಿದ್ದರು. ಶ್ರೀರಾಮಕೃಷ್ಣರು ಅವರಿಗೆ, "ನಿಮ್ಮಲ್ಲಿನ್ನೂ ಬಾಣಂತಿ ವಾಸನೆ ಇದೆ. ಅದನ್ನು ಮುಂಚೆ ಹೋಗಲಾಡಿಸಿ. ದೈವಸಾಕ್ಷಾತ್ಕಾರದ ಯೋಚನೆ ಈಗಲೇ ನಿಮಗೇಕೆ? ಸತ್ಕಾಲದಲ್ಲಿ ಎಲ್ಲಾ ಲಭಿಸುವುದು. ಈ ಜನ್ಮದಲ್ಲಿ ನನ್ನನ್ನು ನೋಡಿರುವುದೇ ಸಾಕು. ಮುಂದಿನ ಜನ್ಮದಲ್ಲಿ ಮತ್ತೆ ಭೇಟಿಯಾಗೋಣ ಆಗ ನಿಮ್ಮಗುರಿ ಸೇರುವಿರಿ" ಎನ್ನುತ್ತಿದ್ದರು. ಈ ದೇಹದಲ್ಲಿರುವವರೆಗೆ ನಾವು ಆ ಮನುಷ್ಯನನ್ನು ನೋಡಬಹುದು. ನಾನು ಈಗ ಜೀವಿಸಿದ್ದೇನೆ. ಕೇವಲ ಇಲ್ಲಿಗೆ ಬರುವುದರಿಂದ ನನ್ನನ್ನು ನೋಡಬಹುದು. ಈ ಕಣ್ಣುಗಳಿಂದಲೇ ಗುರುಮಹಾರಾಜರ ದರ್ಶನ ಭಾಗ್ಯ ಹೊಂದುವವರೆಷ್ಟು ಮಂದಿ! ದಾಕಾದಲ್ಲಿ ವಿಜಯ ಗೋಸ್ವಾಮಿ ಗುರುಮಹಾರಾಜರನ್ನು ನೋಡಿದ. ಅವರ ದೇಹದ ಅರಿವೂ ಅವನಿಗಾಯಿತು. ಅದನ್ನು ಕೇಳಿ ಗುರುಮಹಾರಾಜರು, "ಈ ಆತ್ಮ ಹೊರಗೆ ಹೋಗುವುದೆಂದರೆ ಒಳ್ಳೆಯದಲ್ಲ. ಬಹುಶಃ ಇನ್ನು ಬಹುದಿನ ಈ ದೇಹ ಇರಲಾರದು" ಎಂದರು.

"ದೇವರನ್ನು ಯಾರು ನೋಡಿದ್ದಾರೆಂದು ನೀನು ಹೇಳಬಲ್ಲೆ? ಶ್ರೀಗುರುದೇವರು ನರೇಂದ್ರನಿಗೆ ದೈವಸಾಕ್ಷಾತ್ಕಾರ ಪಡೆಯುವಂತೆ ಮಾಡಿದರು. ಶುಕ, ವ್ಯಾಸ, ಮತ್ತು ಶಿವ ಎಲ್ಲರೂ ಹೆಚ್ಚೆಂದರೆ ದೊಡ್ಡ ಇರುವೆಗಳಂತೆ. ದೇವರ ಕ್ಷಣಕಾಲದ ದರ್ಶನ ಪಡೆದವರು. ಸ್ವಪ್ನದಲ್ಲಿ ಏನನ್ನಾದರೂ ನೋಡಬಹುದು; ಆದರೆ ಈ ಭೌತಿಕ ಶರೀರದಲ್ಲಿ ದೇವರ ದರ್ಶನ ಪಡೆಯುವುದು ಅಪೂರ್ವ ಸೌಭಾಗ್ಯ."

(ಉದ್ವೇಗದಿಂದ) ಪವಿತ್ರತಮ ಮನಸ್ಸಿದ್ದರೆ ಪ್ರಾರ್ಥಿಸಲೊಲ್ಲರೇಕೆ? ಅವನಿಗೇಕೆ ದೇವರನ್ನು ಕಾಣಲಾಗಲಿಲ್ಲ? ಪವಿತ್ರ ಮನಸ್ಸುಳ್ಳವನು ಜಪಮಾಡಿದರೆ ಆ ಪವಿತ್ರ ನಾಮ ಅಂತರ್ಯದೊಳಗಿಂದ ತಾನು ಹೊರ ಹೊಮ್ಮುವಂತೆ ಅನುಭವವಾಗುವುದು. ಅವನು ನಾಮೋಚ್ಚಾರಣೆಯ ಪ್ರಯತ್ನವನ್ನೇ ಮಾಡುವುದಿಲ್ಲ. ಸೋಮಾರಿತನಬಿಟ್ಟು ಜಪಧ್ಯಾನವನ್ನು ಯೋಗ್ಯಕಾಲದಲ್ಲಿ ಮಾಡಬೇಕು. ಒಮ್ಮೆ, ದಕ್ಷಿಣೇಶ್ವರದಲ್ಲಿದ್ದಾಗ, ಸೋಮಾರಿತನದಿಂದ ನಾನು ಬೇಗ ಏಳದೆ ಸ್ವಲ್ಪಹೊತ್ತಾಗಿ ಎದ್ದೆ.

ಆ ಕಾಲದಲ್ಲಿ ನಾನು ಬೆಳಗಿನ ಜಾವ ಮೂರು ಘಂಟೆಗೆ ಏಳುತ್ತಿದ್ದೆ. ಕ್ರಮೇಣ ಬೆಳಗಿನ ಜಾವ ಏಳಲು ನನಗೆ ಮನಸ್ಸೇ ಬರಲಿಲ್ಲ. ಆಗ "ಕಡೆಗೆ ನಾನು ಸೋಮಾರಿತನಕ್ಕೆ ಬಲಿಯಾದೆ" ಎಂದುಕೊಂಡೆ. ಅಲ್ಲಿಂದ ಮುಂದೆ ನಾನು ಬಲಾತ್ಕಾರದಿಂದ ಬೇಗ ಏಳಲುಪಕ್ರಮಿಸಿದೆ. ಕ್ರಮೇಣ ನನ್ನ ಹಿಂದಿನ ಅಭ್ಯಾಸಕ್ಕೆ ಬಂದೆ. ಇಂತಹ ವಿಷಯದಲ್ಲಿ ಅಚಲ ನಿರ್ಧಾರದಿಂದ ಸಾಧನೆ ಮಾಡಬೇಕು.

ಸಾಧನೆ, ಪೂಜೆ, ಯಾತ್ರೆ, ಹಣವನ್ನಾರ್ಜಿಸುವಿಕೆ, ಇವೆಲ್ಲ ವನ್ನೂ ಇನ್ನೂ ಚಿಕ್ಕವರಾಗಿದ್ದಾಗ ಮಾಡಬೇಕು. ಈಗ ನನ್ನನ್ನೇ ನೋಡು, ಕಾಲ್ನಡೆಯಲ್ಲಿ ನಾನು ಕಾಶಿ, ಬೃಂದಾವನ ಮುಂತಾದ ಸ್ಥಳಗಳಿಗೆ ಹೋಗುತ್ತಿದ್ದೆ. ಈಗ ಕೊಂಚದೂರ ಹೋಗಬೇಕಾದರೂ ನನಗೆ ವಾಹನ ಬೇಕು. ನಾನು ಇನ್ನೊಬ್ಬರನ್ನು ಅವಲಂಬಿಸಿರುವೆ. ಇಳಿವಯಸ್ಸಿನಲ್ಲಿ ದೇಹ ಶಿಥಿಲವಾಗುವುದು. ಹಿಂದಿನ ಶಕ್ತಿ ಅದಕ್ಕಿರುವುದಿಲ್ಲ. ಮನಸ್ಸಿನ ಉತ್ಸಾಹ ದುರ್ಬಲವಾಗುವುದು. ಇಂತಹ ಸಮಯದಲ್ಲಿ ಏನನ್ನಾದರೂ ಸಾಧಿಸಲು ಸಾಧ್ಯವೆ? ಮಠದ ಸನ್ಯಾಸಿಗಳು ಇನ್ನೂ ಎಳೆವಯಸ್ಸಿನಲ್ಲಿರು ವಾಗಲೇ ದೇವರ ಮೇಲೆ ಮನಸ್ಸನ್ನಿಡಬೇಕೆಂದು ಪ್ರಯತ್ನಿಸುತ್ತಿರುವರು. (ಶಿಷ್ಯನಿಗೆ) "ಮಗು, ತಪಸ್ಸು ಪೂಜೆ ಎಲ್ಲವನ್ನೂ ಈಗಿನಿಂದಲೇ ಆರಂಭಿಸು. ಮುಂದೆ ಇವು ಸಾಧ್ಯವೇ? ನೀನೇನು ಸಾಧಿಸಬೇಕೆಂದಿರು ವೆಯೋ ಅದನ್ನು ಈಗಲೇ ಸಾಧಿಸು. ಇದೇ ಯೋಗ್ಯಕಾಲ" ಎಂದರು.

ಶಿಷ್ಯ:— ನಿಮ್ಮ ಆಶೀರ್ವಾದ ಪಡೆದವರೆಲ್ಲಾ ಧನ್ಯರು ಮುಂದೆ ಬರುವವರಿಗೆಲ್ಲಾ ಇಂಥ ಸುಸಂಧಿ ದೊರಕುವುದಿಲ್ಲ.

ಶ್ರೀಮಾತೆ:— ನೀನೇನು ಹೇಳುತ್ತಿರುವೆ? ಅವರೆಲ್ಲಾ ಕೃತಾರ್ಥ ರಾಗುವುದಿಲ್ಲೆಂದು ಹೇಳುತ್ತಿರುವೆಯೇನು? ದೇವರು ಎಲ್ಲೆಲ್ಲಿಯೂ ಇದ್ದಾನೆ. ಗುರುಮಹಾರಾಜರು ಎಲ್ಲೆಡೆಯೂ ಇದ್ದಾರೆ. ಅವರು ಜಯ ಶಾಲಿಗಳಾಗುವರು. ಇತರ ದೇಶದ ಜನರೂ ಆಧ್ಯಾತ್ಮಿಕ ಪ್ರಗತಿಯಲ್ಲಿ ಮುಂದುವರಿಯುತ್ತಿಲ್ಲವೇನು?

ಶಿಷ್ಯ:— ಮನಸ್ಸು ತನ್ನನ್ನಾರಾದರೂ ಪ್ರೀತಿಸುತ್ತಿದ್ದರೆ ಅವರಿಗಾಗಿ ಹಂಬಲಿಸುತ್ತದೆ. ಆದರೆ ನೀವು ನಿಜವಾಗಿ ನಮ್ಮನ್ನು ಪ್ರೀತಿಸುತ್ತೀರಾ?

ಶ್ರೀಮಾತೆ:— ನಾನು ನಿನ್ನನ್ನು ಪ್ರೀತಿಸುವುದಿಲ್ಲವೆ? ಇತರರು ನನಗೆ ಒಂದು ಕೊಂಚಮಾಡಿದರೂ ಅವರನ್ನು ನಾನು ಪ್ರೀತಿಸುವೆ, ನನಗೆ

ಎಷ್ಟೊಂದು ಮಾಡಿರುವೆ. ಮನೆಯ ಯಾವ ವಸ್ತುವನ್ನು ಮುಟ್ಟಿದರೂ ನಿನ್ನ ನೆನಪು ಬರುವುದು. ನನ್ನ ಬಳಿ ಇರುವವರನ್ನೆಲ್ಲ ನಾನು ಆಗಾಗ್ಗೆ ನೆನೆಸುತ್ತಿರುವೆ. ನನ್ನಿಂದ ದೂರದಲ್ಲಿರುವವರಿಗೆಲ್ಲಾ ಗುರುದೇವರಿಗೆ "ಓ ಸ್ವಾಮಿ, ಅವರನ್ನು ಕಾಪಾಡು. ನನಗೆ ಅವರನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಳ್ಳಲಾಗುವುದಿಲ್ಲ" ಎಂದು ಬೇಡುವೆ.

ಅಕ್ಟೋಬರ್ ೧೯೧೮

ಶ್ರೀಮಾತೆ ಹಾಸಿಗೆಯಲ್ಲಿ ಕುಳಿತಿದ್ದರು. ಶಿಷ್ಯ, ಅವರ ಭಕ್ತರು ಬರೆದ ಪ್ರತಗಳನ್ನೆಲ್ಲಾ ಓದಿ ಹೇಳುತ್ತಿದ್ದ. ಕೃಷ್ಣಲಾಲ್ ಮಹಾರಾಜರು ಅಲ್ಲಿದ್ದರು. ಪತ್ರಗಳಲ್ಲಿ, "ಮನಸ್ಸನ್ನು ಏಕಾಗ್ರ ಮಾಡಲಾಗುತ್ತಿಲ್ಲ" ಮುಂತಾಗಿ ಬರೆದಿತ್ತು. ಶ್ರೀಮಾತೆ ಇವನ್ನೆಲ್ಲಾ ಕೇಳಿ ಒತ್ತಿ ಹೇಳಿದರು: "ದಿನಕ್ಕೆ ಹದಿನೈದು ಅಥವಾ ಇಪ್ಪತ್ತು ಸಾವಿರ ಬಾರಿ ದೇವರ ನಾಮ ಜಪಮಾಡಿದರೆ ಮನಸ್ಸು ಸ್ಥಿರವಾಗುವುದು. ಇದು ಖಂಡಿತ. ಕೃಷ್ಣಲಾಲ್, ನಾನೇ ಇದನ್ನು ಅನುಭವಿಸಿದ್ದೇನೆ. ಇದನ್ನುಮೊದಲು ಅಭ್ಯಾಸಿಸಲಿ. ಅವರು ಅಪಜಯ ಹೊಂದಿದರೆ ಆಗ ಗೊಣಗಾಡಲಿ. ಸ್ವಲ್ಪವಾದರೂ ಭಕ್ತಿಯಿಂದ ಜಪಮಾಡಬೇಕು. ಇದನ್ನು ಮಾಡುತ್ತಿಲ್ಲ. ಕೇವಲ, 'ನನಗೇಕೆ ಜಯಸಿಕ್ಕಿಲ್ಲ' ಎಂದು ಗೊಣಗುಟ್ಟುತ್ತಾರೆ."

ಭಕ್ತನೊಬ್ಬನು ಒಳಕ್ಕೆ ಬಂದು ಶ್ರೀಮಾತೆಯವರನ್ನು ಜಪ ಮತ್ತು ಧ್ಯಾನದ ವಿಚಾರ ಕೇಳಿದ. ಶ್ರೀಮಾತೆ ದೇವರನಾಮ ಸ್ಮರಣೆಯನ್ನು ಜಪಸರದ ಮೂಲಕ ಅಥವಾ ಬೆರಳುಗಳ ಮೂಲಕ ಎಣಿಸು. ಎಣಿಕೆಯನ್ನಿಟ್ಟುಕೊಳ್ಳುವುದು ದೇವರಲ್ಲಿ ಚಿತ್ತೈಕಾಗ್ರತೆ ಹೊಂದುವುದಕ್ಕಾಗಿ. ಅತ್ತಿತ್ತ ಅಲೆದಾಡುವುದು ಮನಸ್ಸಿನ ಸ್ವಭಾವ. ಈ ಸಾಧನದಿಂದ ದೇವರ ಕಡೆ ಮನಸ್ಸೆಳೆಯುವುದು. ಮಂತ್ರವನ್ನುಚ್ಚರಿಸುತ್ತಿದ್ದಾಗ ದೇವರ ರೂಪು ಕಾಣಿಸಿ, ಅವನಲ್ಲೇ ತಲ್ಲೀನರಾದರೆ ಜಪ ನಿಂತುಹೋಗುವುದು. ಧ್ಯಾನದಲ್ಲಿ ಯಶಸ್ವಿಯಾದವನಿಗೆ ಎಲ್ಲವೂ ಲಭಿಸುವುದು.

ಮನಸ್ಸು ಸ್ವಭಾವತಃ ಚಂಚಲ. ಆದ್ದರಿಂದ ಪ್ರಾರಂಭದಲ್ಲಿಯೇ ಮನಸ್ಸನ್ನು ಸ್ಥಿರವಾಗಿಡಲು ಜಪ ಮತ್ತು ಧ್ಯಾನವನ್ನು ಕೊಂಚ ಪ್ರಾಣಾಯಾಮದ ಮೂಲಕ ಸಾಧನೆ ಮಾಡಬಹುದು. ಇದರಿಂದ ಮನಸ್ಸು ಸ್ಥಿರವಾಗಲು ಸಹಾಯವಾಗುವುದು. ಆದರೆ ಇದನ್ನು ಮಿತಿಮೀರಿ ಮಾಡಬಾರದು. ಇದರಿಂದ ಮಿದುಳು ಕಾಯುವುದು. ದೇವರ

ದರ್ಶನ, ಧ್ಯಾನ ಎಂದು ಮಾತಾಡಬಹುದು. ಆದರೆ ಮನಸ್ಸೇ ಎಲ್ಲಕ್ಕೂ ಮೂಲ. ಸ್ಥಿರ ಮನಸ್ಸಿದ್ದರೆ ಎಲ್ಲವನ್ನೂ ಗಳಿಸಬಹುದು.

ಮನುಷ್ಯ ದೇವರನ್ನು ಮರೆಯುವುದು ಸಹಜ: ಆದ್ದರಿಂದ ಯಾವಾಗ ಆವಶ್ಯಕತೆಯುಂಟಾಗುತ್ತದೆಯೋ ಆಗ ದೇವರೇ ಭೂಮಿಯಲ್ಲಿ ಅವತರಿಸಿ ಸಾಧನೆಯನ್ನು ತಾನೇ ಅಭ್ಯಾಸಮಾಡಿ ದಾರಿ ತೋರುವನು. ಈ ಬಾರಿ ತ್ಯಾಗದ ನಿದರ್ಶನವನ್ನು ತೋರಿದ್ದಾನೆ.

---

## ಸಂಭಾಷಣೆ ೩

ಶಿಷ್ಯ:– ತಾಯಿ, ಪ್ರಾಣಾಯಾಮ ಮತ್ತು ಆಸನ ಮಾಡುವುದು ಒಳ್ಳೆಯದೆ?

ಶ್ರೀಮಾತೆ– ಇಂತಹ ಸಾಧನೆಯಿಂದ ಅತಿ ಭೌತಿಕಶಕ್ತಿಗಳು ಲಭಿಸುವುವು. ಇವು ಮನುಷ್ಯನನ್ನು ಅಡ್ಡದಾರಿಗೆ ಎಳೆಯುವುವು.

ಶಿಷ್ಯ:– ಒಂದು ತೀರ್ಥಸ್ಥಳವಾದ ಮೇಲೆ ಮತ್ತೊಂದು ತೀರ್ಥ ಸ್ಥಳಕ್ಕೆ ಹೋಗುವುದು ಒಳ್ಳೆಯದೆ?

ಶ್ರೀಮಾತೆ:– ಒಂದು ಸ್ಥಳದಲ್ಲಿ ಮನಸ್ಸಿಗೆ ಶಾಂತಿ ಸಿಕ್ಕಿದರೆ ತೀರ್ಥ ಯಾತ್ರೆಯ ಅವಶ್ಯಕತೆ ಇಲ್ಲ.

ಶಿಷ್ಯ:– ನನಗೆ ಧ್ಯಾನ ಮಾಡುವುದಕ್ಕೇ ಸಾಧ್ಯವಿಲ್ಲ. ದಯವಿಟ್ಟು ನನ್ನ ಕುಂಡಲಿನೀ ಶಕ್ತಿಯನ್ನು ಜಾಗ್ರತಗೊಳಿಸಿ.

ಶ್ರೀಮಾತೆ:– ಕಾಲಕ್ರಮೇಣ ಅದು ಜಾಗ್ರತವಾಗುವುದು. ಜಪ, ಧ್ಯಾನಮಾಡು. ಅದು ತನಗೆ ತಾನೇ ಜಾಗ್ರತವಾಗುವುದಿಲ್ಲ. ನಿರಂತರಧ್ಯಾನದಿಂದ ಮನಸ್ಸು ಏಕಾಗ್ರವಾಗುವುದು. ಅನಂತರ ಅದನ್ನು ಬಿಡುವುದಕ್ಕೇ ಆಗುವುದಿಲ್ಲ. ಧ್ಯಾನ ಮಾಡಲು ಮನಸ್ಸಿಗೆ ಅಸಾಧ್ಯವಾದಾಗ ಅದನ್ನು ಬಲಾತ್ಕರಿಸಬೇಡ. ಅಂತಹ ಸಮಯ ದಲ್ಲಿ ನಮಸ್ಕಾರ ಮಾಡಿ ಆಸನದಿಂದ ಏಳು. ನಿಜವಾದ ಧ್ಯಾನ ಸ್ವಾಭಾವಿಕವಾಗಿರುವುದು.

ಶಿಷ್ಯ:– ತಾಯಿ, ಮನಸ್ಸು ಏತಕ್ಕೆ ನಿಶ್ಚಲವಾಗುವುದಿಲ್ಲ? ದೇವ ರನ್ನು ಕುರಿತು ಯೋಚಿಸಲು ಪ್ರಯತ್ನಿಸಿದರೆ, ಅದು ಇನ್ನೂ ಯಾವ ಯಾವ ವಿಷಯವನ್ನೋ ಕುರಿತು ಚಿಂತಿಸುವುದು.

ಶ್ರೀಮಾತೆ:– ಪ್ರಾಪಂಚಿಕ ವಸ್ತುವನ್ನು ಕುರಿತು ಚಿಂತಿಸುವುದು ಹಾನಿಕರ. ಅಂದರೆ ಹಣ, ಸಂಸಾರ ಇತ್ಯಾದಿ ಪ್ರಾಪಂಚಿಕ ವಸ್ತುಗಳು. ಆದರೆ ಒಬ್ಬನು ಮಾಡುತ್ತಿರುವ ಕೆಲಸವನ್ನು ಕುರಿತು ಯೋಚಿಸುವುದು ಸ್ವಾಭಾವಿಕ. ಧ್ಯಾನ ಸಾಧ್ಯವಾಗದೇ ಇದ್ದರೆ ಜಪಮಾಡು. ಸಾಕ್ಷಾತ್ಕಾರ ಜಪದ ಮೂಲಕ ದೊರಕುವುದು. ಮನಸ್ಸು ಧ್ಯಾನಕ್ಕೆ ಸಿದ್ಧವಾದರೆ ಒಳ್ಳೆಯದು. ಇಲ್ಲದೇ ಇದ್ದರೆ ಬಲಾತ್ಕರಿಸಬೇಡ.

ಶಿಷ್ಯ:– ಏಕಾಂತ ಸ್ಥಳದಲ್ಲಿ ಸಾಧನೆ ಮಾಡುವುದಕ್ಕಿಂತ ಮಠ ಅಥವಾ ಕಾಶಿಯಲ್ಲಿ ಮಾಡಿದರೆ ಒಳ್ಳೆಯದೆ?

ಶ್ರೀಮಾತೆ:– ಹೃಷೀಕೇಶ ಮುಂತಾದ ನಿರ್ಜನ ಪ್ರದೇಶದಲ್ಲಿ ಕೆಲವು ಕಾಲ ಸಾಧನೆ ಮಾಡಿದರೆ ಮನಸ್ಸು ಧೃಡವಾಗುವುದು. ಅನಂತರ ಯಾವ ಸ್ಮಶಾನದಲ್ಲಾಗಲೀ, ಸನ್ನಿವೇಶದಲ್ಲಾಗಲೀ ಇರಬಹುದು. ಸಸಿ ಎಳೆಯದಾಗಿರುವಾಗ ಅದಕ್ಕೆ ಬೇಲಿ ಬೇಕು. ಅದೇ ಮರವಾದ ಮೇಲೆ ದನ, ಕುರಿ, ಇವು ಏನನ್ನೂ ಮಾಡಲಾರವು. ನಿರ್ಜನ ಪ್ರದೇಶದಲ್ಲಿ ಸಾಧನೆ ಮಾಡುವುದು ಅವಶ್ಯಕ. ನಿನಗೆ ಯಾವಾಗಲಾದರೂ ತೊಂದರೆ ಅಥವಾ ದುಃಖ ಪ್ರಾಪ್ತವಾದಾಗ, ಸಂಶಯದಲ್ಲಿ ತೊಳಲುವಾಗ, ಕಣ್ಣೀರು ಕರೆದು ದೇವರನ್ನು ಪ್ರಾರ್ಥಿಸು. ದೇವರು ಮನದ ಕಶ್ಮಲ ತೊಳೆಯುವನು, ಆತಂಕವನ್ನು ಪರಿಹರಿಸುವನು, ಶಾಂತಿ ನೀಡುವನು.

ಶಿಷ್ಯ:– ಸಾಧನೆ ಮಾಡಲು ನನಗೆ ಶಕ್ತಿ ಇಲ್ಲ. ನಾನು ನಿಮ್ಮ ಚರಣದಲ್ಲಿ ಶರಣಾಗುವೆನು. ನನ್ನ ಉದ್ಧಾರಕ್ಕೆ ಏನು ಬೇಕೊ ಅದನ್ನು ಮಾಡಿ.

ಕೈಮುಗಿದು ಶ್ರೀಮಾತೆ ಗುರುದೇವರನ್ನು ಪ್ರಾರ್ಥಿಸತೊಡಗಿದರು. ದೇವರು ನಿನ್ನ ತ್ಯಾಗಭಾವವನ್ನು ದೃಢಪಡಿಸಲಿ. ಅವರು ನಿನ್ನನ್ನು ರಕ್ಷಿಸುತ್ತಿರುವರು. ನೀನು ಅಂಜಬೇಕಾಗಿಲ್ಲ. ಗುರುದೇವರ ಕೆಲಸಮಾಡು. ಜೊತೆಗೆ ಸಾಧನೆಮಾಡು. ಕರ್ಮ, ಕೆಲಸಕ್ಕೆ ಬಾರದ ಆಲೋಚನೆಯಿಂದ ನಮ್ಮನ್ನು ಪಾರುಮಾಡುವುದು. ಕೆಲಸವೇ ಇಲ್ಲದಿದ್ದರೆ, ಇಂತಹ ಆಲೋಚನೆ ನಮ್ಮನ್ನು ಮುತ್ತುವುವು.

ಶಿಷ್ಯ:– ದೇಹಾರೋಗ್ಯಕ್ಕಾಗಿ ಕೆಲವು ದಿನದಿಂದ ನಾನು ಯೋಗಾಭ್ಯಾಸ ಮಾಡುತ್ತಿರುವೆ. ಬ್ರಹ್ಮಚರ್ಯ ಮತ್ತು ಜೀರ್ಣ ಶಕ್ತಿಗೆ ಇವು ಸಹಕಾರಿ.

ಶ್ರೀಮಾತೆ:– ಜೋಪಾನವಾಗಿರು. ಹೆಚ್ಚುದಿನ ಇದನ್ನು ಮಾಡಿದರೆ ಮನಸ್ಸು ದೇಹದ ಕಡೆ ವಾಲೀತು! ಅದನ್ನು ಬಿಟ್ಟರೂ ನಿನ್ನ ಆರೋಗ್ಯಕ್ಕೆ ಕೇಡಾಗಬಹುದು. ಅದನ್ನು ವಿಚಾರಮಾಡಿ ನೋಡು.

ಶಿಷ್ಯ:– ಕೇವಲ ಜೀರ್ಣಶಕ್ತಿಗಾಗಿ ಅದನ್ನು ಐದು ಅಥವಾ ಹತ್ತು ನಿಮಿಷಗಳು ಮಾಡುತ್ತೇನೆ.

ಶ್ರೀಮಾತೆ:– ಆಗಲಿ ಒಳ್ಳೆಯದು. ನಾನು ಏತಕ್ಕೆ ನಿನಗೆ ಎಚ್ಚರಿಸಿದೆ ಎಂದರೆ, ಕೆಲವು ಕಾಲ ಅಭ್ಯಾಸಮಾಡಿ ನಂತರ ಬಿಟ್ಟರೆ ನಿನ್ನ

ಆರೋಗ್ಯಕ್ಕೆ ಭಂಗ ಬಂದೀತೆಂದು ಹೇಳಿದೆ. ಮಗು, ನಿನಗೆ ಭಗವ ತ್ಸಾಕ್ಷಾತ್ಕಾರವಾಗಲಿ ಎಂದು ನಾನು ಹರಸುತ್ತೇನೆ.

ಶಿಷ್ಯ :– ನಾನು ಪ್ರಾಣಾಯಾಮವನ್ನು ಮಾಡುತ್ತಿರುವೆನು. ಅದನ್ನು ಮುಂದುವರಿಸಲೆ ?

ಶ್ರೀಮಾತೆ:– ಆಗಲಿ. ಸ್ವಲ್ಪ ಮಾಡಬಹುದು. ಆದರೆ ತುಂಬ ಮಾಡಿ ತಲೆ ಕೆಡಸಿಕೊಳ್ಳಬೇಡ. ಮನಸ್ಸು ತಾನಾಗಿ ಶಾಂತವಾದರೆ ಪ್ರಾಣಾಯಾಮವೇತಕ್ಕೆ ?

ಶಿಷ್ಯ :– ಕುಂಡಲಿನಿ ಜಾಗ್ರತವಾಗದೆ ಏನೂ ಪ್ರಯೋಜನವಿಲ್ಲ.

ಶ್ರೀಮಾತೆ:– ಹೌದು ಮಗು, ಕುಂಡಲಿನಿ ಕ್ರಮೇಣ ಜಾಗ್ರತ ವಾಗುವುದು. ಭಗವನ್ನಾಮೋಚ್ಚಾರಣೆಯಿಂದ ಸಕಲವನ್ನೂ ಪಡೆ ಯುವೆ. ಮನಸ್ಸು ಶಾಂತವಾಗಿಲ್ಲದೇ ಇದ್ದರೂ ಒಂದು ಸ್ಥಳದಲ್ಲಿ ಕುಳಿತು ಒಂದು ಕೋಟಿಯಾದರೂ ಜಪ ಮಾಡು. ಕುಂಡಲಿನಿ ಜಾಗ್ರತ ವಾಗುವುದಕ್ಕೆ ಮುಂಚೆ ಅನಾಹತ ಧ್ವನಿ ಕೇಳುವುದು. ಆದರೆ ಜಗ ನ್ಮಾತೆಯ ಅನುಗ್ರಹವಿಲ್ಲದೆ ಏನೂ ಪ್ರಯೋಜನವಿಲ್ಲ. ಬೆಳಗಿನ ಜಾವದ ಹೊತ್ತು ಶಿವನ ದರ್ಶನ ಸಾಧ್ಯವಿಲ್ಲವೆಂದು ಭಾವಿಸಿದ್ದೆ. ಕಾಶಿಯ ದೇವಾಲಯದಲ್ಲಿ ಶಿವನ ಲಿಂಗ ಸಣ್ಣದು. ಅದು ನೀರಿನಲ್ಲಿರು ವುದು. ಸುತ್ತಲೂ ಹೂವು ಪತ್ರೆ ತುಂಬಿರುವುದು. ಲಿಂಗ ಕಾಣುವುದೇ ಅಪರೂಪ. ಈ ಭಾವನೆ ಹೊಳೆದ ತಕ್ಷಣವೇ ಕಪ್ಪು ಕಲ್ಲಿನ ಶಿವಲಿಂಗ ನನಗೆ ಕಂಡಿತು. ದೇವಸ್ಥಾನದಲ್ಲಿ ಪೂಜಿಸುವುದು ವಿಶ್ವನಾಥನನ್ನೇ. ಒಬ್ಬ ಭಕ್ತ ತನ್ನ ಕೈಯಿಂದ ಶಿವಲಿಂಗವನ್ನು ಮುಟ್ಟುತ್ತಿದ್ದನು. ನಾನು ಅದರ ಮೇಲೆ ನನ್ನ ಕೈಯನ್ನು ಇಟ್ಟೆನು.

ಶಿಷ್ಯ:– ಕಲ್ಲಿನ ವಿಗ್ರಹ ನಮಗೆ ತೃಪ್ತಿತಾರದು.

ಶ್ರೀಮಾತೆ:– ಮಗು, ಹಾಗೆ ಏಕೆ ಹೇಳುತ್ತೀ? ಎಷ್ಟುಜನ ಮಹಾ ಪಾಪಿಗಳು ಕಾಶಿಗೆ ಬಂದು, ಶಿವಲಿಂಗ ಮುಟ್ಟಿ, ಮುಕ್ತರಾಗಿರುವರು ! ಆ ವಿಶ್ವನಾಥ ಸ್ವಲ್ಪವೂ ಗೊಣಗದೆ ಎಲ್ಲರ ಕರ್ಮವನ್ನೂ ಹೊರುವನು.

ಶಿಷ್ಯ :– ಸಾಧನೆಗೆ ಎಂತಹ ಸ್ಥಳ ಯೋಗ್ಯ? ಸಾಧನೆ ಹೇಗೆ ಮಾಡಬೇಕು ?

ಶ್ರೀಮಾತೆ:– ನಿನಗೆ ಕಾಶಿ ಯೋಗ್ಯಸ್ಥಳ. ನಮ್ಮ ಮನಸ್ಸನ್ನು ಸದಾ ಭಗವಂತನ ಪಾದ ಪದ್ಮಗಳ ಮೇಲೆ ನಿಲ್ಲಿಸಿ ಅವನನ್ನು ಸ್ಮರಿಸು

ವುದಕ್ಕೆ ಸಾಧನೆ ಅವಶ್ಯಕ. ಜಪಮಾಡು.

ಶಿಷ್ಯ:– ಜೀವನದ ಗುರಿ ಏನು ?

ಶ್ರೀಮಾತೆ:– ಭಗವಂತನ ಸಾಕ್ಷಾತ್ಕಾರ ಮತ್ತು ಆತನಲ್ಲೇ ನೆಲೆಸಿರುವುದು. ನೀವು ಸನ್ಯಾಸಿಗಳು. ನೀವೆಲ್ಲ ಅವನವರು. ಈಗಿನ ಮತ್ತು ಮುಂದಿನ ಜವಾಬ್ದಾರಿಯನ್ನೆಲ್ಲ ಅವನು ಹೊರುವನು. ಮತ್ತೇಕೆ ವಿಹ್ವಲರಾಗುವಿರಿ ? ಯಾವಾಗಲೂ ದೇವರ ಯೋಚನೆ ಸಾಧ್ಯವೆ ? ಕೆಲವುವೇಳೆ ಕೆಲಸ ಮಾಡು, ಕೆಲವುವೇಳೆ ಧ್ಯಾನಮಾಡು.

ಶಿಷ್ಯ:– ತಾಯಿ, ಧ್ಯಾನ ಗಾಢವಾಗಿ ಸದಾ ಭಗವಂತನ ಚಿಂತೆಯಲ್ಲೇ ತನ್ಮಯವಾಗುವಂತೆ ಅನುಗ್ರಹಿಸಿ.

ಶ್ರೀಮಾತೆ ತಲೆಯಮೇಲೆ ಕೈ ಇಟ್ಟು ಆಶೀರ್ವದಿಸಿ, "ಸದಾ ನಿತ್ಯ ಅನಿತ್ಯವನ್ನು ವಿಚಾರಮಾಡು" ಎಂದರು.

ಶಿಷ್ಯ:– ತಾಯಿ, ಮನಸ್ಸಿನಲ್ಲಿ ನಿತ್ಯ ಅನಿತ್ಯವನ್ನು ವಿಮರ್ಶಿಸುವುದು ಸುಲಭ. ಅದರ ಅನುಷ್ಠಾನದ ಸಮಯದಲ್ಲಿ ಮರೆಯುವೆವು. ಪ್ರತಿ ಸಲವೂ ಅದನ್ನು ಮರೆಯುವೆವು. ಅಂತಹ ಪರೀಕ್ಷಾಸಮಯದಲ್ಲಿ ಜಾಗ್ರತನಾಗಿರುವಂತೆ ಶಕ್ತಿಯನ್ನು ಕರುಣಿಸಿ.

ಶ್ರೀಮಾತೆ:– ಮಗು, ಶ್ರೀರಾಮಕೃಷ್ಣರು ಸದಾ ನಿನ್ನನ್ನು ರಕ್ಷಿಸಲಿ, ನಿನಗೆ ಜ್ಞಾನಭಕ್ತಿ ಸಿದ್ಧಿಸಲಿ.

ಶಿಷ್ಯ:– ತಾಯಿ, ಇಷ್ಟೊಂದು ದಿನ ಕಳೆದು ಹೋಯಿತು. ಆದರೂ ನನಗೆ ಜ್ಞಾನ ಭಕ್ತಿ ದೊರಕಲಿಲ್ಲ.

ಶ್ರೀಮಾತೆ:– ದೇವರ ದಯೆಯಿಂದ ನಿನ್ನ ಮನಸ್ಸು ಪ್ರಾಪಂಚಿಕತೆಯಿಂದ ದೂರವಿದ್ದು, ಭಗವದಾಲೋಚನೆಯಲ್ಲಿ ನಿರತವಾಗಿದೆ. ಇದು ಏನು ಕಡಿಮೆಯೆ ? ಸ್ವಾಮಿ ಯೋಗಾನಂದರು, "ನಾವು ಮನದಣಿಯ ಧ್ಯಾನ ಪ್ರಾರ್ಥನೆ ಮಾಡದಿರಬಹುದು. ಆದರೆ ಪ್ರಪಂಚದ ತಾಪತ್ರಯದಿಂದ ದೂರವಿರುವೆವು" ಎನ್ನುತ್ತಿದ್ದರು. ನನ್ನನ್ನು ನೋಡು. ನಾನು ರಾಧೆಗಾಗಿ ಎಷ್ಟು ಕಷ್ಟಪಡುತ್ತಿರುವೆ !

ಶಿಷ್ಯ:–ಒಂದು ತೋಟದ ನಿರ್ಜನ ಪ್ರದೇಶದಲ್ಲಿ ಕೆಲವು ದಿನ ಸಾಧನೆ ಮಾಡಬೇಕೆಂದು ನನಗೆ ಆಸೆ.

ಶ್ರೀಮಾತೆ:– ಒಳ್ಳೆಯದು. ಇದೇ ಅದಕ್ಕೆ ಸಕಾಲ. ಅಂತಹ ಶಿಸ್ತನ್ನು ಪಡೆಯಲು ಇದೇ ತಕ್ಕ ವಯಸ್ಸು. ಅದನ್ನು ಅಭ್ಯಾಸಮಾಡು.

ಆದರೆ ಆಹಾರ ವಿಷಯದಲ್ಲಿ ಜೋಕೆ. ಸ್ವಾಮಿ ಯೋಗಾನಂದ ತುಂಬಾ ಕಷ್ಟಪಟ್ಟು ತಪಸ್ಸುಮಾಡಿ ಬೇಗ ತೀರಿಹೋದ.

* * *

ಒಂದು ದಿನ ಮಾತನಾಡುತ್ತಿದ್ದಾಗ ಒಬ್ಬ ಗೃಹಿಣೀ ಭಕ್ತಳು, ಶ್ರೀಮಾತೆಯನ್ನು ತಾನು ಯಾವರೀತಿ ಭಾವಿಸಬೇಕೆಂದು ಕೇಳಿದಳು. ಶ್ರೀಮಾತೆ, "ರಾಧೆ ಅಥವಾ ಇನ್ನು ಯಾವುದಾದರೂ ಭಾವದಲ್ಲಿ ನೋಡಬಹುದು. ನಿನ್ನ ತಾಯಿಯಂತೆ ಯೋಚಿಸಿದರೂ ಚಿಂತೆ ಇಲ್ಲ" ಎಂದರು.

ಒಬ್ಬ ಭಕ್ತೆ ಶ್ರೀಮಾತೆಗೆ, "ಅನೇಕ ಭಕ್ತರಿಗೆ ದೃಶ್ಯಗಳು ಕಾಣುತ್ತವೆ. ನನಗೆ ಏನೂ ಕಾಣುವುದಿಲ್ಲ" ಎಂದಳು. ಶ್ರೀಮಾತೆ, "ಇವೆಲ್ಲ ಕೆಲಸಕ್ಕೆ ಬಾರದವು" ಎಂದರು. ಇದರಿಂದ ಸ್ವಲ್ಪ ಭರವಸೆ ಶಿಷ್ಯಳಿಗೆ ಬಂದಿತು. ಆಕೆ ತನಗೆ ಆತ್ಮಸಾಕ್ಷಾತ್ಕಾರವಾಗುವುದೆ? ಎಂದು ಕೇಳಿದಳು. "ಹೌದು, ಆಗುವುದು ಕ್ರಮೇಣ ಆಗುವುದು" ಎಂದು ಒತ್ತಿ ಹೇಳಿದರು.

ಒಬ್ಬ ಶಿಷ್ಯಳು ತನಗೆ ಶ್ರೀಗುರುದೇವರ ಪೂಜೆಮಾಡಲು ಅವಕಾಶವಾಗಬೇಕೆಂದು ಕೇಳಿಕೊಂಡಳು. "ನಿನಗೆ ಮನೆ ಕೆಲಸಗಳೇ ಆಗುತ್ತವೆ. ಇವನ್ನೆಲ್ಲಾ ಮಾಡಲು ಅವಕಾಶವಿರುವುದಿಲ್ಲ. ಶ್ರೀಗುರುದೇವರನ್ನು ಪ್ರಾರ್ಥಿಸು. ಅವರು ಎಲ್ಲವನ್ನೂ ಮಾಡುವರು. ಚಂದ್ರ ಹೇಗೆ ಎಲ್ಲಾ ಮಕ್ಕಳ ಚಿಕ್ಕಪ್ಪನೋ ಹಾಗೆ ಶ್ರೀಗುರುದೇವರು ನಿನ್ನವರು" ಎಂದರು.

* * * * *

ಶಿಷ್ಯನೊಬ್ಬ ಒಂದು ದಿನ, "ತಾಯಿ, ನಮ್ಮ ಜೀವನ ಹೇಗೆ ಇರಬೇಕು?" ಎಂದು ಕೇಳಿದ.

ಶ್ರೀಮಾತೆ:– ಈಗ ಇರುವಂತೆಯೇ ಇರು. ಹೃತ್ಪೂರ್ವಕ ಪ್ರಾರ್ಥಿಸು. ಯಾವಾಗಲೂ ಅವರನ್ನು ಚಿಂತಿಸು.

ಶಿಷ್ಯ– ಎಷ್ಟೋ ಮುಂದುವರಿದ ಸಾಧಕರು ಭ್ರಷ್ಟರಾಗುವುದನ್ನು ನೋಡಿ ಈಗ ಅಂಜಿಕೆಯಾಗುವುದು.

ಶ್ರೀಮಾತೆ:– ನೀನು ಯಾವಾಗಲೂ ಪ್ರಲೋಭನಗಳ ಹತ್ತಿರವಿದ್ದರೆ ಕ್ರಮೇಣ ಅದರ ಬಲೆಗೆ ಬೀಳುವೆ.

ಶಿಷ್ಯ:– ಮನುಷ್ಯ ತಾನೇ ಏನನ್ನೂ ಮಾಡಲಾರ. ದೇವರು ಅವನ ಮೂಲಕ ಎಲ್ಲವನ್ನೂ ಮಾಡಿಸುತ್ತಿರುವನು.

ಶ್ರೀಮಾತೆ:–ಹೌದು, ನಿಜ. ಆದರೆ ಒಬ್ಬನಿಗೆ ಇದು ಯಾವಾಗಲೂ

ಅರಿವಾಗುವುದೆ? ಅಹಂಕಾರದಿಂದ ಮೂಢರಾಗಿ ನಾವೇ ಎಲ್ಲವನ್ನೂ ಮಾಡುತ್ತಿರುವೆವೆಂದು ಭಾವಿಸುವರು. ದೇವರನ್ನು ಆಶಿಸುವುದೇ ಇಲ್ಲ. ಯಾರು ಅವನನ್ನು ನೆಚ್ಚಿರುವರೋ ಅವರನ್ನು ದೇವರು ರಕ್ಷಿಸುವನು.

* * * * *

ಒಬ್ಬ ಸನ್ಯಾಸಿ ಶಿಷ್ಯ ಶ್ರೀಮಾತೆಯನ್ನು, "ತಾಯಿ, ಒಬ್ಬರು ತಮ್ಮನ್ನು ಗುರುವಾಗಿ ಸ್ವೀಕರಿಸಿದ ಮೇಲೆ ಮತ್ತೆ ಬೇರೆ ಸಾಧನೆ ಮಾಡಬೇಕೆ?" ಎಂದು ಕೇಳಿದ.

ಶ್ರೀಮಾತೆ:– ಅದೇನೋ ನಿಜ ಅನ್ನು. ಆದರೆ ಒಂದು ಕೋಣೆಯಲ್ಲಿ ಎಷ್ಟೋ ಆಹಾರಸಾಮಗ್ರಿಯು ಇರಬಹುದು? ಆದರೆ ಅದನ್ನು ಅಡಿಗೆ ಮಾಡಬೇಕು. ಯಾರು ಬೇಗ ಅಡಿಗೆ ಮಾಡುವರೋ ಅವರಿಗೆ ಬೇಗ ಊಟ ಸಿಕ್ಕುವುದು. ಕೆಲವರು ಮಧ್ಯಾಹ್ನ, ಕೆಲವರು ಸಾಯಂಕಾಲ ಊಟ ಮಾಡುವರು. ಮತ್ತೆ ಕೆಲವರು ಸೋಮಾರಿತನದಿಂದ ಅಡಿಗೆಮಾಡದೆ ಉಪವಾಸವಿರುವರು.

ಶಿಷ್ಯ– ತಾಯಿ, ನೀವು ಹೇಳುವುದು ಗೊತ್ತಾಗುವುದಿಲ್ಲ.

ಶ್ರೀಮಾತೆ:– ಸಾಧನೆಯನ್ನು ಎಷ್ಟು ತೀವ್ರವಾಗಿ ಮಾಡಿದರೆ ಅಷ್ಟುಬೇಗ ಭಗವತ್ಸಾಕ್ಷಾತ್ಕಾರ ಪಡೆಯುವೆ. ಏನೂ ಸಾಧನೆ ಮಾಡದೇ ಇದ್ದರೂ ಕೊನೆಗಾದರೂ ಅವನನ್ನು ಹೊಂದುವನು. ಯಾರು ಧ್ಯಾನ, ಪ್ರಾರ್ಥನೆ ಮಾಡುವುದಿಲ್ಲವೋ ಅವರು ಬಹಳ ಕಾಲ ತೆಗೆದುಕೊಳ್ಳುವರು. ಸಾಧನೆ ಮಾಡುವುದಕ್ಕೇ ನೀವು ಪ್ರಪಂಚವನ್ನು ತ್ಯಜಿಸಿರುವಿರಿ. ನೀವು ಯಾವಾಗಲೂ ಧ್ಯಾನ ಮಾಡುವುದಕ್ಕೆ ಸಾಧ್ಯವಾಗದೇ ಇರುವುದರಿಂದ ಕೆಲಸವನ್ನೂ ಕೂಡ ಶ್ರೀ ಗುರುದೇವರ ಸೇವೆ ಎಂಬ ಭಾವದಿಂದ ಮಾಡಬೇಕು. ನಿನಗೆ ತುಂಬಾ ಕಠಿಣ ಜೀವನ ಬೇಕಾಗಿಲ್ಲ. ನಿನಗೆ ಹೊಟ್ಟೆ ನೋವು, ಆಹಾರವಿಷಯದಲ್ಲಿ ಜೋಪಾನವಾಗಿರು. ಇದರಿಂದ ಪ್ರಾಣಹಾನಿ ಇಲ್ಲದೇ ಇದ್ದರೂ ತುಂಬಾ ನೋವು. * * *

ಒಂದು ದಿನ ಶಿಷ್ಯನೊಬ್ಬನು ಶ್ರೀಮಾತೆಯನ್ನು, "ತಾಯಿ, ಒಬ್ಬನಿಗೆ ಬ್ರಹ್ಮಜ್ಞಾನ ಹೇಗೆ ಪ್ರಾಪ್ತವಾಗುವುದು? ತಕ್ಷಣ ಬರುವುದೇ? ಅಥವಾ ಕ್ರಮೇಣ ಬರುವುದೆ?" ಎಂದು ಪ್ರಶ್ನಿಸಿದನು. ಶ್ರೀಮಾತೆ, "ಬ್ರಹ್ಮಸಾಕ್ಷಾತ್ಕಾರ ಮಾರ್ಗ ಅತಿ ಕಠಿಣ. ಶ್ರೀ ಗುರುದೇವರನ್ನು ಪ್ರಾರ್ಥಿಸು. ಸಕಾಲದಲ್ಲಿ ಅವರು ಬ್ರಹ್ಮಜ್ಞಾನವನ್ನು ಕರುಣಿಸುವರು"

ಎಂದರು. * * * *

ಕೋಲಪಾರದಲ್ಲಿ ಶಿಷ್ಯನೊಬ್ಬ ಶ್ರೀಮಾತೆಗೆ, "ತಾಯಿ; ಮನಸ್ಸು ತುಂಬಾ ಚಂಚಲವಾಗಿದೆ. ಅದನ್ನು ಏನು ಮಾಡಿದರೂ ನಿಗ್ರಹಿಸಲಾಗಲಿಲ್ಲ" ಎಂದನು. ಶ್ರೀಮಾತೆ, "ಗಾಳಿ ಹೇಗೆ ಮೋಡವನ್ನು ಚದುರಿಸಿ ಸೂರ್ಯ ಕಣ್ಣಿಗೆ ಕಾಣಿಸುವಂತೆ ಮಾಡುವುದೋ ಹಾಗೆ ಭಗವನ್ನಾಮ ಸಂಸಾರಮೋಡವನ್ನು ಚದುರಿಸುವುದು" ಎಂದರು.

ಅಂದು ಶ್ರೀಮಾತೆ, ತನ್ನ ಮಾನಸಿಕ ದುರ್ಬಲತೆಯನ್ನು ಹೇಳಿಕೊಂಡ ಮತ್ತೊಬ್ಬಶಿಷ್ಯನಿಗೆ, "ಕಾಮವನ್ನು ಸಂಪೂರ್ಣ ನಾಶಮಾಡಲು ಯಾರಿಗಾದರೂ ಸಾಧ್ಯವೇ? ದೇಹವಿರುವವರೆಗೆ ಸ್ವಲ್ಪವಾದರೂ ಇದ್ದೇ ಇರುವುದು. ಮಂತ್ರದ ಧೂಳನ್ನು ಎರಚಿ ಹಾವನ್ನು ಪಳಗಿಸುವಂತೆ ಆ ಅಲ್ಪ ಕಾಮವನ್ನು ನಿಗ್ರಹಿಸಬಹುದು" ಎಂದರು. * * *

ಶ್ರದ್ಧೆಯನ್ನು ಕುರಿತು ಒಮ್ಮೆ ಶ್ರೀಮಾತೆ, "ಶಾಸ್ತ್ರ ಓದಿದರೆ ಶ್ರದ್ಧೆ ದೊರಕುವುದೆ? ಹೆಚ್ಚು ಓದಿದರೆ ಭ್ರಾಂತಿಯಾಗುವುದು. ಒಬ್ಬ, ಶಾಸ್ತ್ರದಿಂದ ದೇವರೊಬ್ಬನೇ ಸತ್ಯ, ಪ್ರಪಂಚವೆಲ್ಲವೂ ಮಿಥ್ಯ ಎಂಬುದನ್ನು ತಿಳಿಯಬೇಕು. ನಾನು ನಿನಗೆ ಏನಾದರೂ ಸಾಮಾನು ತೆಗೆದುಕೊಂಡು ಬಾ ಎಂದು ಕಾಗದ ಬರೆದರೆ, ಎಷ್ಟುಕಾಲ ನೀನು ಆ ಕಾಗದವನ್ನಿಟ್ಟುಕೊಂಡಿರುವೆ? ನಿನಗೆ ಅದರಲ್ಲಿರುವ ವಿಷಯ ಗೊತ್ತಿಲ್ಲದೆ ಇರುವವರೆಗೆ. ಆದರ ವಿಷಯ ಗೊತ್ತಾದ ಮೇಲೆ ಕಾಗದದ ಅವಶ್ಯಕತೆ ಇಲ್ಲ. ಆ ಸಾಮಾನನ್ನು ತೆಗೆದುಕೊಂಡು ಬರುವೆ. ಸುಮ್ಮನೆ ಪತ್ರವನ್ನು ಹಗಲೂ ರಾತ್ರಿ ಓದುತ್ತಿದ್ದರೆ ಪ್ರಯೋಜನವೇನು? ಎನ್ನುತ್ತಿದ್ದರು ಶ್ರೀರಾಮಕೃಷ್ಣರು" ಎಂದರು. * * *

ಒಂದು ದಿನ ಮಾತನಾಡುವಾಗ ಶಿಷ್ಯ ಶ್ರೀಮಾತೆಗೆ, "ಪ್ರಪಂಚದಲ್ಲಿ ಏನನ್ನೂ ಸಾಧಿಸಲು ಸಾಧ್ಯವಿಲ್ಲ" ಎಂದನು. ಅದಕ್ಕೆ ಶ್ರೀಮಾತೆ, "ಮಗು, ಪ್ರಪಂಚ ಆಳವಾದ ಕೆಸರಿನಂತೆ. ಅದರಲ್ಲಿ ಒಂದು ಸಲ ಸಿಕ್ಕಿಕೊಂಡರೆ ಪಾರಾಗುವುದು ಬಹು ಕಷ್ಟ. ಬ್ರಹ್ಮಾದಿ ದೇವತೆಗಳೇ ಭ್ರಾಂತರಾಗುವರು. ಇನ್ನು ಮನುಷ್ಯರ ಪಾಡೇನು? ಭಗವನ್ನಾಮವನ್ನು ಜಪಿಸು. ಹಾಗೆ ಮಾಡಿದರೆ ಅವನು ಒಂದುದಿನ ನಿನ್ನ ಬಂಧನವನ್ನು ತುಂಡರಿಸುವನು. ಅವನೇ ಬಂಧನ ಬಿಡಿಸದೆ ಇದ್ದರೆ ಮುಕ್ತಿ ಸಾಧ್ಯವೆ? ದೇವರಲ್ಲಿ ಅಚಲ ಶ್ರದ್ಧೆ ಇರಲಿ. ಮಕ್ಕಳು ತಮ್ಮ ತಂದೆ

ಯನ್ನು ನೆಚ್ಚುವಂತೆ ದೇವರನ್ನು ನೆಚ್ಚು". * * *

ಜಯರಾಮವಟಿಯಲ್ಲಿ ಶಿಷ್ಯನೊಬ್ಬನು, "ತಾಯಿ, ನಾವು ಕಲ್ಪತರುವಿನಡಿ ಇರುವಾಗ ಏನನ್ನಾದರೂ ಬೇಡಬೇಕೆಂದು ಹೇಳುವರು. ಆದರೆ ನಾವು ನಿಮ್ಮ ಮಕ್ಕಳು. ಮಕ್ಕಳು ತಮ್ಮ ಯಾವ ಕೋರಿಕೆಯನ್ನು ತಾಯಿಯ ಹತ್ತಿರ ಪ್ರತ್ಯಕ್ಷವಾಗಿ ಹೇಳಿಕೊಳ್ಳಬೇಕಾಗಿದೆ? ಮಕ್ಕಳಿಗೆ ಯಾವುದು ಒಳ್ಳೆಯದೋ ಅದು ತಾಯಿಗೆ ಗೊತ್ತಿದೆ. ಯಾವುದು ಒಳ್ಳೆಯದೋ ಅದನ್ನು ತಾಯಿಯೇ ಕೊಡುವಳು. ಶ್ರೀ ರಾಮಕೃಷ್ಣರು ಹೇಳವಂತೆ, 'ತಾಯಿ ತನ್ನ ಮಕ್ಕಳ ಜೀರ್ಣಶಕ್ತಿಗೆ ತಕ್ಕಂತೆ ಅಡಿಗೆ ಮಾಡಿ ಬಡಿಸುವಳು.' "ಈಗ ಯಾವುದು ನಮಗೆ ಒಳ್ಳೆಯದೋ ಅದನ್ನು ದಯವಿಟ್ಟು ನನಗೆ ಅಪ್ಪಣೆಕೊಡಿಸಿ" ಎಂದು ಶಿಷ್ಯ ಬೇಡಿದನು. * * *

ಶ್ರೀಮಾತೆ:–ಮನುಷ್ಯನ ಬುದ್ಧಿ ಎಷ್ಟು ಅಲ್ಪ! ಅವನಿಗೆ ಬೇಕಾಗಿರುವುದು ಒಂದು, ಅವನು ಕೇಳುವುದು ಮತ್ತೊಂದು. ಶಿವನ ವಿಗ್ರಹವನ್ನು ಮಾಡಲು ಯತ್ನಿಸುವನು. ಆದರೆ ಅನೇಕವೇಳೆ ಅದು ಮಂಗನ ವಿಗ್ರಹವಾಗುವುದು. ಭಗವಂತನಡಿಯಲ್ಲಿ ನಮ್ಮ ಆಸೆಯನ್ನೆಲ್ಲಾ ಅರ್ಪಿಸುವುದು ಒಳ್ಳೆಯದು. ನಮಗೆ ಯಾವುದು ಶುಭವೋ ಅದನ್ನೆಲ್ಲಾ ಅವನು ಮಾಡುವನು. ಭಕ್ತಿ, ಅನಾಸಕ್ತಿಯನ್ನು ಬೇಕಾದರೆ ಬೇಡಬಹುದು. ಇದನ್ನು ಆಸೆ ಎಂದು ಕರೆಯಲಾಗುವುದಿಲ್ಲ. * *

ಒಂದು ದಿನ ಶ್ರೀಮಾತೆಗೆ ತಮ್ಮ ಭಕ್ತರಿಂದ ಹಲವು ಪತ್ರಗಳು ಬಂದುವು. ಸಂಜೆ ಶಿಷ್ಯರು ಅದನ್ನು ಅವರಿಗೆ ಓದಿ ಹೇಳಿದರು. ಆಗ ಶ್ರೀಮಾತೆ ಹೀಗೆಂದರು: "ನೋಡಿದೆಯಾ! ಹುಡುಗರು ಎಷ್ಟು ಬಗೆಯ ಆಸೆಗಳನ್ನು ವ್ಯಕ್ತಪಡಿಸಿರುವರು! ಕೆಲವರು, ನಾವು ಇಷ್ಟೊಂದು ಪ್ರಾರ್ಥನೆ, ಜಪ, ಮಾಡುತ್ತಿರುವೆವು. ಆದರೂ ಮುಂದುವರಿದಂತೆ ಕಾಣುತ್ತಿಲ್ಲ ಎನ್ನುವರು. ಕೆಲವರು ತಮ್ಮ ದುಃಖ, ತೊಂದರೆ, ಬಡತನ, ಇತರ ಅನಿವಾರ್ಯಗಳನ್ನು ಹೇಳಿಕೊಳ್ಳುವರು. ಈ ಕಥೆಯನ್ನು ನಾನಿನ್ನು ಕೇಳಲಾರೆ. ನಾನು ಶ್ರೀಗುರುದೇವರಿಗೆ, "ಈಗ ಮತ್ತು ಅನಂತರ ಯಾವಾಗಲೂ ಇವರನ್ನು ರಕ್ಷಿಸು" ಎಂದು ಬೇಡಿಕೊಳ್ಳುವೆ. ತಾಯಿಯಾದ ನಾನು ಮತ್ತೇನನ್ನು ಪ್ರಾರ್ಥಿಸಬೇಕು? ಭಗವಂತನೇ ಎಷ್ಟು ಜನಕ್ಕೆ ಬೇಕಾಗಿದೆ? ಆ ಶ್ರದ್ಧೆ ಎಲ್ಲಿದೆ? ತುಂಬಾ ಶ್ರದ್ಧೆ ಕಾತುರ

ನಟಿಸುವರು. ಆದರೆ ಸ್ವಲ್ಪ ಭೋಗ್ಯವಸ್ತು ಸಿಕ್ಕಿದರೆ ಧನ್ಯರಾಗುವರು. "ಓ! ದೇವರು ಎಷ್ಟು ದಯಾಪರ!" ಎನ್ನುವರು. ಕೆಲವರು ರಾಧೆಯ ಸಮಾಚಾರವನ್ನು ಎಲ್ಲಕ್ಕಿಂತ ಮೊದಲು ಕೇಳುವರು. ನನ್ನನ್ನು ಮೆಚ್ಚಿಸುವುದಕ್ಕೆ ರಾಧೆಯ ವಿಷಯ! ನಾನು ಕಣ್ಣು ಮುಚ್ಚಿದ ಮೇಲೆ ಅವಳನ್ನು ಯಾರೂ ಕಣ್ಣೆತ್ತಿಯೂ ನೋಡುವುದಿಲ್ಲ."

* * *

ಒಂದು ದಿನ ಶಿಷ್ಯನೊಬ್ಬ ಶ್ರೀಮಾತೆಯನ್ನು ಮುಕ್ತಿ, ಭಕ್ತಿ ವಿಷಯವಾಗಿ ಕೇಳಿದನು. ಶ್ರೀಮಾತೆ, "ಮುಕ್ತಿಯನ್ನು ದೇವರು ಯಾವ ಕ್ಷಣದಲ್ಲಿ ಬೇಕಾದರೂ ಕೊಡಬಲ್ಲ. ಆದರೆ ಭಕ್ತಿಯನ್ನು ಅಷ್ಟು ಸುಲಭವಾಗಿ ಕೊಡುವುದಿಲ್ಲ." ಈ ಮಾತನ್ನು ಹೇಳುವಾಗ ಮುಕ್ತಿ ಅವರ ಅಂಗೈಮೇಲಿನ ನೆಲ್ಲಿಕಾಯಿನಂತೆ ಕಾಣುತ್ತಿತ್ತು. ತಕ್ಷಣ ಬೇರೆ ಮಾತನ್ನು ಎತ್ತಿದರು.

* * *

ಒಂದು ದಿನ ಬೆಳಗ್ಗೆ ಜಯರಾಮವಟಿಯಲ್ಲಿ ಅವರ ಮನೆ ಅಂಗಳದಲ್ಲಿ ಹಸುವಿನ ಕರುವೊಂದು ಅರಚಿಕೊಳ್ಳುತ್ತಿತ್ತು. ತನ್ನ ತಾಯಿಯಿಂದ ಅದನ್ನು ಬೇರೆ ಕಟ್ಟಿದ್ದರು ಕರುವಿನ ಧ್ವನಿ ಕೇಳಿ, "ತಾಳು ಬಿಚ್ಚುತ್ತೇನೆ" ಎಂದು ಹೇಳಿ ಅದನ್ನು ಬಿಚ್ಚಿದರು. ಅದು ಹಾಲು ಕುಡಿಯುವಾಗ ನೋಡುತ್ತಿದ್ದ ಶ್ರೀಮಾತೆಯ ಮೊಗದಮೇಲೆ ಮಾತೃಪ್ರೇಮ ತಾಂಡವಾಡುತ್ತಿತ್ತು. ದಯೆಯೇ ರೂಪು ತಾಳಿದಂತೆ ಇದ್ದರು. ನಾವು ದೇವರಿಗಾಗಿ ಆ ಕರುವಿನಂತೆ ಅರಚ ಬಲ್ಲೆವೇ? ಆಗ ನಿಸ್ಸಂದೇಹವಾಗಿ ದೇವರು ನಮ್ಮ ಬಂಧನಗಳನ್ನೆಲ್ಲಾ ಕಳಚುವನು.

---

## ಕರ್ಮ ಮತ್ತು ಧ್ಯಾನ

ಸಂಭಾಷಣೆ, ರಾತ್ರಿ ಬಹಳ ಹೊತ್ತಿನವರೆಗೂ ನಡೆಯುತ್ತಿತ್ತು. ಒಬ್ಬ ಶಿಷ್ಯ ಶ್ರೀಮಾತೆಗೆ, "ನೀವು ನಿಮ್ಮ ಕರ್ತವ್ಯ ಮೊದಲುಮಾಡಿ. ನಂತರ ದೇವರು, ಇಚ್ಛಿಸುವುದನ್ನೆಲ್ಲಾ ನೆರವೇರಿಸುವನು, ಎಂದು ಕ– ಹೇಳುತ್ತಾರೆ!" ಎಂದನು.

* * *

ಶ್ರೀಮಾತೆ:– ಹೌದು. ನಿಮ್ಮ ಕರ್ತವ್ಯಗಳನ್ನೇನೋ ನೀವು ಮಾಡಬೇಕು. ಇದರಿಂದ ಮನಸ್ಸಿಗೆ ಒಳ್ಳೆಯದು. ಆದರೆ, ಜೊತೆಗೆ ಜಪಧ್ಯಾನ, ಪ್ರಾರ್ಥನೆಯನ್ನು ಮಾಡಬೇಕು. ಇವನ್ನು ಬೆಳಗ್ಗೆ ಸಾಯಂಕಾಲ

ವಾದರೂ ಮಾಡಬೇಕು. ಇವು ದೋಣಿಗೆ ಚುಕ್ಕಾಣಿಯಂತೆ. ಸಂಜೆ ಪ್ರಾರ್ಥನೆಗೆ ಕುಳಿತಾಗ ಬೆಳಗ್ಗೆ ಮಾಡಿದ ಒಳ್ಳೆಯ ಮತ್ತು ಕೆಟ್ಟ ಕೆಲಸ ಗಳನ್ನೆಲ್ಲಾ ಪರೀಕ್ಷಿಸಬಹುದು. ಅಂದಿನ ಮನಸ್ಸನ್ನು ಹಿಂದಿನ ದಿನ ದೊಂದಿಗೆ ಹೋಲಿಸಿ ನೋಡಬಹುದು. ಜಪ ಮಾಡುವಾಗ ಇಷ್ಟದೇವ ತೆಯ ಧ್ಯಾನ ಮಾಡಬೇಕು. ಧ್ಯಾನ ಮಾಡುವಾಗ ಮೊದಲು ಇಷ್ಟ ದೇವತೆಯ ಮೊಗವನ್ನು ಚಿಂತಿಸಬೇಕು. ನಂತರ ಪಾದದಿಂದ ಶಿರದ ವರೆಗೂ ದೇವತೆಯನ್ನು ಧ್ಯಾನಿಸಬೇಕು. ಕರ್ಮದೊಂದಿಗೆ ಬೆಳಗ್ಗೆ ಸಾಯಂಕಾಲ, ಪ್ರಾರ್ಥನೆ ಮಾಡದಿದ್ದರೆ, ನೀನು ಒಳ್ಳೆಯದನ್ನು ಮಾಡುತ್ತಿರುವೆಯೋ, ಕೆಟ್ಟದ್ದನ್ನು ಮಾಡುತ್ತಿರುವೆಯೋ ಹೇಗೆ ಗೊತ್ತಾ ಗುವುದು? * * *

ಶಿಷ್ಯ :– ಕರ್ಮದಿಂದ ಏನೂ ದೊರಕುವುದಿಲ್ಲ ; ಜಪ, ಧ್ಯಾನದಿಂದ ಮಾತ್ರ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಬಹುದೆಂದು ಕೆಲವರು ಹೇಳುವರು. * * * *

ಶ್ರೀಮಾತೆ:– ಯಾವುದರಿಂದ ಆತ್ಮೋನ್ನತಿ ಅಥವಾ ಅವನತಿ ಎಂದು ಅವರಿಗೆ ಹೇಗೆ ಗೊತ್ತಾಗುವುದು? ಕೆಲವು ದಿನ ಜಪ, ಧ್ಯಾನಮಾಡಿಬಿಟ್ಟರೆ ಎಲ್ಲಾ ಸಿಕ್ಕಿಬಿಡುವುದೇನು? ಮಹಾಮಾಯೆ ದಾರಿಯಲ್ಲಿರುವ ಆತಂಕ ಗಳನ್ನು ತೆಗೆಯುವವರೆಗೂ ಏನೂ ದೊರಕಲಾರದು. ಹೆಚ್ಚು ಪ್ರಾರ್ಥನೆ, ಧ್ಯಾನದಿಂದ ಒಬ್ಬ ಹುಚ್ಚನಾಗಿದ್ದುದನ್ನು ನೋಡಲಿಲ್ಲವೇ? ತಲೆಕೆಟ್ಟರೆ ಜೀವನ ನಿಷ್ಫಲವಾದಂತೆ. ಮನುಷ್ಯನ ಬುದ್ಧಿ ತುಂಬಾ ನಾಜೋಕು. ಅದು ಸ್ಕ್ರೂ ಮೊಳೆಯ ಅಂಚಿನಂತೆ. ಅದರಲ್ಲಿ ಒಂದು ಸುತ್ತು ಕೆಟ್ಟರೂ ಮನುಷ್ಯ ಹುಚ್ಚನಾಗುವನು. ಇಲ್ಲವೆ ಮಹಾಮಾಯೆಯ ಬಲೆಯಲ್ಲಿ ಬಿದ್ದು ತನ್ನ ಸಮಾನವಿಲ್ಲವೆಂದು ಭಾವಿಸುವನು. ತಾನು ಸರಿಯಾಗಿರುವೆನೆಂದು ತಿಳಿಯುವನು. ಆ ಮೊಳೆಯನ್ನೇ ಬೇರೆಕಡೆ ಬಿಗಿ ಪಡಿಸಿದರೆ ಸರಿಯಾದ ದಾರಿಯಲ್ಲಿರುವನು. ಶಾಂತಿ ಆನಂದ ಪಡೆ ಯುವನು. ಯಾವಾಗಲೂ ದೇವರನ್ನು ಮನನಮಾಡಿ ಸರಿಯಾದ ಬುದ್ಧಿಯನ್ನು ನೀಡೆಂದು ಪ್ರಾರ್ಥಿಸಬೇಕು. ದಿನವೆಲ್ಲ ಪ್ರಾರ್ಥನೆ ಜಪ ಎಷ್ಟು ಮಂದಿ ಮಾಡುವರು? ಮೊದಲು ಶ್ರದ್ಧೆಯಿಂದ ಬಹಳ ಕಾಲ ಮಾಡುವರು. ಕೆಲವು ದಿನಗಳಾದ ಮೇಲೆ ನ.... ಅಂತೆ ತಲೆ ಕೆಡು ವುದು. ತಮ್ಮ ಸಮಾನ ಇಲ್ಲವೆಂದು ಭಾವಿಸುವರು. ಹಲವು ವಸ್ತು

ಗಳನ್ನು ಆಲೋಚಿಸಿ ಅಶಾಂತರಾಗುವರು. ಸುಮ್ಮನೆ ಕೆಲಸಕ್ಕೆ ಬಾರದ ವಿಷಯವನ್ನೆಲ್ಲಾ ಕುರಿತು ಚಿಂತಿಸುವುದಕ್ಕಿಂತ ಕೆಲಸಮಾಡುವುದು ಒಳ್ಳೆಯದು. ಮನಸ್ಸಿಗೆ ಸ್ವಾತಂತ್ರ್ಯ ಸಿಕ್ಕಿದರೆ ಸ್ವೇಚ್ಛೆಯಾಗುವುದು. ನನ್ನ ನರೇಂದ್ರ (ಸ್ವಾಮಿ ವಿವೇಕಾನಂದ) ಇವನ್ನೆಲ್ಲಾ ಆಲೋಚಿಸಿಯೇ ಅನಾಸಕ್ತಿಯಿಂದ ಕರ್ಮಮಾಡಲು ಸಂಸ್ಥೆ ಸ್ಥಾಪಿಸಿದನು. (ನ-ಕುರಿತು ಮತ್ತೊಮ್ಮೆ) ಒಂದು ಸ್ಥಳದಲ್ಲಿ ಕುಳಿತುಕೊಂಡು ಅವನು ತನ್ನ ಮನಸ್ಸನ್ನು ಎಷ್ಟು ಅಶುದ್ಧಮಾಡಿಕೊಂಡಿರುವನು. ಅವನ ಖಯಾಲು, ಭ್ರಾಂತಿ ದಿನದಿನಕ್ಕೆ ಹೆಚ್ಚುತ್ತಿದೆ. ಮನೋಕ್ಷೋಭೆ ಎನ್ನುವನು. ಏತಕ್ಕೆ ಇಷ್ಟೊಂದು ಕ್ಷೋಭೆ ಇರಬೇಕು? ಇದುವರೆವಿಗೂ ಆದ ಅನುಭವ ಅವನಿಗೆ ಬುದ್ಧಿ ಕಲಿಸಬಾರದೆ? * * * *

ಶ್ರೀಮಾತೆಯ ಅಪ್ಪಣೆಯ ಮೇರೆ ಅವರ ಬಳಿ ಇದ್ದ ಭಕ್ತನೊಬ್ಬನು ಪೂಜೆ ಮುಂತಾದ ಕೆಲಸವನ್ನು ಮಾಡುತ್ತಿದ್ದನು. ಬೇಲೂರು ಮಠದಿಂದ ಕೆಲವು ಸನ್ಯಾಸಿಗಳು ತಪಸ್ಸಿಗೆ ಹೋಗುವರೆಂದು ಕೇಳಿದ ಮೇಲೆ ಆತನೂ ಕೂಡ ಶ್ರೀಮಾತೆಗೆ ಹೀಗೆಂದನು: "ಈ ಕೆಲಸಗಳೆಲ್ಲ ನನಗೆ ಒಳ್ಳೆಯದೆಂದು ಕಾಣುವುದಿಲ್ಲ. ನಾನೂ ತಪಸ್ಸು ಮಾಡಬೇಕು. ದಯವಿಟ್ಟು ಅಪ್ಪಣೆಕೊಡಿ". ಶ್ರೀಮಾತೆ, "ಏಕೆ ಮಗು, ನೀನು ಈಗ ನನ್ನ ಕೆಲಸ ಮಾಡುತ್ತಿರುವೆ. ಶ್ರೀಗುರುದೇವರ ಕೆಲಸದಲ್ಲಿ ತಲ್ಲೀನನಾಗಿರುವೆ. ತಪಸ್ಸಿಗಿಂತ ಇದು ಕಡಿಮೆಯೆ? ಈ ಕೆಲಸವನ್ನು ಏತಕ್ಕೆ ಬಿಡಬೇಕು? ಯಾವಾಗಲಾದರೂ ತಪಸ್ಸು ಮಾಡಬೇಕೆಂದು ಇಚ್ಛೆ ಬಲವಾದಾಗ ಒಂದು ತಿಂಗಳೋ ಎರಡು ತಿಂಗಳೋ ಅದಕ್ಕೆ ಹೋಗಬಹುದು" ಎಂದರು.

---

## ಜಪ

ಒಂದು ದಿನ ಭಕ್ತೆಯೊಬ್ಬಳು ಶ್ರೀಮಾತೆಯನ್ನು, "ಶ್ರೀ ಗುರುದೇವರ ಪೂಜೆ ಹೇಗೆ ಮಾಡಬೇಕು ಎಂಬುದನ್ನು ತಿಳಿಸಿ" ಎಂದಳು. "ನೀನು ಸಂಸಾರದಲ್ಲಿರುವೆ, ಪೂಜೆ ಮಾಡಲು ಸಾಧ್ಯವಿಲ್ಲ. ನಾನು ನಿನಗೆ ಉಪದೇಶ ಕೊಟ್ಟಿರುವೆ. ಅದನ್ನು ಜಪಿಸು. ಅದರಿಂದ ನಿನಗೆ ಎಲ್ಲ ದೊರಕುವುದು" ಎಂದರು. * * * *

"ದೃಢಭಕ್ತಿ ಇಲ್ಲದೆ ಸುಮ್ಮನೆ ದೇವರ ಹೆಸರನ್ನು ಹೇಳಿದರೆ ಏನು ಪ್ರಯೋಜನ"

ಶ್ರೀಮಾತೆ:– ನೀನು ನೀರಿಗೆ ಹಾರಿದರೂ, ಅಥವಾ ಯಾರಾದರೂ ನಿನ್ನನ್ನು ನೀರಿಗೆ ನೂಕಿದರೂ ಬಟ್ಟೆ ಒದ್ದೆಯಾಗುವುದು. ಅಲ್ಲವೆ? ನಿನ್ನ ಮನಸ್ಸು ಇನ್ನೂ ದೃಢವಾಗಿಲ್ಲ. ಪ್ರತಿದಿನ ಧ್ಯಾನ ಮಾಡು. ತದೇಕ ಧ್ಯಾನದಿಂದ ಮನಸ್ಸು ಏಕಾಗ್ರವಾಗುವುದು. ನಿತ್ಯಾನಿತ್ಯವಸ್ತುವನ್ನು ಯಾವಾಗಲೂ ವಿಮರ್ಶಿಸು. ಮನಸ್ಸುಯಾವುದಾದರೂ ವಿಷಯ ವಸ್ತುಕಡೆ ಹೋದರೆ ಅದರ ಅನಿತ್ಯತೆಯನ್ನು ಕುರಿತು ಆಲೋಚಿಸಿ ದೇವರ ಕಡೆಗೆ ಪುನಃ ಮನಸ್ಸು ತಿರುಗಿಸು. ಒಬ್ಬ ಮನಸ್ಯ ಮೀನು ಹಿಡಿಯುತ್ತಿದ್ದ. ಹತ್ತಿರ ಒಂದು ಮದುವೆ ಮೆರವಣಿಗೆ ವಾದ್ಯ ಸಮೇತ ಹೋಗುತ್ತಿತ್ತು. ಆದರೆ ಬೆಸ್ತನ ದೃಷ್ಟಿ ಗಾಳದ ಬೆಂಡಿನ ಮೇಲೆಯೇ ಇತ್ತು. ಸಾಧಕನ ಮನಸ್ಸು ಹಾಗಿರಬೇಕು. * * *

ಸನ್ಯಾಸಿ ಶಿಷ್ಯ:– ಸಾಧನೆಗೆ ಒಂದು ಸ್ಥಳ ಹುಡುಕಬೇಕೆಂದಿರುವೆನು. ಆದರೆ ನನ್ನ ಆರೋಗ್ಯ ಚೆನ್ನಾಗಿಲ್ಲ.

ಶ್ರೀಮಾತೆ:– ಸದ್ಯಕ್ಕೆ ಸ್ವಲ್ಪ ಕೆಲಸಮಾಡು. ಅನಂತರ ತಪಸ್ಸು ಮಾಡಬೇಕೆಂದು ಆಸೆಯಾದರೆ ಕೆಲಸವನ್ನು ಬಿಡುವೆಯಂತೆ.

ಶಿಷ್ಯ:– ನಾನು ಜಪ ಮಾಡುತ್ತೇನೆ. ಆದರೆ ಮನಸ್ಸನ್ನು ಏಕಾಗ್ರ ಮಾಡಲಾರೆ.

ಶ್ರೀಮಾತೆ:– ಜಪ ಮಾಡು. ಮನಸ್ಸು ಏಕಾಗ್ರವಾಗಲಿ, ಇಲ್ಲದೆ ಇರಲಿ, ಚಿಂತೆ ಇಲ್ಲ. ಪ್ರತಿದಿನ ನಿರ್ದಿಷ್ಟವೇಳೆ ಜಪ ಮಾಡುವುದೊಳ್ಳೆಯದು.

ಶಿಷ್ಯ:– ನಾನು ಇಷ್ಟು ಸಲ ಮಾಡಬೇಕೆಂದು ಮನಸ್ಸಿನಲ್ಲಿ ಇಟ್ಟುಕೊಂಡು ಜಪಮಾಡಲೆ?

ಶ್ರೀಮಾತೆ:–ನೀನು ಸಂಖ್ಯೆಯನ್ನೇ ಆಲೋಚಿಸುತ್ತಿದ್ದರೆ ಮನಸ್ಸು ಅದರ ಮೇಲೆಯೆ ನಿಲ್ಲುವುದು. ಸಂಖ್ಯೆಗೆ ಗಮನ ಕೊಡದೆ ಜಪಮಾಡು.

ಶಿಷ್ಯ:– ನಾನು ದೇವರ ನಾಮವನ್ನು ಉಚ್ಚರಿಸಿದರೆ ಮನಸ್ಸು ಏತಕ್ಕೆ ಅದರಲ್ಲೇ ತಲ್ಲೀನವಾಗುವುದಿಲ್ಲ?

ಶ್ರೀಮಾತೆ:– ಕ್ರಮೇಣ ಅದು ಸಿದ್ಧಿಸುವುದು. ಮನಸ್ಸು ಏಕಾಗ್ರವಾಗದೆ ಇದ್ದರೂ ಜಪ ಬಿಡಬೇಡ. ನಿನ್ನ ಕರ್ತವ್ಯಮಾಡು. ಜಪಮಾಡು

ವಾಗ ಗಾಳಿ ಇಲ್ಲದ ಒಂದು ಸ್ಥಳದಲ್ಲಿ ಇರುವ ಹಣತೆಯ ದೀಪದ ಕುಡಿಯಂತೆ ಮನಸ್ಸು ಇಷ್ಟ ದೇವತೆಯ ಮೇಲೆ ನೆಲಸಿರುವುದು. ಗಾಳಿ ಅದನ್ನು ಚಂಚಲವಾಗುವಂತೆ ಮಾಡುವುದು. ಇದರಂತೆಯೇ ನಮ್ಮ ಆಸೆ ಆಕಾಂಕ್ಷೆಗಳು ಮನಸ್ಸನ್ನು ಚದುರಿಸುವುವು. ಸರಿಯಾಗಿ ಮಂತ್ರವನ್ನು ಉಚ್ಚರಿಸದೇ ಇದ್ದರೂ ಏಕಾಗ್ರತೆ ಲಭಿಸುವುದಿಲ್ಲ. ಗುರು ಒಬ್ಬ ಸ್ತ್ರೀಗೆ, "ರುಕ್ಮಿಣೀನಾಥಾಯ" ಎಂದು ಉಚ್ಚರಿಸು ಎಂದು ಹೇಳಿದ. ಇಷ್ಟು ದೊಡ್ಡ ಪದ ಅವಳಿಗೆ ಉಚ್ಚರಿಸಲಾಗಲಿಲ್ಲ. ಅದಕ್ಕೆ ರುಕ್ಕು, ರುಕ್ಕು, ಎಂದು ಉಚ್ಚರಿಸತೊಡಗಿದಳು. ಇದರಿಂದ ಅವಳು ಸ್ವಲ್ಪದಿನ ಮುಂದುವರಿಯಲು ಸಾಧ್ಯವೇ ಆಗಲಿಲ್ಲ. ಆದರೆ ಕ್ರಮೇಣ ದೇವರದಯೆಯಿಂದ ಸರಿಯಾದ ಮಂತ್ರವನ್ನು ತಿಳಿದುಕೊಂಡಳು.

* * *

ಶ್ರೀಮಾತೆ ಜಗದಾಂಬಾ ಆಶ್ರಮದಲ್ಲಿದ್ದಾಗ ಒಬ್ಬ ಭಕ್ತನೊಂದಿಗೆ ಆದ ಸಂಭಾಷಣೆ ಇದು :

ಶಿಷ್ಯ :— ಒಬ್ಬ ಜಪಮಾಡುವುದಕ್ಕೆ ಮುಂಚೆ ಮುಖವನ್ನು ತೊಳೆಯಬೇಕೆ ?

ಶ್ರೀಮಾತೆ :— ಹೌದು. ಮನೆಯಲ್ಲಿರುವಾಗ ಇದನ್ನು ಮಾಡುವುದೊಳ್ಳೆಯದು. ಆದರೆ ದಾರಿಯಲ್ಲಿರುವಾಗ ಮನದಲ್ಲೇ ಹೇಳಿಕೊಳ್ಳಬಹುದು.

ಶಿಷ್ಯ :— ಆಗ ಬರೀ ದೇವರ ಹೆಸರನ್ನೇ ಹೇಳಬೇಕೊ ಅಥವಾ ಮಂತ್ರವನ್ನೊ ಉಚ್ಚರಿಸಬಹುದೆ ?

ಶ್ರೀಮಾತೆ :— ನೀನು ಮಂತ್ರವನ್ನು ಉಚ್ಚರಿಸಬಹುದು. ಮನಸ್ಸು ಏಕಾಗ್ರವಾದಾಗ ಭಗವನ್ನಾಮವನ್ನೊಮ್ಮೆ ಉಚ್ಚರಿಸುವುದು, ಹಾಗಿಲ್ಲದಾಗ ಲಕ್ಷಾಂತರ ವೇಳೆ ಉಚ್ಚರಿಸುವುದಕ್ಕಿಂತ ಮೇಲು. ದಿನವೆಲ್ಲ ದೇವರ ಹೆಸರನ್ನು ಉಚ್ಚರಿಸಬಹುದು. ಆದರೆ ಮನಸ್ಸು ಬೇರೆ ಕಡೆ ಇದ್ದರೆ ಅಷ್ಟು ಪ್ರಯೋಜನವಿಲ್ಲ. ಜಪಮಾಡುವಾಗ ಧ್ಯಾನ ಮಾಡಬೇಕು. ಆಗ ಮಾತ್ರ ಭಗವಂತನ ಕೃಪೆ ಪಡೆಯಬಹುದು.

ಶಿಷ್ಯ :— ನಾನು ಈಗ ಮಾಡುತ್ತಿರುವಂತೆ ಸಾಧನೆ ಮಾಡಿದರೆ ಸಾಕೆ? ಅಥವಾ ಇನ್ನೂ ಏನನ್ನಾದರೂ ಮಾಡಲೆ ?

ಶ್ರೀಮಾತೆ.— ನೀನು ಈಗ ಮಾಡುವಂತೆಯೇ ಮಾಡು. ಶ್ರೀರಾಮಕೃಷ್ಣರು ಆಗಲೆ ನಿನ್ನನ್ನು ತಮ್ಮವರೆಂದು ಸ್ವೀಕರಿಸಿರುವರು.

ಶಿಷ್ಯ:– ಎರಡು ಮೂರುದಿನ ಭಕ್ತಿಯಿಂದ ಪ್ರಾರ್ಥಿಸಿದರೆ ದೇವ ರನ್ನು ಪಡೆಯಬಹುದೆಂದು ಹೇಳುತ್ತಾರೆ. ನಾನು ಬಹಳ ದಿನದಿಂದ ಪ್ರಾರ್ಥಿಸುತ್ತಿರುವೆನು. ಆದರೂ ನನಗೆ ಏನೂ ದೊರೆತಿಲ್ಲವಲ್ಲ?

ಶ್ರೀ ಮಾತೆ:– ಮಗು, ಎಲ್ಲಾ ಸಕಾಲದಲ್ಲಿ ದೊರಕುವುದು. ಶ್ರೀರಾಮಕೃಷ್ಣರ ಮಾತು ಶಿವನ ಮಾತಿನಂತೆ ಸತ್ಯ. ಅವರಲ್ಲಿ ವಿಶ್ವಾಸ ವಿಡು. ಅವರನ್ನೇ ನಂಬು. ಅವರು ನಿನ್ನನ್ನು ನೋಡಿಕೊಳ್ಳುತ್ತಿರುವ ರೆಂದು ಭಾವಿಸಿದರೆ ಸಾಕು. ತಾಯಿ ತಂದೆ ಅಥವಾ ಇನ್ನು ಯಾವು ದಾದರೂ ಭಾವದಿಂದ ಅವರನ್ನು ಕರೆ.

ಶಿಷ್ಯ:– ನಿಮ್ಮ ಮಾತಿನಲ್ಲಿ ನನಗೆ ಅಚಲ ಶ್ರದ್ಧೆ ಇದೆ. * *

ಶಿಷ್ಯ:– ಮಾಲೆಯಿಂದ ಜಪಮಾಡುವಾಗ ಅದನ್ನು ಎಣಿಸಲಾರೆ. ಬೆರಳು ಚಲಿಸಿದರೆ ನಾಲಿಗೆ ಸುಮ್ಮನಾಗುವುದು. ನಾಲಿಗೆ ಮತ್ತು ಕೈ ಚಲಿಸಿದರೆ ಮನಸ್ಸು ಏಕಾಗ್ರವಾಗುವುದಿಲ್ಲ.

ಶ್ರೀಮಾತೆ:– ಕ್ರಮೇಣ ನಿನ್ನ ಬೆರಳು ನಾಲಿಗೆ ಸುಮ್ಮನಿದ್ದು, ಮನಸ್ಸು ದೇವರನ್ನು ಕುರಿತು ಯೋಚಿಸುವುದು. * * *

ಒಮ್ಮೆ ಬೆರಳಲ್ಲಿ ಜಪಮಾಡವುದನ್ನು ಭಕ್ತ ಮರೆತನು. ಶ್ರೀಮಾತೆಯ ಶಿಷ್ಯರೊಬ್ಬರಿಗೆ ಶ್ರೀಮಾತೆಗೆ ತಿಳಿಸೆಂದು ಪತ್ರ ಬರೆದಿದ್ದನು. ಇದಕ್ಕೆ ಶ್ರೀಮಾತೆ, "ಅದಕ್ಕೇನು? ಅದನ್ನು ಹೇಗೆ ಬೇಕಾದರೂ ಮಾಡ ಬಹುದು. ಇದರ ಗುರಿ ಮನಸ್ಸನ್ನು ದೇವರ ಕಡೆಗೆ ತಿರುಗಿಸುವುದು" ಎಂದರು. * * * * *

ಧ್ಯಾನ ಜಪವನ್ನು ಕುರಿತು ಶ್ರೀಮಾತೆ ಶಿಷ್ಯನೊಬ್ಬನಿಗೆ ಹೀಗೆ ಹೇಳಿ ದರು: "ಇದಕ್ಕೆಲ್ಲಾ ಒಂದು ನಿರ್ದಿಷ್ಟ ಕಾಲವನ್ನು ಇಟ್ಟುಕೊಳುವುದು ಒಳ್ಳೆಯದು. ಯಾವಾಗ ಸರಿಯಾದ ಕಾಲ ಬರುವುದೋ ಹೇಳಲಾಗು ವುದಿಲ್ಲ. ಅದು ಇದ್ದಕ್ಕಿದ್ದಂತೆಯೇ ಬರುವುದು. ಅದರ ಸೂಚನೆಯೇ ಮುಂಚೆ ಗೊತ್ತಾಗುವುದಿಲ್ಲ. ಎಷ್ಟೇ ಕರ್ತವ್ಯಗಳಿದ್ದರೂ ಇವನ್ನು ನಿರ್ದಿಷ್ಟ ಕಾಲದಲ್ಲಿ ಮಾಡಬೇಕು."

ಶಿಷ್ಯ:– ಕೆಲವು ವೇಳೆ ಅನಾರೋಗ್ಯ, ಕೆಲವು ವೇಳೆ ಕೆಲಸದ ಅವಾಂತರವಿರುವುದು. ಅದಕ್ಕೆ ಸರಿಯಾದ ಕಾಲದಲ್ಲಿ ಅದನ್ನು ಮಾಡು ವುದು ಯಾವಾಗಲೂ ಸಾಧ್ಯವಿಲ್ಲ.

ಶ್ರೀಮಾತೆ:– ಆರೋಗ್ಯದ ಮೇಲೆ ನಮಗೆ ಅಧಿಕಾರವಿಲ್ಲ. ಆದರೆ

ಬಿಡುವಿಲ್ಲದ ಕೆಲಸದಲ್ಲಿಯು ಮಧ್ಯೆಮಧ್ಯೆ ದೇವರನ್ನು ಮನನಮಾಡಿ, ಮನದಲ್ಲೇ ನಮಿಸಬಹುದು.

ಶಿಷ್ಯ :– ಶ್ರೇಷ್ಠಕಾಲ ಯಾವುದು ?

ಶ್ರೀಮಾತೆ :– ದೇವರ ಪ್ರಾರ್ಥನೆಗೆ ಬೆಳಗ್ಗೆ ಸಾಯಂಕಾಲ ಶ್ರೇಷ್ಠ. ಕತ್ತಲೆ ಕಳೆದು ಹಗಲಾಗುವುದು, ಹಗಲು ಕಳೆದು ಕತ್ತಲಾಗುವುದು. ಆ ಸಮಯ ಅತಿ ಶ್ರೇಷ್ಠ. ಆಗ ಮನಸ್ಸು ಶಾಂತವಾಗುವುದು.

ಮಾನಸಿಕ ದುರ್ಬಲತೆಯನ್ನು ಕುರಿತು ಶ್ರೀಮಾತೆ ಶಿಷ್ಯನಿಗೆ, "ಮಗು, ಇದು ಪ್ರಕೃತಿ ನಿಯಮ. ಪೂರ್ಣಿಮೆ, ಅಮಾವಾಸ್ಯೆಗಳನ್ನು ನೋಡಿಲ್ಲವೆ? ಅದರಂತೆಯೇ ಮನಸ್ಸಿನಲ್ಲಿ ಕೆಲವು ವೇಳೆ ಹೀನ ಗುಣಗಳು ಮತ್ತೆ ಕೆಲವುವೇಳೆ ಸುಗುಣಗಳು ಇರುವುವು" ಎಂದರು.

ಶಿಷ್ಯನೊಬ್ಬ ಶ್ರೀಮಾತೆಯವರನ್ನು ರೈಲು ಅಥವಾ ಸ್ಟೀಮರಿನಲ್ಲಿ ಹೋಗುತ್ತಿರುವಾಗ ಹೇಗೆ ಜಪ ಮಾಡಬೇಕೆಂದು ಕೇಳಿದನು. ಶ್ರೀಮಾತೆ, "ಮನದಲ್ಲೇ ಮಂತ್ರವನ್ನು ಉಚ್ಚರಿಸು. ಕ್ರಮೇಣ ನಿನ್ನ ನಾಲಗೆ, ಬೆರಳು ನಿಲ್ಲುವುವು. ಮನಸ್ಸು ಮಾತ್ರ ಕೆಲಸ ಮಾಡುವುದು. ಕೊನೆಗೆ ಮನಸ್ಸೇ ಗುರುವಾಗುವುದು" ಎಂದರು. * *

ಒಂದುಹಬ್ಬದ ದಿನ ಪೈಲ್ವಾನನೊಬ್ಬನು ಹಲವು ಕಸರತ್ತುಗಳನ್ನು ಪ್ರದರ್ಶಿಸುತ್ತಿದ್ದನು. ಅದರಲ್ಲಿ ಒಂದು ತನ್ನ ಎದೆಯಮೇಲಿದ್ದ ಕಲ್ಲನ್ನು ಒಡೆಯುವುದು. ಅದನ್ನು ಒಡೆಯುವಾಗ ಶ್ರೀಮಾತೆ, "ದೇವರೇ ಕಾಪಾಡು, ಕಾಪಾಡು" ಎಂದು ಪ್ರಾರ್ಥಿಸುತ್ತಿದ್ದರು. ಪ್ರದರ್ಶನ ಆದಮೇಲೆ, "ಮಗು, ಅವನಿಗೆ ಮಂತ್ರ ಗಿಂತ್ರ ಏನಾದರೂ ಗೊತ್ತಿದೆಯೆ?" ಎಂದು ಕೇಳಿದರು.

ಶಿಷ್ಯ :– ಇಲ್ಲ ತಾಯಿ. ಅದೇನೂ ಇಲ್ಲ. ಇದೆಲ್ಲ ಅಭ್ಯಾಸದ ಫಲ. ಅಮೇರಿಕಾದೇಶದಲ್ಲಿ ಒಬ್ಬನು ತನ್ನ ಕರುವನ್ನು ಮೇಯಿಸುವುದಕ್ಕೆ ಪ್ರತಿದಿನವೂ ಕೈಯಲ್ಲಿ ಹೊತ್ತುಕೊಂಡು ಹೋಗುತ್ತಿದ್ದನಂತೆ. ಅದು ಒಂದು ಎತ್ತಾಗುವವರೆಗೂ ಹೀಗೆ ಮಾಡುತ್ತಿದ್ದನು. ಅದು ಬೆಳೆದು ದೊಡ್ಡ ಎತ್ತು ಆದಮೇಲೂ ಅದನ್ನು ಕರುವಾಗಿದ್ದಾಗ ಹೇಗೆ ಹೊತ್ತುಕೊಂಡು ಹೋಗುತ್ತಿದ್ದನೋ ಹಾಗೆಯೇ ಹೊತ್ತುಕೊಂಡು ಹೋಗುತ್ತಿದ್ದನು. ಇದನ್ನೇ ಎಲ್ಲರಿಗೂ ತೋರಿಸುತ್ತಿದ್ದ. ಅದೆಲ್ಲ ಬಿಡದೆ ಮಾಡಿದ ಅಭ್ಯಾಸದ ಪರಿಣಾಮ.

ಶ್ರೀಮಾತೆ–ಹೌದು, ನಿಜ: ನೋಡು ಅಭ್ಯಾಸದ ಫಲವನ್ನು. ಇದರಂತೆಯೇ ಜಪದಿಂದ ಭಗವಂತನನ್ನು ಪಡೆಯಬಹುದು.

---

## ಭಗವತ್ಕೃಪೆ

ಶ್ರೀರಾಮಕೃಷ್ಣ ಸಂಘದ ಸನ್ಯಾಸಿಯೊಬ್ಬರು ಕಾಶಿಯ ಮಣಿಕರ್ಣಿಕಾ ಘಾಟಿನಲ್ಲಿ ಕಠಿಣ ತಪಸ್ಸನ್ನು ಮಾಡುತ್ತಿದ್ದರು. ಶ್ರೀಮಾತೆಯ ಶಿಷ್ಯರೊಬ್ಬರು ಕಲ್ಕತ್ತೆಗೆ ಹೋಗುತ್ತಿದ್ದಾಗ ಅವರು, "ದಯವಿಟ್ಟು ಶ್ರೀಮಾತೆಯನ್ನು ಭಗವಂತನ ದಯೆ ಎಂದು ಲಭಿಸುವುದೆಂಬುದನ್ನು ಕೇಳಿ" ಎಂದು ಹೇಳಿಕಳುಹಿಸಿದರು. ಶಿಷ್ಯ ಇದನ್ನು ಶ್ರೀಮಾತೆಗೆ ತಿಳಿಸಿದಾಗ ಗಂಭೀರವಾಗಿ ಶ್ರೀಮಾತೆ, "ಅವನಿಗೆ ಹೀಗೆ ಬರೆ. ಒಬ್ಬ ತಪಸ್ಸು ಮಾಡುತ್ತಿರುವನು ಎಂದು ತಿಳಿದು ಭಗವಂತನ ದಯೆ ಇಳಿದು ಬರುವುದಿಲ್ಲ. ಹಿಂದಿನ ಕಾಲದಲ್ಲಿ ತಲೆಕೆಳಗಾಗಿ ಬೆಂಕಿಯ ಮಧ್ಯೆ ನಿಂತು ಸಾವಿರಾರು ವರುಷ ಋಷಿಗಳು ತಪಸ್ಸು ಮಾಡಿದರು. ಆದರೂ ಭಗವಂತನ ಕೃಪೆ ದೊರಕಿದ್ದು ಎಲ್ಲೋ ಕೆಲವರಿಗೆ ಮಾತ್ರ" ಎಂದರು.

* * * *

ಶಿಷ್ಯ:–ತಾಯಿ, ನಾನು ಎಷ್ಟೋ ತಪಸ್ಸು, ಧ್ಯಾನ, ಮಾಡಿರುವೆ. ಆದರೆ ಏನೂ ಲಭಿಸಿಲ್ಲ.

ಶ್ರೀಮಾತೆ:– ದೇವರು ಸಂತೆಯಲ್ಲಿ ಕೊಳ್ಳುವ ಮೀನು ಅಥವಾ ತರಕಾರಿಯಂತೆ ಅಲ್ಲ. * * *

ಶಿಷ್ಯ:–(ಉತ್ಸಾಹದಿಂದ) ನಾನು ಪದೇ ಪದೇ ನಿಮ್ಮ ಬಳಿಗೆ ಬರುತ್ತಿರುವೆನು. ನಿಮ್ಮ ಆಶೀರ್ವಾದವೂ ದೊರಕಿದೆ. ಆದರೆ ನನಗೆ ಯಾವ ಆಧ್ಯಾತ್ಮಿಕ ಅನುಭವವೂ ದೊರಕಲಿಲ್ಲ. ನಾನು ಹಿಂದೆ ಇದ್ದಂತೆಯೇ ಇರುವೆನು.

ಶ್ರೀಮಾತೆ:– ಮಗು, ನೀನು ಮಲಗಿರುವಾಗ ನಿನ್ನನ್ನು ಹಾಸಿಗೆ ಸಮೇತ ಬೇರೊಂದು ಕಡೆಗೆ ಇಟ್ಟರೆ, ನಿನಗೆ ಎದ್ದ ತಕ್ಷಣ ಬೇರೆಸ್ಥಳದಲ್ಲಿರುವೆ ಎಂದು ಗೊತ್ತಾಗುವುದೆ? ಇಲ್ಲ. ನಿದ್ರೆಯ ಅಮಲಿನಿಂದ ಚೆನ್ನಾಗಿ ಪಾರಾದ ಮೇಲೆ ಮಾತ್ರ ಅದು ಸಾಧ್ಯ. * * *

ಶಿಷ್ಯ:–(ಜಯರಾಮವಟಿಯಲ್ಲಿ) ತಾಯಿ, ದೇವರನ್ನು ಹೇಗೆ

ಸಾಧಿಸುವುದು? ಪೂಜೆ, ಜಪ, ಧ್ಯಾನದಿಂದ ಸಹಾಯವಾಗುವುದೆ?

ಶ್ರೀಮಾತೆ:— ಇವುಗಳಾವುವೂ ಸಹಾಯಕ್ಕೆ ಬರುವುದಿಲ್ಲ.

ಶಿಷ್ಯ:— ಹಾಗಾದರೆ ಭಗವದ್ದರ್ಶನ ಲಭಿಸುವುದು ಹೇಗೆ?

ಶ್ರೀಮಾತೆ:— ಅವನ ಕೃಪೆಯಿಂದ ಮಾತ್ರ ಸಾಧ್ಯ. ಆದರೆ ಒಬ್ಬ ಧ್ಯಾನ ಜಪ ಮಾಡಬೇಕು. ಇದು ಮನಸ್ಸನ್ನು ಶುದ್ಧಿ ಮಾಡುವುದು. ಪೂಜೆ ಮುಂತಾದ ಸಾಧನೆ ಮಾಡಬೇಕು. ಹೂವನ್ನು ಮುಟ್ಟಿದಾಗ ಅದರ ಪರಿಮಳ ಗೊತ್ತಾಗುವಂತೆ ಭಗವಂತನನ್ನೇ ಸದಾ ಚಿಂತಿಸುತ್ತಿದ್ದರೆ ಆಧ್ಯಾತ್ಮಿಕ ಜೀವನ ಜಾಗೃತವಾಗುವುದು. ಆಸೆಯಿಂದ ಪಾರಾದರೆ ಈಕ್ಷಣ ಅವನನ್ನು ಪಡೆಯಬಹುದು. * * *

೧೯೦೧ ರಲ್ಲಿ ಸನ್ಯಾಸಿ ಶಿಷ್ಯನೊಬ್ಬನಿಗೆ ಸಾಧನೆ ವಿಷಯದಲ್ಲಿ ಹೀಗೆ ಹೇಳಿದರು: “ಬೆಳಗ್ಗೆ ಸಂಜೆ, ಧ್ಯಾನಕ್ಕೆ ಕುಳಿತುಕೊ. ಮನಸ್ಸು ಶಾಂತ ವಾಗಿರಲಿ. ಪ್ರಾರ್ಥನೆ ಧ್ಯಾನ ಮಾಡು. ಹಾಗೆ ಮಾಡುವುದು ಬಹಳ ಕಷ್ಟ. ಗುದ್ದಲಿಯಿಂದ ನೆಲ ಅಗೆಯುವುದು ಸುಲಭ. (ಶ್ರೀರಾಮಕೃಷ್ಣರ ಭಾವಚಿತ್ರವನ್ನು ನೋಡಿ) ಅವರ ಅನುಗ್ರಹವಿಲ್ಲದೆ ಏನೂ ಲಭಿಸ ಲಾರದು.”

ಶಿಷ್ಯ:— ಆಶ್ರಮದ ಕೆಲಸಗಳ ಗಲಾಟೆಯಲ್ಲಿ ಧ್ಯಾನ, ಪ್ರಾರ್ಥನೆ ಸರಿಯಾಗಿ ಮಾಡಲು ಆಗುವುದಿಲ್ಲ.

ಶ್ರೀಮಾತೆ:— ಈ ಕೆಲಸವೆಲ್ಲ ಯಾರದು? ಇದೆಲ್ಲ ಅವರದು. ಕ್ರಮೇಣ ನಿನ್ನ ಮನಸ್ಸೇ ಗುರುವಾಗಿ ಏನು ಮಾಡಬೇಕೆಂಬುದನ್ನು ಹೇಳುವುದು. * * * * *

ಒಂದು ದಿನ ಶ್ರೀಮಾತೆ ಹೀಗೆಂದರು: “ನಾವು ಎಷ್ಟು ಜಪ ಮಾಡಿರುವೆವು; ತಪಮಾಡಿರುವೆವು. ಆದರೆ ಇವುಗಳಾವುದರಿಂದಲೂ ಪ್ರಯೋಜನವಿಲ್ಲ. ಮಹಾಮಾಯೆ ಮಾರ್ಗವನ್ನು ತೋರದೆ ಇದ್ದರೆ ಮುಕ್ತಿ ಹೇಗೆ ಸಾಧ್ಯ? ಮಾನವ, ದೇವರಲ್ಲಿ ಶರಣಾಗು, ದೇವರಲ್ಲಿ ಶರಣಾಗು. ಆಗ ಮಾತ್ರ ಮಹಾಮಾಯೆ ಕೃಪೆತಾಳಿ ದಾರಿ ತೋರು ವಳು”. ಅನಂತರ ಶ್ರೀರಾಮಕೃಷ್ಣರು ಕಮಾರಪುಕುರದಲ್ಲಿದ್ದಾಗ ನಡೆದ ಒಂದು ಸಂಗತಿ ಹೇಳಿದರು: “ಜ್ಯೇಷ್ಠಮಾಸ. ಸಂಜೆ ದೊಡ್ಡ ಮಳೆ ಬಂತು. ಹೊಲ ಗದ್ದೆಗಳೆಲ್ಲ ನೀರಿನಿಂದ ತುಂಬಿದ್ದುವು. ಶ್ರೀರಾಮ ಕೃಷ್ಣರು ನೀರಿನಲ್ಲಿ ನಡೆದುಕೊಂಡು ಕಾಡಿನಕಡೆ ಹೋಗುತ್ತಿದ್ದರು.

ಹಲವು ಮೀನುಗಳು ಅಲ್ಲಿದ್ದುವು. ಜನರು ಕಲ್ಲಿನಿಂದ ಹೊಡೆದು ಕೆಲವನ್ನು ಕೊಲ್ಲುತ್ತಿದ್ದರು. ಒಂದು ಶ್ರೀರಾಮಕೃಷ್ಣರ ಪಾದಗಳಡಿ ಸಂಚರಿಸುತ್ತಿತ್ತು. ಶ್ರೀರಾಮಕೃಷ್ಣರು, 'ಆ ಮೀನನ್ನು ಕೊಲ್ಲಬೇಡಿ. ನನ್ನಲ್ಲಿ ಶರಣಾಗಿದೆ. ಇದನ್ನು ಯಾರಾದರು ಹಲದಾರಪುಕುರದ ಕೆರೆಯಲ್ಲಿ ಬಿಡುವಿರಾ?' ಎಂದರು. ಕೊನೆಗೆ ಅವರೇ ಆ ಮೀನನ್ನು ತೆಗೆದುಕೊಂಡು ಕೆರೆಗೆ ಬಿಟ್ಟರು. ಮನೆಗೆ ಹಿಂತಿರುಗಿ ಬಂದು ಈ ಸಂಗತಿ ಹೇಳಿ, "ಹೀಗೆ ದೇವರಲ್ಲಿ ಶರಣಾದರೆ ದೇವರು ಅವನನ್ನು ರಕ್ಷಿಸುವನು".

* * * * *

ಒಬ್ಬ ಸನ್ಯಾಸಿ ಶಿಷ್ಯ ಶ್ರೀಮಾತೆಗೆ ತುಂಬಾ ನಿರಾಸೆಯಿಂದ ಕಾಗದ ಬರೆದನು. ಕಾಗದದ ವಿಷಯವನ್ನು ಕೇಳಿ ಆದಮೇಲೆ ಧೃಢ ಗಂಭೀರ ವಾಣಿಯಲ್ಲಿ "ಅದು ಹೇಗೆ ಸಾಧ್ಯ? ಶ್ರೀಗುರುದೇವರ ಹೆಸರು ಕೆಲಸಕ್ಕೆ ಬಾರದುದೆ? ಯಾರು ಇಲ್ಲಿಗೆ ಬಂದು ಅವರನ್ನು ಕುರಿತು ಯೋಚಿಸುತ್ತಾರೆಯೋ ಅವರು ಒಂದಲ್ಲ ಒಂದು ದಿನ ತಮ್ಮ ಇಷ್ಟ ದೈವವನ್ನು ನೋಡಿಯೇ ನೋಡುತ್ತಾರೆ. ಬದುಕಿರುವ ಕಾಲದಲ್ಲಿ ಅದು ಸಾಧ್ಯವಿಲ್ಲದೇ ಇದ್ದರೂ ಅಂತ್ಯಕಾಲದಲ್ಲಾದರೂ ಅವರು ಅವನನ್ನು ನೋಡುವರು" ಎಂದರು.

---

## ತ್ಯಾಗ ಮತ್ತು ಪರಿಶುದ್ಧ ಜೀವನ

ಮಾನಸ ಎಂಬ ಒಬ್ಬ ತರುಣ ಶ್ರೀಮಾತೆಯವರಿಂದ ಉಪದೇಶ ಮತ್ತು ಸನ್ಯಾಸ ಸ್ವೀಕರಿಸಬೇಕೆಂದು ಬಂದನು. ಶ್ರೀಮಾತೆ ಸಂತೋಷದಿಂದ ಅವನ ಬಯಕೆಯನ್ನು ನೆರವೇರಿಸಿದರು. ಇದರಿಂದ ಅವನಿಗೆ ಪರಮಾನಂದವಾಯಿತು. ಸಂಜೆ ಕಾಳಿ ಎಂಬ ಚಿಕ್ಕಪ್ಪನ ಮನೆಯಲ್ಲಿ ಜಗನ್ಮಾತೆಯ ಹಾಡುಗಳನ್ನು ಹೇಳುತ್ತಿದ್ದ. ಶ್ರೀಮಾತೆ ಹಾಡನ್ನು ತುಂಬಾ ಮೆಚ್ಚಿದರು. ರಾಧಾ, ಮಕು, ನಳಿನಿ – ಮುಂತಾದ ಅವರ ತಮ್ಮಂದಿರ ಮಕ್ಕಳು ಮತ್ತು ಕೆಲವು ಭಕ್ತರು ಅಲ್ಲಿದ್ದರು. ಅವರ ಸೋದರ ಸೊಸೆ, "ಈ ಹುಡುಗನನ್ನು ಶ್ರೀಮಾತೆ ಸನ್ಯಾಸಿ ಮಾಡಿರುವರು. ಆದೇನೊೀಸರಿ. ಆದರೆ ನೋಡಿ, ನಮ್ಮ ಅತ್ತೆ ಮಾಡಿರುವುದನ್ನು! ಇಂತಹ ಒಳ್ಳೆಯ ಹುಡುಗರಿಗೆ ಸನ್ಯಾಸ ಕೊಡುವರು. ತಂದೆ ತಾಯಿಗಳು ಎಷ್ಟೋ

ಕಷ್ಟಪಟ್ಟು ಇವರನ್ನು ಸಾಕಿ ಸಲಹಿರುವರು. ಅವರ ಭವಿಷ್ಯವೆಲ್ಲ ಈ ಮಕ್ಕಳ ಮೇಲೆ ನಿಂತಿರುವುದು. ಯಾವ ಯಾವ ಸವಿಕನಸನ್ನು ಇವರು ಕಟ್ಟಿ ಕೊಂಡಿದ್ದರೊ! ಅವೆಲ್ಲ ಈಗ ಭಗ್ನವಾದವು. ಈ ತರುಣ ಈಗ ಏನು ಮಾಡುವನು? ಹೃಷೀಕೇಶಕ್ಕೆ ಹೋಗಿ ಭಿಕ್ಷೆ ಬೇಡುವನು, ಇಲ್ಲವೆ ಆಸ್ಪತ್ರೆಗೆ ಹೋಗಿ ರೋಗಿಗಳ ಕಸ ಬಳಿಯುವನು. ಏತಕ್ಕೆ? ಮದುವೆ ಯಾಗಿ ಸದ್ಗೃಹಸ್ಥನಾಗಿರುವುದೂ ಧಾರ್ಮಿಕ ಜೀವನವೆ! ' ಅತ್ತೆ ನೀನು ಹೀಗೆ ಮಾಡುತ್ತಿದ್ದರೆ ಮಹಾ ಮಾಯೆಗೆ ಕೋಪಬರುವುದು. ಸನ್ಯಾಸಿ ಗಳಾಗಬೇಕೆಂದು ಅವರಿಗೆ ಇಚ್ಛೆಇದ್ದರೆ ಅವರೇ ಬೇಕಾದರೆ ಆಗಲಿ. ನೀವೇಕೆ ಅವರು ಸನ್ಯಾಸಿಗಳಾಗಲು ಕಾರಣರಾಗಬೇಕು?" ಎಂದಳು.

ಶ್ರೀಮಾತೆ:- ಮಕು, ನೋಡು, ಇವರೆಲ್ಲ ದೇವರ ಮಕ್ಕಳು. ಮೂಸಿನೋಡದ ಹೂವಿನಂತೆ ಇವರು ಪರಿಶುದ್ಧರಾಗಿ ಬಾಳುವರು. ಸಂಸಾರದ ಸುಖದ ಅನುಭವ ನಿನಗೆ ಆಗಲೇ ಗೊತ್ತಿದೆ. ಇಷ್ಟು ದಿನ ನೀನು ಏನು ನನ್ನಿಂದ ಕಲಿತೆ? ಸಂಸಾರದ ಮೇಲೆ ಏತಕ್ಕೆ ಇಷ್ಟೊಂದು ಆಸಕ್ತಿ. ಏತಕ್ಕೆ ಇಷ್ಟೊಂದು ಮೃಗೀಯ ಸ್ವಭಾವ! ಇದರಿಂದ ನಿನಗೆ ಸಿಕ್ಕುವ ಸುಖ ಎಂತಹುದು? ಪರಿಶುದ್ಧ ಜೀವನವನ್ನು ಕನಸಿನಲ್ಲಿಯೂ ಕಲ್ಪಿಸಿಕೊಳ್ಳಲಾರೆಯ? ಈವಾಗಲಾದರೂ ನಿನ್ನ ಗಂಡ ನೊಂದಿಗೆ ಅಣ್ಣ ತಂಗಿಯರಂತೆ ಇರಲಾರೆಯ? ಹಂದಿಯಂತೆ ಏಕೆ ಬಾಳ ಬೇಕೆಂದು ಇಚ್ಛಿಸುವೆ? ಪ್ರಪಂಚದ ದುಃಖ ನನ್ನ ಮೂಳೆಮೂಳೆಗೆ ತಾಕಿ ದಹಿಸುತ್ತಿದೆ.

ಅಲ್ಲಿದ್ದವರೆಲ್ಲ ಈ ಮಾತನ್ನು ಕೇಳಿ ಪರವಶರಾದರು. "ಮದುವೆ ಯಾಗದೆ ಪರಿಶುದ್ಧ ಜೀವನ ನಡೆಸುವ ಮನುಷ್ಯ, ದೇವರನ್ನು ಪ್ರಾರ್ಥಿಸಲಿ, ಬಿಡಲಿ, ಅವನೆಡೆಗೆ ಬೇಗ ಹೋಗುವನು. ಉಳಿದವರ ಕೈಕಾಲು ಕಟ್ಟಲ್ಪಟ್ಟಿದೆ. ಎಷ್ಟೇ ಪ್ರಯತ್ನಪಟ್ಟರೂ ದೇವರನ್ನು ಕುರಿತು ಯೋಚಿಸುವುದು ಕಷ್ಟ" ಎಂದರು.

ಒಂದು ದಿನ ಸನ್ಯಾಸಿ ಶಿಷ್ಯನ ತಾಯಿಯೊಬ್ಬಳು ಶ್ರೀಮಾತೆಗೆ, "ಸನ್ಯಾಸಿ ಮನೆಗೆಹೋಗುವಂತೆ ಮಾಡಿ" ಎಂದಳು. ಅದಕ್ಕೆ ಶ್ರೀಮಾತೆ, "ಸನ್ಯಾಸಿಯ ತಾಯಿಯಾಗುವುದು ಬಹಳ ಅಪರೂಪ ಭಾಗ್ಯ. ಒಂದು ಕಂಚಿನ ಪಾತ್ರೆಯಮೇಲಿನ ವ್ಯಾಮೋಹವನ್ನು ಬಿಡು ವುದೂ ಕೂಡ ಅಷ್ಟು ಕಷ್ಟ. ಪ್ರಪಂಚದ ಸುಖ ತ್ಯಜಿಸುವುದು ಅಷ್ಟು

ಸುಲಭವೆ? ನೀನು ಅವನ ತಾಯಿ, ನೀನು ಏತಕ್ಕೆ ಕಾತರಳಾಗುವೆ? ಅವನು ಸನ್ಯಾಸಿಯಾದರೂ ನಿನ್ನನ್ನು ನೋಡಿಕೊಳ್ಳುವನು" ಎಂದರು.

* * * *

ಒಮ್ಮೆ ಶ್ರೀಮಾತೆಯ ಯುವಕ ಶಿಷ್ಯನೊಬ್ಬನಿಗೆ ಶ್ರೀಮಂತರೊಬ್ಬರ ಮನೆಯಿಂದ ಹೆಣ್ಣು ಬಂದಿತು. ಅವನ ಬಡತನ ಕೊನೆಗಾಣುವಷ್ಟು ವರದಕ್ಷಿಣೆ ಕೊಡಲು ಸಿದ್ಧರಾಗಿದ್ದರು. ಆತ ಎಂ.ಎ., ಪಾಸು ಮಾಡಿ ಒಂದು ಪ್ರೌಢಶಾಲೆಯಲ್ಲಿ ಮುಖ್ಯ ಅಧ್ಯಾಪಕನಾಗಿದ್ದನು. ಆತನ ಮನಸ್ಸಿನಲ್ಲಿ ಆಸೆ ಸಂಪೂರ್ಣ ಹೋಗಿರಲಿಲ್ಲ. ಆತ ಮದುವೆಯ ವಿಷಯದಲ್ಲಿ ಶ್ರೀಮಾತೆಯ ಅಭಿಪ್ರಾಯವೇನೆಂಬುದನ್ನು ಕೇಳಿದನು. ಎಲ್ಲಾ ಕೇಳಿ ಶ್ರೀಮಾತೆ, "ಮಗು, ನೀನು ಚೆನ್ನಾಗಿರುವೆ. ಸಂಸಾರದ ಅಗ್ನಿಯಲ್ಲಿ ಬೇಯಲು ಏಕೆ ಇಚ್ಛಿಸುವೆ? ನೀನು ಒಳ್ಳೆ ಕೆಲಸಮಾಡುತ್ತಿರುವೆ. ನಿನ್ನ ಸಹಾಯದಿಂದ ಎಷ್ಟೋ ವಿದ್ಯಾರ್ಥಿಗಳು ಉಪಕಾರ ಹೊಂದುತ್ತಿರುವರು. ವಿದ್ಯಾರ್ಥಿಗಳು ನಿನ್ನ ಸಂಗದಿಂದ ಉತ್ತಮರಾಗುವರು. ಇದರಿಂದ ನಿನಗೂ ಒಳ್ಳೆಯದು" ಎಂದರು. ಅದಕ್ಕೆ ಯುವಕ, "ತಾಯಿ, ಕೆಲವುವೇಳೆ ಮನಸ್ಸು ಚಂಚಲವಾಗುವುದು. ಪ್ರಪಂಚದ ಭೋಗವನ್ನು ಇಚ್ಛಿಸುವುದು. ಇದರಿಂದ ನನಗೆ ಬಹಳ ಅಂಜಿಕೆಯಾಗುವುದು" ಎಂದನು. ಅದಕ್ಕೆ ಶ್ರೀಮಾತೆ, "ನೀನು ಅಂಜಬೇಕಾಗಿಲ್ಲ. ಕಲಿಯುಗದಲ್ಲಿ ಮನಸ್ಸಿನ ಪಾಪ, ಪಾಪವಲ್ಲ. ಇಂತಹ ಆಲೋಚನೆಯಿಂದ ಪಾರಾಗು. ನೀನು ಅಂಜಬೇಕಾಗಿಲ್ಲ" ಎಂದರು. ಈ ಭವರವಸೆಯನ್ನು ಪಡೆದಮೇಲೆ ಆತ ಮದುವೆ ವಿಷಯವನ್ನು ಆಲೋಚಿಸಲಿಲ್ಲ. ತಾತ್ಕಾಲಿಕ ಪ್ರಲೋಭನಗಳಿಂದ ಮನಸ್ಸು ಕ್ಷೋಭೆಗೆ ಒಳಗಾಗಲು ಅವಕಾಶಕೊಡಲಿಲ್ಲ.

* * * *

ಒಬ್ಬ ಸ್ತ್ರೀ ಭಕ್ತೆ:—ನಿಮಗೆ ಶಿಷ್ಯರೆಲ್ಲಾ ಒಂದೇಸಮನಾಗಿರಬೇಕು. ಒಬ್ಬರು ಮದುವೆ ವಿಷಯದಲ್ಲಿ ನಿಮ್ಮ ಅಭಿಪ್ರಾಯ ಕೇಳಿದರೆ ಅವರಿಗೆ ಮದುವೆಯಾಗುವುದಕ್ಕೆ ಅವಕಾಶಕೊಡುವಿರಿ. ಮತ್ತೊಬ್ಬ ಪ್ರಪಂಚವನ್ನು ತೊರೆಯಬೇಕೆಂದು ಕೇಳಿದರೆ ತ್ಯಾಗಜೀವನದ ಸಮಾನವಿಲ್ಲವೆನ್ನುವಿರಿ. ಎಲ್ಲರನ್ನೂ ಉತ್ತಮ ಮಾರ್ಗದಲ್ಲಿ ನಡೆಸುವುದು ನಿಮ್ಮ ಕರ್ತವ್ಯವಲ್ಲವೇ?

ಶ್ರೀಮಾತೆ:– ಒಬ್ಬನಿಗೆ ಪ್ರಪಂಚವನ್ನು ಅನುಭವಿಸಬೇಕೆಂದು ತುಂಬಾ ಆಸೆ ಇದೆ. ಅನುಭವಿಸಬೇಡವೆಂದು ಹೇಳಿದರೆ ಆತನು ನನ್ನ ಮಾತನ್ನು ಕೇಳುವನೆಂದು ತಿಳಿದೆಯೇನು? ಮತ್ತೊಬ್ಬ ಏನೋ ಪೂರ್ವ ಸಂಸ್ಕಾರದ ಬಲದಿಂದ ಈ ಪ್ರಪಂಚವೆಲ್ಲ ಮಾಯೆ, ದೇವರೊಬ್ಬನೇ ಸತ್ಯವೆಂದು ತಿಳಿದರೆ, ಅವನಿಗೆ ನಾನು ಸ್ವಲ್ಪ ಸಹಾಯಮಾಡಬೇಡವೆ? ಈ ಪ್ರಪಂಚದಲ್ಲಿ ದುಃಖಕ್ಕೆ ಕೊನೆ ಇದೆಯೆ?

* * *

ಮಗ ಮದುವೆಯಾಗಲು ಒಪ್ಪದ ತಾಯಿಯೊಬ್ಬಳಿಗೆ ಶ್ರೀಮಾತೆ, "ಈಗಿನ ಕಾಲದಲ್ಲಿ ಹುಡುಗರೆಲ್ಲಾ 'ನಾವು ಮದುವೆಯಾಗುವುದಿಲ್ಲ' ವೆನ್ನುವರು. ಆದರೆ ಯಾರು ಅತಿ ಶ್ರೇಷ್ಠರೊ ಅವರು ಮಾತ್ರ ಪ್ರಪಂಚ ತೊರೆದು ತ್ಯಾಗ ಜೀವನ ಸ್ವೀಕರಿಸಬಹುದು. ಮತ್ತೆ ಕೆಲವರಿಗೆ ಪ್ರಪಂಚದ ರುಚಿನೋಡಬೇಕೆಂಬ ಆಸೆ ಇದೆ. ಅಂತಹವರಿಗೆ ಪ್ರಪಂಚ ವನ್ನು ಅನುಭವಿಸು ಎನ್ನುವೆ. ಆದರೆ ಶ್ರೀ ಗುರುದೇವನ ಶಿಷ್ಯರು, ಒಡನಾಡಿಗಳ ವಿಷಯವೇ ಬೇರೆ"

ಶಿಷ್ಯೆ:– ತಾಯಿ, ಅವನು ನಿಮ್ಮ ಮಗ. ಅವನ ಭವಿಷ್ಯದ ಸುಖ ದುಃಖ ನಿಮಗೆ ಸೇರಿದ್ದು. ನಿಮಗೆ ಇಚ್ಛೆ ತೋರಿದಂತೆ ಮಾಡಿ.

ಶ್ರೀಮಾತೆ:– ಮದುವೆಯಾಗಿ ಆಸೆಗಳನ್ನೆಲ್ಲಾ ಪೂರೈಸಿಕೊಳ್ಳಲಿ. ಇಲ್ಲದಿದ್ದರೆ ಕೆಲವು ಇಂಗದ ಬಯಕೆಗೆ ಯಾವಾಗ ಬಲಿಯಾಗುವನೋ ತಿಳಿಯದು. ಆದರೆ ಎಲ್ಲಿಯವರೆವಿಗೂ ಶ್ರೀ ಗುರುದೇವರ ಆಶ್ರಯ ದಲ್ಲಿರುವನೋ ಅಲ್ಲಿಯವರೆಗೂ ಅವನು ಭ್ರಷ್ಟನಾಗುವುದಿಲ್ಲ. ಈ ವಿಷಯದಲ್ಲಿ ನೀವು ಚಿಂತಿಸಬೇಕಾಗಿಲ್ಲ. ಶ್ರೀಗುರುದೇವರು ನನಗೆ ತೋರಿದ ಮಂತ್ರವನ್ನು ಅವನಿಗೆ ಕೊಟ್ಟಿರುವೆನು. ಇದರ ಮೂಲಕ ಅವನು ಮುಕ್ತಿಯನ್ನು ಪಡೆಯುವನು. ಅವನು ಎಂಥಾದರೂ ವ್ಯಥೆ ಪಡುವನೆ?

* * *

ಒಬ್ಬ ಶಿಷ್ಯ:– ಶ್ರೀರಾಮಕೃಷ್ಣರು ತಮ್ಮನ್ನು ಯಾರು ಆದರ್ಶವಾಗಿ ಸ್ವೀಕರಿಸುವರೋ ಅವರಿಗೆ ಪುನರ್ಜನ್ಮವಿಲ್ಲ ವೆಂದರು. ಆದರೆ ಸ್ವಾಮಿ ವಿವೇಕಾನಂದರು ಸನ್ಯಾಸಿಯಾಗದೆ ಮುಕ್ತಿ ಇಲ್ಲ ಎಂದರು. ಗೃಹಸ್ಥರು ಹೇಗೆ ಪಾರಾಗುವುದು?

ಶ್ರೀಮಾತೆ – ಹೌದು, ಶ್ರೀ ಗುರುದೇವರು ಹೇಳಿದ್ದು ನಿಜ. ಸ್ವಾಮಿ ವಿವೇಕಾನಂದರು ಹೇಳಿದ್ದೂ ನಿಜ. ಗೃಹಸ್ಥರಿಗೆ ಬಾಹ್ಯಸನ್ಯಾಸ

ಬೇಕಾಗಿಲ್ಲ. ಅವರಿಗೆ ಆಂತರಿಕ ಸನ್ಯಾಸ ತಾನಾಗಿಯೇ ಪ್ರಾಪ್ತವಾಗುವುದು. ಕೆಲವರಿಗೆ ಬಾಹ್ಯಸನ್ಯಾಸ ಬೇಕಾಗಿದೆ. ನೀನು ಏತಕ್ಕೆ ಅಂಜುವುದು? ಶ್ರೀ ಗುರುದೇವರಲ್ಲಿ ಶರಣಾಗಿ. ಅವರು ನಿಮ್ಮನ್ನು ರಕ್ಷಿಸುತ್ತಿರುವರು ಎಂದು ನಂಬಿ. * * *

---

## ಸನ್ಯಾಸದ ಆದರ್ಶ

ಶ್ರೀಮಾತೆ ಒಮ್ಮೆ ಸನ್ಯಾಸಿಯೊಬ್ಬರಿಗೆ ಹೀಗೆಂದರು: "ಶ್ರೀರಾಮಕೃಷ್ಣರು 'ಸಾಧು ಜಾಗ್ರತನಾಗಿರು' ಎನ್ನುತ್ತಿದ್ದರು. ಸಾಧು ಯಾವಾಗಲೂ ಜೋಪಾನವಾಗಿರಬೇಕು. ಅವನ ದಾರಿ ತುಂಬಾ ಜಾರುವುದು. ಜಾರುವ ನೆಲದ ಮೇಲೆ ಇರುವಾಗ ಬಹಳ ಜೋಪಾನವಾಗಿರಬೇಕು. ಸನ್ಯಾಸಿಯಾಗುವುದು ಸುಲಭವೆ? ಆತ ಇಚ್ಛೆ ಪಟ್ಟಿದ್ದರೆ ಗೃಹಸ್ಥನಾಗಿರಬಹುದಾಗಿತ್ತು. ನೀವು ಅಂತಹ ವಿಷಯವನ್ನು ತೊರೆದ ಮೇಲೆ ಮನಸ್ಸು ಅದನ್ನು ಕುರಿತು ಯೋಚಿಸಬಾರದು. ಯಾವುದನ್ನು ನಾವು ಒಂದುಸಲ ವಾಂತಿ ಮಾಡಿರುವೆವೋ ಅದನ್ನು ಪುನಃ ತಿನ್ನುವುದಿಲ್ಲ. ಸಾಧುವಿನ ಕಾವಿ ಬಟ್ಟೆ, ನಾಯಿಯ ಕೊರಳಲ್ಲಿರುವ ಪಟ್ಟೆಯಂತೆ ರಕ್ಷಿಸುವುದು. ಕೊರಳಿನಲ್ಲಿ ಪಟ್ಟೆಇರುವ ನಾಯಿಯನ್ನು ಯಾರೂ ಹೊಡೆಯುವುದಿಲ್ಲ. ಅದು ಯಾರಿಗಾದರೂ ಸೇರಿದ್ದು. ಸಾಧುವಿಗೆ ಎಲ್ಲ ಮನೆಗಳು ತೆರೆದಿವೆ. ಎಲ್ಲಿಗೆ ಬೇಕಾದರೆ ಅಲ್ಲಿಗೆ ಅವನು ಪ್ರವೇಶಿಸಬಹುದು. ಮನಸ್ಸು ಸ್ವಾಭಾವಿಕವಾಗಿ ಕೆಟ್ಟ ವಿಷಯಗಳ ಕಡೆ ಹೋಗುವುದು. ಒಳ್ಳೆಯವಿಷಯ ಕುರಿತು ಯೋಚಿಸಲು ಸೋಮಾರಿತನ. ಮುಂಚೆ ನಾನು ಬೆಳಗ್ಗೆ ಮೂರು ಗಂಟೆಹೊತ್ತಿಗೆ ಎದ್ದು ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದೆ. ಒಂದುದಿನ ದೇಹಾಲಸ್ಯದಿಂದ ಹಾಗೆ ಮಾಡಲಿಲ್ಲ. ಒಂದುದಿನದ ಅಸಡ್ಡೆಯಿಂದ ಹಲವುದಿನದ ಅವ್ಯವಸ್ಥೆಗೆ ಕಾರಣವಾಯಿತು. ಪುನಃ ಹಿಂದಿನಂತೆ ಏಳಬೇಕಾದರೆ ಕೆಲವುದಿನ ಹಿಡಿಯಿತು. ಅದಕ್ಕೇ ಎಲ್ಲಾ ಒಳ್ಳೆಯ ಕೆಲಸದಲ್ಲೂ ಜಯ ಲಭಿಸಬೇಕಾದರೆ ಛಲ ಅತಿ ಆವಶ್ಯಕ. ನಾನು ನಹಭತ್‌ಖಾನೆಯಲ್ಲಿದ್ದಾಗ ಬೆಳದಿಂಗಳ ರಾತ್ರಿ, 'ದೇವರೇ, ಚಂದ್ರನಲ್ಲಿಯೂ ಕಳಂಕವಿದೆ. ನನ್ನಲ್ಲಿ ಅದೂ ಇಲ್ಲದೆ ಇರಲಿ' ಎಂದು ಪ್ರಾರ್ಥಿಸುತ್ತಿದ್ದೆ." * *

ಸನ್ಯಾಸಿ, ಆಸಕ್ತಿ ಮತ್ತು ಅಸೂಯೆಯಿಂದ ದೂರವಿರಬೇಕು. ಎಲ್ಲಾ ಕಾಲದಲ್ಲಿಯೂ ಒಂದೇ ಸಮನಾಗಿರಬೇಕು. ಶ್ರೀರಾಮಕೃಷ್ಣರು ಹೃದಯನಿಗೆ, "ನೀನು ನನ್ನನ್ನು ಸಹಿಸಬೇಕು ; ನಾನು ನಿನ್ನನ್ನು ಸಹಿಸಬೇಕು. ಆಗ ಎಲ್ಲಾ ಸರಿ. ಇಲ್ಲದೇ ಇದ್ದರೆ ಇತ್ಯರ್ಥಕ್ಕೆ ಮೂರನೇಯವರನ್ನು ಕರೆಸಬೇಕಾಗುವುದು" ಎನ್ನುತ್ತಿದ್ದರು. * *

ಶಿಷ್ಯ:– ತಾಯಿ, ನಿಮ್ಮ ಮಕ್ಕಳೆಲ್ಲ ವಿದ್ಯಾವಂತರು. ಆದರೆ ಈ ಕೋಲಪಾರ ಆಶ್ರಮದಲ್ಲಿರುವವರು ನಿಮ್ಮ ಅವಿದ್ಯಾವಂತ ಮಕ್ಕಳು. ಸ್ವಾಮಿ ಶಾರದಾನಂದರು ಶ್ರೀರಾಮಕೃಷ್ಣರ ಜೀವನವನ್ನು ಬರೆದಿರುವರು. ಇವು ಎಲ್ಲಾ ಕಡೆಯಲ್ಲಿಯೂ ಶ್ರೀರಾಮಕೃಷ್ಣರ ಜೀವನ ಮತ್ತು ಸಂದೇಶವನ್ನು ಹರಡುತ್ತಿವೆ. ನಿನ್ನ ಮಕ್ಕಳು ಉಪನ್ಯಾಸ ಕೊಡುತ್ತಿರುವರು. ಅವರ ಸಂದೇಶಪ್ರಚಾರಕ್ಕೆ ಎಷ್ಟೋ ಪ್ರಯತ್ನಪಡುತ್ತಿರುವರು.

ಶ್ರೀಮಾತೆ:– ಏನು ನೀನು ಹೇಳುವುದು? ನಮ್ಮ ಗುರುದೇವರಿಗೆ ಹೆಚ್ಚು ಓದು ಬರಹ ಬರುತ್ತಿರಲಿಲ್ಲ. ಮುಖ್ಯವಾಗಿ ಬೇಕಾಗಿರುವುದು ಭಕ್ತಿ. ನಿಮ್ಮಗಳ ಮೂಲಕ ಈ ಪ್ರಾಂತ್ಯದಲ್ಲಿ ಹೆಚ್ಚು ಕೆಲಸವಾಗುವುದು. ಶ್ರೀಗುರುದೇವರು, ಶ್ರೀಮಂತ, ಬಡವ, ಪಂಡಿತ, ಪಾಮರ, ಎಲ್ಲರ ಉದ್ಧಾರಕ್ಕೆ ಜನ್ಮವೆತ್ತಿದರು. ಮಲಯ ಮಾರುತ ಬೀಸುತ್ತಿದೆ. ಯಾರು ಅವರಲ್ಲಿ ಶರಣಾಗಿ ತಮ್ಮ ಜೀವನದ ನಾವೆಯ ಪಟವನ್ನು ಹರಡುವರೋ ಅವರು ಉಪಯೋಗ ಪಡೆಯುವರು ; ಧನ್ಯರಾಗುವರು. ಈವೇಳೆ ಎಲ್ಲಾ ಗಿಡ ಮರಗಳು, ಸತ್ವವಿಲ್ಲದ ಬೊಂಬು ಹುಲ್ಲು ಬಿಟ್ಟು ಉಳಿದವುಗಳೆಲ್ಲಾ ಚಂದನ ವೃಕ್ಷವಾಗುವುವು. ನೀನು ಏತಕ್ಕೆ ಚಿಂತಿಸುವೆ? ನೀವೆಲ್ಲ ನಮ್ಮವರು. ಆದರೆ ಇದನ್ನು ನೆನಪಿನಲ್ಲಿಡಿ. ವಿದ್ಯಾವಂತನಾದ ಸನ್ಯಾಸಿ ಚಿನ್ನದ ರೇಖಿನಿಂದ ಅಲಂಕೃತವಾದ ದಂತವಿರುವ ಆನೆಯಂತೆ.

---

## ಕರ್ಮ

ಶಿಷ್ಯ:– ದೇವರೇ ಎಲ್ಲರಿಗೂ ತಾಯಿತಂದೆಯಾದರೆ, ನಮ್ಮ ಕೈಯಿಂದ ಏತಕ್ಕೆ ಅವನು ತಪ್ಪುಮಾಡಿಸುವುದು?

ಶ್ರೀಮಾತೆ:– ನಿಜ, ದೇವರೇ ಸಚರಾಚರ ವಸ್ತುವಾಗಿರುವುದು. ಆದರೆ ವ್ಯವಹಾರಿಕ ಜಗತ್ತಿನಲ್ಲಿ ಪ್ರತಿ ಜೀವರೂ ತಮ್ಮ ಹಿಂದಿನ ಕರ್ಮ

ಮತ್ತು ಸ್ವಭಾವಕ್ಕೆ ತಕ್ಕಂತೆ ಅನುಭವಿಸುವರು. ಸೂರ್ಯನೇನೋ ಒಂದೇ. ಆದರೆ ಅದರ ಕಾಂತಿ ಯಾವ ಯಾವ ವಸ್ತುವಿನ ಮೇಲೆ ಬೀಳುವುದೋ ಅದರಂತೆ ಪ್ರಕಾಶಿಸುವುದು.

ಶಿಷ್ಯ :— ಪ್ರತಿಯೊಂದೂ ಅವನ ಇಚ್ಛಾನುಸಾರ ನಡೆಯುತ್ತಿದ್ದರೆ, ಅವನು ಕರ್ಮವನ್ನು ಏತಕ್ಕೆ ಅಳಿಸಬಾರದು ?

ಶ್ರೀಮಾತೆ:— ಅವನಿಗೆ ಇಚ್ಛೆಬಂದರೆ ಸಾಧ್ಯ. ಅವನು ವಿಕಾಸವಾಗುವ ಕಾಲವನ್ನು ಕಡಿಮೆಮಾಡಬಲ್ಲ. ಆದರೆ ಅವನ ಇಚ್ಛೆ ನಮಗೆ ಗೊತ್ತಿಲ್ಲ. ಶ್ರೀರಾಮಕೃಷ್ಣರೂ ಕೂಡ ಕರ್ಮವನ್ನು ಅನುಭವಿಸಬೇಕಾಯಿತು. ಒಂದು ದಿನ ಅವರ ಅಣ್ಣ ಸನ್ನಿಯಲ್ಲಿದ್ದಾಗ ನೀರು ಕುಡಿಯುವುದರಲ್ಲಿದ್ದ. ನೀರನ್ನು ಕುಡಿಯ ಬೇಡಿ ಎಂದು ವೈದ್ಯರು ಹೇಳಿದ್ದರು. ಶ್ರೀರಾಮಕೃಷ್ಣರು ನೀರಿನ ಪಾತ್ರೆಯನ್ನು ಅವನ ಕೈಯಿಂದ ಕಿತ್ತುಕೊಂಡರು. ಇದರಿಂದ ಅಣ್ಣನಿಗೆ ರೇಗಿ, "ನೀನು ನನಗೆ ನೀರು ಕುಡಿಯಲು ಅವಕಾಶಕೊಡದೆ ಇದ್ದುದರಿಂದ ಕೊನೆಗಾಲದಲ್ಲಿ ನಿನಗೂ ಏನನ್ನೂ ತಿನ್ನಲಾಗುವುದಿಲ್ಲ" ಎಂದು ಶಪಿಸಿದನು. ಅದಕ್ಕೆ ಶ್ರೀರಾಮಕೃಷ್ಣರು, "ನಿನ್ನ ಒಳ್ಳೆಯದಕ್ಕೆ ಹಾಗೆ ಮಾಡಿದೆ. ನೀನು ಇದಕ್ಕೆ ನನಗೆ ಶಾಪ ಕೊಟ್ಟೆ" ಎಂದರು. ಇದನ್ನು ಕೇಳಿ ಅಣ್ಣ ಕಂಬನಿದುಂಬಿ ಅಳುತ್ತಾ, "ಅಯ್ಯೋ, ನಾನು ಏತಕ್ಕೆ ಹಾಗೆ ಹೇಳಿದೆನೋ ಗೊತ್ತಿಲ್ಲ. ಇಂತಹ ಮಾತು ಹೇಗೆ ನನ್ನ ಬಾಯಿಂದ ಬಂತೊ!" ಎಂದನು. ಶ್ರೀಗುರುದೇವರೂ ಕೂಡ ತಮ್ಮ ಕೊನೆಗಾಲದಲ್ಲಿ ಈ ಶಾಪದಿಂದ ನರಳಬೇಕಾಯಿತು. ಅವರಿಗೆ ಏನನ್ನೂ ತಿನ್ನಲಾಗಲಿಲ್ಲ.

* * * *

ಶಿಷ್ಯ :—ಜಪದ ಸಹಾಯದಿಂದ ಪ್ರಾರಬ್ಧಕರ್ಮವನ್ನು ಹೋಗಲಾಡಿಸಲು ಸಾಧ್ಯವೆ?

ಶ್ರೀಮಾತೆ:—ಪ್ರಾರಬ್ಧ ಕರ್ಮ, ಅನುಭವಿಸಿ ತೀರಲೇಬೇಕು. ಯಾರಿಗೂ ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ಭಗವನ್ನಾಮೋಚ್ಚಾರಣೆಯಿಂದ ಅದನ್ನು ಕಡಿಮೆಮಾಡಿಕೊಳ್ಳಬಹುದು. ಒಬ್ಬನಿಗೆ ಕಾಲೇ ಹೋಗುವ ಕರ್ಮವಿದ್ದರೆ, ಒಂದು ಮುಳ್ಳಿನ ನೋವಿನಿಂದ ಪಾರಾದ ಹಾಗೆ.

* * * *

# ಶ್ರೀ ಗುರುದೇವರು

ಶ್ರೀಮಾತೆ:– ಶ್ರೀ ಗುರುದೇವರು ಎಷ್ಟು ಸತ್ಯನಿಷ್ಠರಾಗಿದ್ದರು! ನಾವು ಅವರ ಉದಾಹರಣೆಯನ್ನು ಅನುಸರಿಸಲಾರೆವು. ಕಲಿಯುಗದಲ್ಲಿ ಸತ್ಯವೇ ತಪಸ್ಸು ಎನ್ನುತ್ತಿದ್ದರು. ಸತ್ಯವಂತನಾಗಿದ್ದರೆ ದೇವರನ್ನು ಪಡೆಯುವನು. ಶ್ರೀ ಗುರುದೇವರು ನಿಜವಾಗಿ ಪ್ರತ್ಯಕ್ಷದೇವರೇ ಆಗಿದ್ದರು. ಇತರರ ದುಃಖ ವಿಮೋಚನೆಗೆ ಮಾನವರೂಪವನ್ನು ಅವರು ಧಾರಣೆಮಾಡಿದರು. ರಾಜ, ನಗರದಲ್ಲಿ ಮರೆಮಾಚಿಕೊಂಡು ಸಂಚರಿಸುವಂತೆ ಆವರು ವ್ಯವಹರಿಸುತ್ತಿದ್ದರು. ಅವರನ್ನು ಕಂಡುಹಿಡಿದೊಡನೆಯೇ ಮಾಯವಾದರು.

*　　*　　*　　*

ಶ್ರೀಮಾತೆ ರಾಧೆಯ ಚಿಕಿತ್ಸೆಗಾಗಿ ಬಾಗ್‌ಬಜಾರಿನ ಬೋಸ್‌ಪಾರದಲ್ಲಿ ಒಂದು ಬಾಡಿಗೆ ಮನೆಯಲ್ಲಿದ್ದರು. ಶ್ರೀಮಾತೆಯ ಸೇವೆಗೆ ಒಬ್ಬ ಶಿಷ್ಯೆ ಇದ್ದಳು. ಒಂದು ದಿನ ಆಕೆಗೆ ಶ್ರೀ ಗುರುದೇವರಿಗೆ ನೈವೇದ್ಯ ಮಾಡೆಂದು ಹೇಳಿದರು. ಆಕೆಗೆ ಮಂತ್ರ ಮುಂತಾದುವು ಗೊತ್ತಿರಲಿಲ್ಲ. ಆಕೆ ಶ್ರೀಮಾತೆಗೆ, 'ಹೇಗೆ ಶ್ರೀಗುರುದೇವರಿಗೆ ನೈವೇದ್ಯಕೊಡಬೇಕೋ ಗೊತ್ತಿಲ್ಲ", ಎಂದಳು. ಅದಕ್ಕೆ ಶ್ರೀಮಾತೆ, "ನೋಡು, ಶ್ರೀ ಗುರುದೇವರನ್ನು ನಿನ್ನವರೆಂದು ಭಾವಿಸಿ, 'ಬನ್ನಿ, ಕುಳಿತುಕೊಳ್ಳಿ, ಆಹಾರ ಸೇವಿಸಿ' ಎನ್ನು. "ಆಮೇಲೆ ಅವರು ಬಂದಿರುವರು, ಕುಳಿತು ಆಹಾರ ಸೇವಿಸುತ್ತಿರುವರು ಎಂದು ಭಾವಿಸು. ಒಬ್ಬ ತನ್ನ ಸ್ವಂತ ನಂಟರನ್ನು ಸೇವಿಸುವುದಕ್ಕೆ ಮಂತ್ರ, ತಂತ್ರ ಬೇಕೆ? ನೀನು ಹೇಗೆ ಮಾಡಿದರೂ ಶ್ರೀಗುರುದೇವರು ಅದನ್ನು ಸ್ವೀಕರಿಸುವರು." ಆದರೂ ಶ್ರೀಮಾತೆ ನೈವೇದ್ಯ ಮಾಡುವುದಕ್ಕೆ ಒಂದು ಮಂತ್ರವನ್ನು ಕಲಿಸಿದರು.

*　　*　　*　　*

ತನ್ನ ಒಬ್ಬಳೇ ಮಗಳನ್ನು ಕಳೆದುಕೊಂಡ ತಾಯಿಯನ್ನು ಸಮಾಧಾನ ಮಾಡುವಾಗ, "ಮಗು, ನಾನು ನಿನಗೆ ಏನು ಹೇಳಲಿ? ನನಗೆ ಏನೂ ಗೊತ್ತಿಲ್ಲ. ನಿನ್ನ ಎದುರಿಗೆ ಶ್ರೀಗುರುದೇವರ ಒಂದು ಚಿತ್ರವನ್ನು ಇಟ್ಟುಕೊ. ಅವರು ಯಾವಾಗಲೂ ನಿನ್ನಲ್ಲಿರುವರು ಎಂದು ಭಾವಿಸು. ನಿನ್ನ ದುಃಖವನ್ನು ಅವರೆದುರಿಗೆ ಹೇಳಿಕೊ. ಕಣ್ಣೀರು

ಕರೆದು, ‘ದೇವರೇ, ನಿನ್ನೆಡೆಗೆ ಕರೆದುಕೊ. ಶಾಂತಿ ನೀಡು’ ಎಂದು ಬೇಡಿಕೊ. ಹೀಗೆ ಬಿಡದೆ ಮಾಡಿದರೆ ಕ್ರಮೇಣ ಶಾಂತಿ ದೊರಕುವುದು. ಅವರ ಮೇಲೆ ಭಕ್ತಿ ಇಡು. ನೀನು ಯಾವಾಗಲೂ ದುಃಖದಲ್ಲಿದ್ದರೂ ಅವರೊಂದಿಗೆ ಮಾತನಾಡು” ಎಂದರು.

* * * *

ಒಂದುದಿನ ಸೋದರಿ ಸುಧಿರಾ ಮತ್ತು ಒಬ್ಬ ಶಿಷ್ಯಳು ಶ್ರೀಮಾತೆಯ ಸಮೀಪದಲ್ಲಿ ಕುಳಿತಿದ್ದರು. ಶ್ರೀಮಾತೆ ಹೀಗೆಂದರು: “ಯಾರು ಅವರಿಗೆ ಒಮ್ಮೆಯಾದರೂ ಪ್ರಾರ್ಥಿಸುವರೊ, ಅವರೆಂದಿಗೂ ಅಂಜಬೇಕಾಗಿಲ್ಲ. ಅನವರತ ಅವರನ್ನು ಪ್ರಾರ್ಥಿಸುತ್ತಿದ್ದರೆ ಅವರು ಪ್ರೇಮ, ಭಕ್ತಿಯನ್ನು ಅನುಗ್ರಹಿಸುವರು. ಈ ಪ್ರೇಮವೇ ಆಧ್ಯಾತ್ಮಿಕ ಜೀವನದ ತಿರುಳು. ಬೃಂದಾವನದ ಗೋಪಿಯರಿಗೆ ಇದು ಲಭಿಸಿತ್ತು. ಶ್ರೀಕೃಷ್ಣನಲ್ಲದೆ, ಜಗದಲ್ಲಿ ಮತ್ತಾವುದೂ ಅವರಿಗೆ ಅರಿವಿರಲಿಲ್ಲ. ನೀಲಕಂಠನ ಹಾಡಿನಲ್ಲಿ ಈ ಒಂದು ಚರಣವಿದೆ. ‘ಪ್ರೇಮವೆಂಬ ಅನರ್ಘ್ಯ ರತ್ನವನ್ನು ಬಹಳ ಜೋಪಾನದಿಂದ ರಕ್ಷಿಸಬೇಕು.” ಶ್ರೀಮಾತೆ ಇದನ್ನು ಹಾಡಿದರು. “ಓ, ನೀಲಕಂಠನ ಹಾಡು ಎಷ್ಟು ಸೊಗಸಾಗಿದೆ! ಶ್ರೀ ಗುರುದೇವರನ್ನು ಅವನು ಪ್ರೀತಿಸುತ್ತಿದ್ದನು. ಅವರು ದಕ್ಷಿಣೇಶ್ವರದಲ್ಲಿದ್ದಾಗ ಅವನು ಬಂದು ಹಾಡುತ್ತಿದ್ದ. ಅಲ್ಲಿ ನಾವು ಎಷ್ಟು ಆನಂದದಲ್ಲಿದ್ದೆವು! ಆಗ ದಕ್ಷಿಣೇಶ್ವರ ಆನಂದದ ನೆಲೆವೀಡಾಗಿತ್ತು.”

* * * *

ಭಕ್ತೆ:– ಹಲವರು ಪ್ರತಿದಿನ ಶಿವನನ್ನು ಪೂಜಿಸುವರು. ನಾನೂ ಮಾಡಲೆ?

ಶ್ರೀಮಾತೆ:– ನಾನು ನಿನಗೆ ಕೊಟ್ಟಿರುವ ಮಂತ್ರದಲ್ಲಿ ಎಲ್ಲವೂ ಇದೆ. ಆದರಿಂದ ನೀನು ದುರ್ಗಾ, ಕಾಳಿ, ಮತ್ತು ಎಲ್ಲಾ ದೇವದೇವಿಯರನ್ನೂ ಪೂಜಿಸಬಹುದು. ಇಚ್ಛೆ ಇದ್ದರೆ ಶಿವಪೂಜೆಯನ್ನೂ ಕಲಿಯಬಹುದು. ನೀನು ಇದನ್ನು ಮಾಡಬೇಕಾಗಿಲ್ಲ. ಇದರಿಂದ ಇನ್ನೂ ಕೆಲಸ ಹೆಚ್ಚಾಗುವುದು.

ಶ್ರೀಗುರುದೇವರಿಗೆ ಹೇಗೆ ನೈವೇದ್ಯಕೊಡಬೇಕೆಂದು ಯಾರೋ ಕೇಳಿದರು. “ಶ್ರೀಗುರುದೇವರಿಗೆ ನೈವೇದ್ಯಕೊಡಬೇಕಾದರೆ ಮಂತ್ರ

ತಂತ್ರಗಳ ಅವಶ್ಯಕತೆ ಇಲ್ಲ. ಶ್ರೀಗುರುವಿನಿಂದ ಪಡೆಯುವ ಮಂತ್ರ ಒಂದೇ ಎಲ್ಲಕ್ಕೂ ಸಾಕು" ಎಂದರು.

* * * *

## ಬಿಡಿ ನುಡಿಗಳು

ಶ್ರೀಮಾತೆಯ ತರುಣ ಶಿಷ್ಯನೊಬ್ಬ ಅವರ ಕೊನೆಗಾಲದಲ್ಲಿ ದರ್ಶನಕ್ಕೆ ಹೋಗಿದ್ದ. ಅತನ ತಾಯಿ ಮುಂತಾದವರನ್ನೆಲ್ಲ ವಿಚಾರಿಸಿ, ತಾವು ಬಹಳ ಕಾಲ ಇರುವುದಿಲ್ಲವೆಂದರು. ಆತನಿಗೆ ತುಂಬಾ ನಿರಾಶೆಯಾಯಿತು. ಅವರಿಲ್ಲದೆ, ತಾನು ಅನಾಥನಾಗುವೆನೆಂದನು. ಆಗ ಶ್ರೀಮಾತೆ ಹೀಗೆಂದರು: "ಯಾವಾಗಲೂ ಶ್ರೀರಾಮಕೃಷ್ಣರೊಬ್ಬರೇ ನಮ್ಮ ರಕ್ಷಕರೆಂಬುದನ್ನು ನಂಬು. ನೀನು ಇದನ್ನು ಮರೆತರೆ ದಾರಿ ತಪ್ಪುವೆ. ನಾನು, ನಿನ್ನ ತಾಯಿ ಮತ್ತು ಇತರ ಬಂಧುಗಳ ವಿಚಾರ ಏಕೆ ಕೇಳಿದೆ ಗೊತ್ತೆ? ಕೆಲವು ದಿನದ ಹಿಂದೆ ನಿನ್ನ ತಂದೆಯ ಮರಣವನ್ನು ಜ......ನಿಂದ ತಿಳಿದೆ. ಆಗ ನಿಮ್ಮ ತಾಯಿಗೆ ಇತರ ನೆಂಟರು ಯಾರಾದರೂ ಇರುವರೆ, ಮತ್ತು ಅವಳ ಜೀವನೋಪಾಯಕ್ಕೆ ಆತಂಕವಿಲ್ಲವೆ ಎಂದು ಕೇಳಿದೆ. ಆಕೆ ನಿನ್ನನ್ನು ನೆಚ್ಚಿರುವಳೆ ಎಂದು ಕೇಳಿದೆ. ನೀನಿಲ್ಲದೆ ಅವಳು ಇರಬಲ್ಲಳೆಂದು ತಿಳಿದಾದಮೇಲೆ ಒಳ್ಳೆಯದು, ಈ ಹುಡುಗನಿಗೆ ಒಳ್ಳೆಯ ಸಂಸ್ಕಾರಗಳಿವೆ. ಶ್ರೀರಾಮಕೃಷ್ಣರ ದಯೆಯಿಂದ ಯಾವ ದೊಡ್ಡ ಆತಂಕವೂ ಇವನ ಆಧ್ಯಾತ್ಮಿಕ ಜೀವನಕ್ಕೆ ಇರಲಾರದೆಂದು ಭಾವಿಸಿದೆ. ಪ್ರತಿಯೊಬ್ಬರೂ ತಾಯಿಯನ್ನು ಸೇವಿಸಬೇಕು. ಇತರರನ್ನು ಸೇವಿಸಬೇಕೆಂದು ನನ್ನಲ್ಲಿಗೆ ಬಂದ ನೀವು ಅದನ್ನು ಹೆಚ್ಚು ಲಕ್ಷ್ಯದಲ್ಲಿಟ್ಟಿರಬೇಕು. ನಿನ್ನ ತಂದೆ ದುಡ್ಡನ್ನು ಇಡದೇ ಇದ್ದರೆ, ಹಣ ಸಂಪಾದಿಸಿ ತಾಯಿಯನ್ನು ನೋಡಿಕೊ ಎಂದು ಹೇಳುತ್ತಿದ್ದೆ. ಶ್ರೀರಾಮಕೃಷ್ಣರ ದಯೆಯಿಂದ ಆ ಆತಂಕ ನಿವಾರಣೆಯಾಗಿದೆ. ಅವರಿಗಾಗಿ ಇದ್ದ ದುಡ್ಡು ವ್ಯರ್ಥವಾಗದಂತೆ ನೋಡಿಕೊ. ಅದನ್ನು ಒಂದು ವ್ಯವಸ್ಥೆಗೊಳಿಸಿ ನಿಮಗೆ ಸಾಧ್ಯವಾದಷ್ಟು ಅವರನ್ನು ನೋಡಿಕೊ. ಇದರಿಂದ ನಿನಗೆ ಕಡಿಮೆ ಪ್ರಯೋಜನವೆಂದು ತಿಳಿದೆಯಾ? ಸತ್ಯವಾಗಿ ಹಣ ಸಂಪಾದಿಸುವುದು ಕಷ್ಟ. ಹಣ ಮನಸ್ಸನ್ನು ಮಲಿನಮಾಡುವುದು. ಸಾಧ್ಯವಾದಷ್ಟು ಬೇಗ ನಿನ್ನ ತಾಯಿಯ ಹಣವನ್ನು ವ್ಯವಸ್ಥೆಗೊಳಿಸು. ಹೆಚ್ಚು

ವ್ಯವಹಾರ ನಡೆಸುತ್ತಿದ್ದರೆ ಕ್ರಮೇಣ ಅದರಲ್ಲಿ ಆಸಕ್ತನಾಗುವೆ. ಹಣದ ಪ್ರಭಾವ ಇದು. ನೀನೇನೋ ಅದನ್ನು ಒಮ್ಮೆ ತ್ಯಜಿಸಿರುವುದರಿಂದ ಅದರ ಮೋಹದಿಂದ ಪಾರಾದೆ, ಅದರ ಬಲೆಗೆ ಬೀಳುವುದಿಲ್ಲವೆಂದು ಭಾವಿಸಬಹುದು. ಇಲ್ಲ, ಮಗು, ಹೀಗೆ ಎಂದೂ ಯೋಚಿಸಬೇಡ. ಎಲ್ಲೋ ಒಂದು ಸಣ್ಣ ಬಲದಿಂದ ಅದು ಪ್ರವೇಶಿಸಿ, ಕ್ರಮೇಣ ನಿನ್ನ ಅರಿವಿಲ್ಲದಂತೆ ತನ್ನ ವಶಪಡಿಸಿಕೊಳ್ಳುವುದು. ಅದೂ ಅಲ್ಲದೆ ನೀನು ಕಲ್ಕತ್ತೆಯಲ್ಲಿರುವೆ. ಹಣ ಹೇಗೆ ಜನರನ್ನು ಸ್ವಚ್ಛಂದ ಜೀವನಕ್ಕೆ ಸೆಳೆಯುವುದೆಂಬುದು ನಿನಗೆ ಗೊತ್ತಿದೆ. ನಿನ್ನ ತಾಯಿಯ ವಿಷಯವನ್ನು ಸಾಧ್ಯವಾದಷ್ಟು ಬೇಗ ವ್ಯವಸ್ಥೆಗೊಳಿಸಿ ಕಲ್ಕತ್ತೆಯಿಂದ ಓಡು. ನಿನ್ನ ತಾಯಿಯನ್ನು ಯಾವುದಾದರೂ ಪುಣ್ಯಸ್ಥಳಕ್ಕೆ ಹೋಗುವಂತೆ ಒಪ್ಪಿಸಿದರೆ ಅಲ್ಲಿ ನೀವಿಬ್ಬರೂ ಒಳ್ಳೆಯ ಜೀವನ ನಡೆಸಬಹುದು. ಬಂಧು ಬಳಗದವರನ್ನು ಮರೆಯಬಹುದು. ನಿನ್ನ ತಾಯಿ ಈಗ ದುಃಖಪಡುತ್ತಿರುವಳು. ಸದ್ಯಕ್ಕೆ ಇದು ಒಳ್ಳೆಯ ವ್ಯವಸ್ಥೆಯಂತೆ ತೋರುವುದು. ನಿನ್ನ ತಾಯಿಗೂ ವಯಸ್ಸಾಗಿದೆ. ದೇವರ ವಿಷಯವನ್ನು ಯಾವಾಗಲೂ ಅವಳ ಹತ್ತಿರ ಮಾತಾಡು. ತನ್ನ ಅಂತ್ಯಪಯಣಕ್ಕೆ ಆಕೆ ಅಣಿಯಾಗುವಂತೆ ಮಾಡಿದರೆ ನೀನು ಮಗನ ಕರ್ತವ್ಯವನ್ನು ಮಾಡಿದಂತೆ ಆಗುವುದು. ನೀನು ಅವಳ ಹಾಲು ಕುಡಿದು ಬೆಳೆದಿರುವೆ. ನಿನ್ನನ್ನು ದೊಡ್ಡವನನ್ನಾಗಿ ಮಾಡುವುದಕ್ಕೆ ಅವಳು ಎಷ್ಟು ಕಷ್ಟಪಟ್ಟಿರುವಳು! ಮಾತೃಸೇವೆ ನಿನ್ನ ಪ್ರಥಮ ಕರ್ತವ್ಯವೆಂದು ತಿಳಿ. ಆದರೆ ಅವಳು ನಿನ್ನ ಧರ್ಮಪಥಕ್ಕೆ ಅಡ್ಡಿಬಂದರೆ ಆ ವಿಷಯ ಬೇರೆ. ನೀನೇಕೆ ಅವಳನ್ನು ಒಮ್ಮೆ ನನ್ನ ಬಳಿಗೆ ಕರೆದುಕೊಂಡು ಬರಬಾರದು? ಅವಳು ಎಂತಹ ಹೆಂಗಸೊ ನೋಡುತ್ತೇನೆ. ಉಪಯೋಗವಾಗುವಂತೆ ಕಂಡರೆ ಅವಳಿಗೆ ಏನಾದರೂ ಬುದ್ಧಿವಾದವನ್ನು ಕೊಡುವೆನು. ಆದರೆ ಜೋಪಾನವಾಗಿರು. ತಾಯಿಸೇವೆ ಮಾಡುವ ನೆಪದಲ್ಲಿ ಸಂಸಾರಕ್ಕೆ ಬೀಳಬೇಡ. ಇವತ್ತೆಲ್ಲಾ ಒಬ್ಬ ವಿಧವೆಯನ್ನು ನೋಡಿಕೊಳ್ಳುವುದು ಅಷ್ಟೆ. ಆಕೆಗೆ ಎಷ್ಟು ಬೇಕಾಗಬಹುದು. ನಿನಗೆ ತೊಂದರೆಯಾದರೂ ಚಿಂತೆ ಇಲ್ಲ. ಬೇಗ ಇತ್ಯರ್ಥಮಾಡು. ಶ್ರೀರಾಮಕೃಷ್ಣರು ಎಂದೂ ಹಣವನ್ನು ಮುಟ್ಟುತ್ತಿರಲಿಲ್ಲ. ನೀವೆಲ್ಲ ಅವರ ಹೆಸರನ್ನು ತೆಗೆದುಕೊಂಡಿರುವಿರಿ. ಯಾವಾಗಲೂ ಅವರ ಮಾತನ್ನು ನೆನಪಿನಲ್ಲಿಡಿ. ಪ್ರಪಂಚದ ಕಷ್ಟಕ್ಕೆಲ್ಲ

ಹಣವೇ ಕಾರಣ. ಹಣ ಮನುಷ್ಯನನ್ನು ಬೇರೆ ಪ್ರಲೋಭನಗಳಿಗೆ ಸೆಳೆಯಬಹುದು. ಜೋಪಾನ!

* * * *

ಒಬ್ಬ ಗೃಹಸ್ಥಭಕ್ತಸನ್ಯಾಸಿಯನ್ನು ತುಂಬಾ ಲಘುವಾಗಿ ಕಂಡನು. ಆತನೊಂದಿಗೆ ಮಾತನಾಡುವಾಗ ಶ್ರೀಮಾತೆ, "ಶ್ರೀಗುರುದೇವರು ನಿನಗೆ ಅಪರಿಮಿತ ಕರುಣೆಯನ್ನು ತೋರಿರುವರು. ಅದಕ್ಕೆ ಬಾಲ್ಯ ದಿಂದಲೇ ನಿನಗೆ ಅವರ ಮೇಲೆ ಸ್ವಾಭಾವಿಕ ಪ್ರೀತಿ ಇದೆ. ಆದರೆ ಈ ಕೆಲವು ವಿಷಯಗಳನ್ನು ನೆನಪಿನಲ್ಲಿಟ್ಟು ಅದನ್ನು ಜೀವನದಲ್ಲಿ ಅನು ಷ್ಠಾನಕ್ಕೆ ತಾ; ಈ ಮೂರು ವಿಷಯಗಳನ್ನು ನೆನಪಿನಲ್ಲಿಡು. ನದೀತೀರದಲ್ಲಿ ಋವ ಮನೆ ಎಂದಾದರೂ ಪ್ರವಾಹ ಬಂದು ಮನೆಯನ್ನು ಕೊಚ್ಚಿಕೊಂಡು ಹೋಗಬಹುದು. ಎರಡನೆಯದು ಹಾವು. ಅದು ಕಂಡಮೇಲೆ ಯಾವ ಸಮಯದಲ್ಲಿ ಅದು ನಿನ್ನನ್ನು ಕಚ್ಚುವುದೋ ಗೊತ್ತಿಲ್ಲ. ಮೂರನೆಯದು ಸಾಧು. ಅವನ ಬಾಯಿನಿಂದ ಬೀಳುವ ಒಂದು ಮಾತಾಗಲೀ, ಮನ ದಲ್ಲಿರುವ ಆಲೋಚನೆಯಾಗಲೀ, ಗೃಹಸ್ಥನಿಗೆ ಹಾನಿಕರವಾಗಬಹುದು. ಸಾಧುವನ್ನು ಕಂಡಾಗಲೆಲ್ಲ ಅವನಿಗೆ ಗೌರವವನ್ನು ತೋರಬೇಕು. ಅವ ರೊಂದಿಗೆ ಪ್ರತಿವಾದ ಮಾಡಬೇಡ. ಅವರನ್ನು ಹಂಗಿಸಬೇಡ" ಜೀವನ ದಲ್ಲಿ ಶಿಷ್ಯ ಇದನ್ನು ನೆನಪಿಟ್ಟಿದ್ದನು.

* * * *

ಉಪದೇಶವಾದಮೇಲೆ ಶ್ರೀಮಾತೆ ಭಕ್ತೆಗೆ, "ಮಗು, ನೋಡು, ನಾನು ಸಾಧಾರಣವಾಗಿ ಈಗ ತಾನೆ ಗಂಡನನ್ನು ಕಳೆದುಕೊಂಡ ಹೆಂಗಸಿಗೆ ಉಪದೇಶ ಕೊಡುವುದಿಲ್ಲ. ಆದರೆ ನಿನಗೆ ಆಧ್ಯಾತ್ಮಿಕ ಸ್ವಭಾವವಿರುವುದ ರಿಂದ ರಿಯಾಯತಿ ತೋರಿರುವೆ. ನಾನು ಅನಂತರ ಅನುಭವಿಸಬೇಕಾ ಗುವುದು. ಪ್ರತಿದಿನ ತಪ್ಪದೆ ಜಪಮಾಡು"

ಒಮ್ಮೆ ಶಿಷ್ಯೆ ತನ್ನ ಮಾವನ ಮನೆಗೆ ಹೋಗುವುದರಲ್ಲಿದ್ದಳು. ಅವಳಿಗೆ, "ಯಾರೊಂದಿಗೂ ನಿಕಟ ಬಾಂಧವ್ಯ ಬೆಳೆಸಬೇಡ. ಮನೆಯ ಸಾಂಸಾರಿಕ ಉತ್ಸವಗಳಲ್ಲಿ ಭಾಗಿಯಾಗಬೇಡ. ಮತ್ತೊಬ್ಬರ ವಿಷಯ ತಿಳಿದುಕೊಳ್ಳುವ ಕುತೂಹಲವಿಲ್ಲದೆ ತನ್ನಲ್ಲಿ ತಾನಿರಲಿ ಎಂದು ಮನ ಸ್ಸಿಗೆ ಹೇಳು. ಕ್ರಮೇಣ ಪ್ರಾರ್ಥನೆ, ಧ್ಯಾನದ ಸಮಯ ಹೆಚ್ಚಿಸು. ಶ್ರೀರಾಮಕೃಷ್ಣರ ಉಪದೇಶವನ್ನು ಓದು" ಎಂದರು.

ಮತ್ತೊಂದು ದಿನ ಶ್ರೀಮಾತೆಯವರೊಂದಿಗೆ ಶಿಷ್ಯೆಯೊಬ್ಬಳೇ ಇದ್ದಳು. ಅವಳಿಗೆ, "ಯಾವ ಪುರುಷನೊಂದಿಗೂ ಸಲಿಗೆಯಿಂದಿರ ಬೇಡ. ನಿನ್ನ ತಂದೆಯಾಗಲೀ, ಸೋದರನಾಗಲೀ ಚಿಂತೆ ಇಲ್ಲ. ಇನ್ನು ಳಿದವರ ವಿಷಯವೇನು! ದೇವರೇ ಪುರುಷನಂತೆ ಬಂದರೂ ಅವ ನೊಂದಿಗೆ ಸಲಿಗೆಯಿಂದ ಇರಬೇಡ" ಎಂದರು.

"ಸನ್ಯಾಸಿಗಳು ಇರುವ ಮಠ ಮುಂತಾದಕಡೆ ಹೆಚ್ಚು ಹೋಗ ಬೇಡ. ನಿನ್ನ ಮನಸ್ಸಿನಲ್ಲಿ ಕೆಟ್ಟ ಆಲೋಚನೆಗಳಿಲ್ಲದಿರಬಹುದು. ನೀನು ಒಳ್ಳೆಯ ಮನಸ್ಸಿನಿಂದಲೇ ಅಲ್ಲಿಗೆ ಹೋಗಬಹುದು. ಆದರೆ ನಿನ್ನನ್ನು ನೋಡಿದಾಗ ಅವರ ಮನಸ್ಸಿನಲ್ಲಿ ಹೀನ ಆಲೋಚನೆಗಳಿದ್ದರೆ ನೀನು ಅದಕ್ಕೆ ಸ್ವಲ್ಪ ಜವಾಬ್ದಾರಳಾಗುವೆ. ಸಮಯ ಮತ್ತು ಸಂಗಡಿಗರನ್ನು ಗಮನಿಸದೆ ತೀರ್ಥಯಾತ್ರೆಗೆ ಹೋಗಬೇಡ. ಸಾಧ್ಯವಾದರೆ ಕೆಲವು ಸಾಧುಗಳಿಗೆ ಊಟ ಹಾಕು" ಎಂದರು. ಒಬ್ಬ ಭಕ್ತೆಯನ್ನು ನೋಡಿ, "ತೀರ್ಥಸ್ಥಳಕ್ಕೆ ಹೋಗಿ ದೊಡ್ಡ ಪಾಠ ಕಲಿತುಬಂದಿರುವಳು" ಎಂದರು. "ಯಾತ್ರೆ, ಪ್ರಯಾಣ, ಕಷ್ಟಕ್ಕೆ ಮೂಲ. ಮನಸ್ಸೇ, ಅದನ್ನು ಕುರಿತು ವ್ಯಾಕುಲ ಪಡಬೇಡ" ಎಂದು ಒಂದು ಹಾಡಿನಿಂದ ಹೇಳಿದರು. ನಿಜ ವಾಗಿ ನಿನಗೆ ಶ್ರದ್ಧೆ ಇದ್ದರೆ ಮನೆಯಲ್ಲೆ ನಿನಗೆ ಹೆಚ್ಚು ಅವಕಾಶ ಸಿಕ್ಕುವುದು.

ಒಂದು ದಿನ ಕೆಲವು ಗೃಹಿಣೀ ಭಕ್ತರು ಒಬ್ಬರನ್ನು ಟೀಕಿಸು ತ್ತಿದ್ದರು. ಶ್ರೀಮಾತೆ, "ಅವರನ್ನು ಅಗೌರವದಿಂದ ಕಾಣಬೇಡ. ಅವರು ನಿಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದರು" ಎಂದರು. ಶಿಷ್ಯೆ ಯೊಬ್ಬಳು ಒಂದು ಮಗುವನ್ನು ದತ್ತುತೆಗೆದುಕೊಳ್ಳಬೇಕೆಂದಿದ್ದಳು. ಆಗ ಶ್ರೀಮಾತೆ, ತಾವು ರಾಧೆಯನ್ನು ಸಾಕಿ ಎಂತಹ ತೊಂದರೆಗೆ ಸಿಕ್ಕಿ ದ್ದಾರೆಂಬುದನ್ನು ತಿಳಿಸಿದರು. "ಹೀಗೆಂದಿಗೂ ಮಾಡಬೇಡ. ಇತರರಿಗೆ ಸೇವೆ ಮಾಡು. ಆದರೆ ಪ್ರೀತಿಯನ್ನು ದೇವರಿಗೆ ಮಾತ್ರ ಅರ್ಪಿಸು. ಪ್ರಾಪಂಚಿಕ ಪ್ರೀತಿ ಯಾವಾಗಲೂ ದುಃಖಕ್ಕೆ ಹೇತು" ಎಂದರು.

* * * *

ಶ್ರೀಮಾತೆಗೆ ಶ್ಯಾಮದಾಸ ಕವಿರಾಜನ ಚಿಕಿತ್ಸೆಯಿಂದ ಸ್ವಲ್ಪ ಗುಣ ವಾಯಿತು. ಒಂದು ಮಧ್ಯಾಹ್ನ ಕೆಲವು ಗೃಹಿಣೀ ಭಕ್ತರು ಅವರ ದರ್ಶನಕ್ಕೆ ಬಂದರು. ಅದರಲ್ಲಿ ಒಬ್ಬಳು ಬೇಕಾದಷ್ಟು ಒಡವೆ ಇಟ್ಟು

ಕೊಂಡಿದ್ದಳು. ಚೆನ್ನಾದ ಸೀರೆ ಉಟ್ಟಿದ್ದಳು. ಆಕೆ ಅಸ್ಥಿರಳಾಗಿದ್ದಳು. ಆಕೆಯನ್ನು ನೋಡಿ, "ಸ್ತ್ರೀಗೆ ಅವಳ ಮಾನವೆ ಭೂಷಣ. ಹೂವು ದೇವರ ಪಾದಗಳನ್ನು ಸೇರಿದಾಗ ಧನ್ಯವಾದೆವೆಂದು ಭಾವಿಸುವುವು. ಇಲ್ಲದೇ ಇದ್ದರೆ ಅವು ಗಿಡದಲ್ಲಿ ಒಣಗಿ ಹೋಗುವುದು ಲೇಸು."

"ಬಾಬು ಹೂವನ್ನು ಕಿತ್ತು, 'ಓ, ಎಂತಹ ಸುವಾಸನೆ' ಎಂದು ಹೇಳುತ್ತಾ ಮೂಸಿ ನೋಡುವುದನ್ನು ಕಂಡಾಗ ನನಗೆ ವ್ಯಥೆಯಾಗುವುದು. ಮರುಕ್ಷಣ ಅವನು ಅದನ್ನು ನೆಲದ ಮೇಲೆ ಬಿಸಾಡಬಹುದು. ಅದರ ಕಡೆ ಕೂಡ ನೋಡುವುದಿಲ್ಲ" ಎಂದರು.

ಕೆಲವುಕಾಲದ ಮೇಲೆ ಆ ಸ್ತ್ರೀಯ ಗಂಡ ಆಕೆಯನ್ನು ತೊರೆದು ಎಲ್ಲೋ ಹೊರಟುಹೋದನೆಂಬ ಸಮಾಚಾರ ಬಂದಿತು.

* * * *

ಶ್ರೀಮಾತೆ, ತಾವು ಇನ್ನು ಹೆಚ್ಚುಕಾಲ ಪ್ರಪಂಚದಲ್ಲಿರುವಂತೆ ತೋರುವುದಿಲ್ಲವೆಂದಾಗ, ಶಿಷ್ಯನೊಬ್ಬನು ಬಹಳ ಖಿನ್ನನಾದನು. ಅವರ ಕಾಲಾನಂತರ ತಾನೊಬ್ಬ ಅನಾಥನಾಗುವನೆಂದು ಭಾವಿಸಿದನು. ಅವನಿಗೆ ಭರವಸೆ ಕೊಡಲು, "ಈ ದೇಹ ಹೋದರೂ, ಯಾರ ಜವಾಬ್ದಾರಿಯನ್ನು ನಾನು ತೆಗೆದುಕೊಂಡಿರುವೆನೋ ಅವರೆಲ್ಲ ಮುಕ್ತರಾಗುವವರೆಗೂ ನಾನು ಮುಕ್ತಳಾಗುವೆನೆಂದು ತಿಳಿದೆಯಾ? ನಾನು ಯಾವಾಗಲೂ ಅವರೊಂದಿಗೆ ಇರಬೇಕು. ಅವರು ಒಳ್ಳೆಯವರಾಗಲೀ, ಕೆಟ್ಟವರಾಗಲೀ, ಅವರ ಜವಾಬ್ದಾರಿಯನ್ನೆಲ್ಲ ನಾನು ತೆಗೆದುಕೊಂಡಿರುವೆನು. ಉಪದೇಶ ಕೊಡುವುದು ಸುಲಭವೆಂದು ತಿಳಿದೆಯೇನು? ನಾವು ಎಷ್ಟೊಂದು ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು! ಅವರಿಗಾಗಿ ನಾವು ಎಷ್ಟು ಕಳವಳ ಪಡಬೇಕು! ಈಗ ನೋಡು, ನಿನ್ನ ತಂದೆ ಕಾಲವಾದ ತಕ್ಷಣ ನಿನ್ನ ಗತಿ ಏನು ಎಂಬುದನ್ನು ಯೋಚಿಸಬೇಕಾಯಿತು. ಶ್ರೀಗುರುದೇವರು ಅವನನ್ನು ಪುನಃ ಪರೀಕ್ಷಿಸುತ್ತಿರುವರು ಎಂದುಕೊಂಡೆ. ಈ ಪರೀಕ್ಷೆಯಿಂದ ಪಾರಾಗು ಎಂಬುದೇ ನನ್ನ ಪ್ರಾರ್ಥನೆ. ಅದಕ್ಕೆ ನಾನು ಈ ಬುದ್ಧಿವಾದವನ್ನೆಲ್ಲಾ ಹೇಳಿದ್ದು. ನಾನು ಹೇಳಿದುದೆಲ್ಲ ನಿನಗೆ ಗೊತ್ತಾಗುವುದೆ? ಅದು ಗೊತ್ತಾದರೆ ಅದರಿಂದ ನನ್ನ ಕಳವಳ ಎಷ್ಟೋ ಕಡಿಮೆಯಾಗುವುದು. ಶ್ರೀ ರಾಮಕೃಷ್ಣರು ತಮ್ಮ ಒಬ್ಬೊಬ್ಬ ಮಕ್ಕಳ ಹತ್ತಿರ ಒಂದೊಂದು ವಿಧವಾಗಿ ಆಡುತ್ತಿರುವರು. ಅದರೆ

ನಾನು ತೊಂದರೆಯನ್ನೆಲ್ಲ ಸಹಿಸಬೇಕಾಗಿದೆ. ನನ್ನವರೆಂದು ತಿಳಿದು ಕೊಂಡವರನ್ನು ನಾನು ಸುಲಭವಾಗಿ ಮರೆಯಲಾರೆ" ಎಂದರು.

* * * *

ಮಹಾಪುರುಷರನ್ನು ಸೇವಿಸುತ್ತಿರುವ ಸೇವಕರ ತಪ್ಪನ್ನು ಕುರಿತು ಹೀಗೆ ಹೇಳಿದರು: "ಮಹಾಪುರುಷರ ಸೇವೆ ಮಾಡುವವರು ತಪ್ಪು ಮಾಡಬಹುದು. ಅದು ಹೀಗೆ ಇರುವುದು: ಅವನಿಗೆ ಸೇವೆಮಾಡುವ ಅವಕಾಶವಿರುವುದರಿಂದ ಅಹಂಕಾರ ಹೆಚ್ಚಾಗುವುದು. ಯಾರನ್ನು ಸೇವಿಸುವನೋ ಅವರನ್ನೇ ಒಂದು ಆಟದ ಸಾಮಾನಿನಂತೆ ಆಳಲು ಯತ್ನಿಸುವನು. ಅವರ ಊಟ, ಕುಳಿತುಕೊಳ್ಳುವುದು, ಏಳುವುದು— ಇದರಲ್ಲೆಲ್ಲಾ ಅವರನ್ನು ಆಳಲು ಯತ್ನಿಸುವನು. ಸೇವಾಭಾವ ಮಾಯ ವಾಗುವುದು. ತಮ್ಮ ಕಷ್ಟ ಸುಖ ತೊರೆದು, ತಮಗಿಂತ ಮೇಲಾದವ ರನ್ನು ಯಾರು ಸೇವಿಸುತ್ತಿರುವರೋ ಅವರು ಹೀಗೆ ಏತಕ್ಕೆ ಆಗಬೇಕು? ಸೇವಕರ ಅಧಃ ಪತನವನ್ನು ಕುರಿತು ನೀನು ಮಾತನಾಡುತ್ತಿರುವೆ! ಅನೇಕ ಮಹಾತ್ಮರ ಸುತ್ತಲೂ ಐಶ್ವರ್ಯಾದಿಗಳು ಇರುತ್ತವೆ. ಇದರಿಂದ ಅನೇಕರು ಸೇವೆಮಾಡಲು ಬರುವರು. ಅಧಿಕಾರದ ಅಮಲಿನಿಂದ ತಮ್ಮ ನಾಶಕ್ಕೆ ತಾವೇ ಕಾರಣರಾಗುವರು. ನಿಜವಾದ ಸೇವಾ ಧರ್ಮ ದಿಂದ ಕೆಲಸ ಮಾಡುವವರೆಷ್ಟುಮಂದಿ ಇರುವರು ಹೇಳು?" ಅದನ್ನು ಒಂದು ಉಪಮಾನದ ಮೂಲಕ ವಿವರಿಸಿದರು: "ಚಂದ್ರನ ಕಾಂತಿ ಸರೋವರದ ನೀರಿನ ಮೇಲೆ ಬೀಳುವುದು. ಇದನ್ನೆಲ್ಲಾ ನೋಡಿ ಸಣ್ಣಮೀನುಗಳು, ಚಂದ್ರನೂ ತಮ್ಮ ಗುಂಪಿಗೆ ಸೇರಿದವನೆಂದು ನಲಿ ದಾಡುತ್ತವೆ. ಆದರೆ ಚಂದ್ರ ಮುಳುಗಿದ ಮೇಲೆ ತಾವು ಹಿಂದೆ ಇದ್ದಂತೆಯೇ ಇರುತ್ತವೆ. ಸಂತೋಷದಿಂದ ಕುಣಿದಾಡಿ, ಸಾಕಾಗಿ ಬೀಳುವುವು. ಅವಕ್ಕೆ ಇವು ಯಾವುದೂ ಗೊತ್ತಾಗುವುದಿಲ್ಲ".

* * * *

ಶಿಷ್ಯನೊಬ್ಬ ತನ್ನ ತಾಯಿಯನ್ನು ಕಾಶಿಗೆ ಕರೆದುಕೊಂಡು ಹೋಗ ಬೇಕೆಂದು ಇದ್ದ. ತಾಯಿ ಒಪ್ಪಲಿಲ್ಲ. ಅದು ಸರಿಯಾದ ಕಾಲವಾಗಿ ರಲಿಲ್ಲವಂತೆ. ಇದನ್ನು ಶ್ರೀಮಾತೆಗೆ ಶಿಷ್ಯ ಹೇಳಿದ. ಅದಕ್ಕೆ ಶ್ರೀಮಾತೆ, "ತೀರ್ಥಸ್ಥಳಕ್ಕೆ ಪುಣ್ಯಕಾಲದಲ್ಲಿ ಅಲ್ಲದೆ ಬೇರೆ ಸಮಯಗಳಲ್ಲಿ ಹೋದರೆ ಹಿಂದಿನ ಪುಣ್ಯಕರ್ಮಗಳ ಫಲ ನಾಶವಾಗುವುದೆಂದು ಕೆಲವರು ಹೇಳು

ತ್ತಾರೆ. ಆದರೆ ಇದೂ ಕೂಡ ಸತ್ಯ. ಒಳ್ಳೆಯದನ್ನು ಮಾಡಬೇಕೆಂದಿರು ವುದನ್ನೆಲ್ಲ ಸಾಧ್ಯವಾದಷ್ಟು ಬೇಗ ಮುಗಿಸುವುದೊಳ್ಳೆಯದು" ಎಂದರು.

ಶಿಷ್ಯನಿಗೆ ಎರಡು ಅರ್ಥಗಳನ್ನು ಕೊಡುತ್ತಿದ್ದ ಇವರ ವಾಕ್ಯ ಅರ್ಥ ವಾಗಲಿಲ್ಲ. ಇವನ ಅಜ್ಞಾನವನ್ನು ನೋಡಿ, "ಪ್ರಾಪಂಚಿಕ ದೃಷ್ಟಿ ಯಲ್ಲಿ ಪುಣ್ಯವಲ್ಲದಕಾಲದಲ್ಲಿ ತೀರ್ಥಯಾತ್ರೆಗೆ ಹೋಗುವುದು ಸರಿಯಲ್ಲ. ಸರಿಯಾದಕಾಲವಲ್ಲವೆಂದು ತೀರ್ಥಯಾತ್ರೆಮಾಡುವುದನ್ನು ಮುಂದಕ್ಕೆ ತಳ್ಳಬಹುದು. ಆದರೆ ನಾವು ಯಾವುದನ್ನೂ ಪರಿಗಣಿಸುವುದಿಲ್ಲ. ಮೃತ್ಯು ಯಾವಾಗ ಬರುವುದೋ ಯಾರಿಗೂ ಗೊತ್ತಿಲ್ಲ. ಅದು ಬರುವು ದಕ್ಕೆ ಮುಂಚೆ ಅವಕಾಶ ಒದಗಿದಾಗಲೇ ಪುಣ್ಯಾಪುಣ್ಯಕಾಲವನ್ನು ಮನಸ್ಸಿಗೆ ತಾರದೇ ಅದನ್ನು ಮಾಡಿ ಮುಗಿಸುವುದೊಳ್ಳೆಯದು" ಎಂದರು.

* * * *

ಶಿಷ್ಯ:– ತಾಯಿ, ಯಾವ ಕೆಟ್ಟ ಆಲೋಚನೆಯೂ ನನ್ನ ಮನಸ್ಸಿ ನಲ್ಲಿ ಏಳುವುದಿಲ್ಲ.

ಶ್ರೀಮಾತೆ:– (ಚಕಿತರಾಗಿ) ಹಾಗೆ ಹೇಳಬೇಡ. ಒಬ್ಬ ಅಂತಹ ಮಾತನ್ನು ಆಡಬಾರದು.

* * * *

ನಳಿನಿ ಮತ್ತು ಇತರ ಸ್ತ್ರೀಯರು ತಮ್ಮಲ್ಲಿ ವಾದಮಾಡಿ ಶ್ರೀಮಾತೆ ಯನ್ನು, "ಎಂತಹ ಸುಳ್ಳುಸಮಾಚಾರ ಒಳ್ಳೆಯದು?" ಎಂದು ಕೇಳಿದರು.

ಶ್ರೀಮಾತೆ:– ಸುಳ್ಳು ಸಮಾಚಾರದಲ್ಲಿ ಒಳ್ಳೆಯದೇನು, ಕೆಟ್ಟ ದೇನು? ಆದರೆ ಐಶ್ವರ್ಯಕ್ಕೆ ಸಂಬಂಧಪಟ್ಟ ಸುಳ್ಳುಸುದ್ದಿ ಒಳ್ಳೆಯದೆಂದು ಭಾವಿಸುತ್ತೀನೆ. ಯಾರಾದರೂ ಒಬ್ಬನಿಗೆ, "ನೀನು ಐಶ್ವರ್ಯವಂತ ನೆಂದು ಹೇಳಿದರೆ ಹೊರಗೆ ಎಷ್ಟೋ ದೈನ್ಯತೆ ತೋರಿದರೂ ಒಳಗೆ ಸಂತೋಷಪಡುವನು." ಸಾಕು ಈ ಸಮಾಚಾರ. ದೇವರಿಂದ ಏನನ್ನು ಇಚ್ಛಿಸಬೇಕು, ಹೇಳುತ್ತೀರಾ?

ನಳಿನಿ:– ಏಕೆ ಅತ್ತೇ! ನಮಗೆ ಪ್ರಪಂಚದಲ್ಲಿ ಶಾಂತಿಕೊಡುವ ಜ್ಞಾನ, ಭಕ್ತಿ ಮುಂತಾದುವನ್ನು ಕೋರಬೇಕು.

ಶ್ರೀಮಾತೆ:– ಒಂದು ಮಾತಿನಲ್ಲಿ ಹೇಳಬೇಕಾದರೆ, ದೇವರಿಂದ

ನಮ್ಮ ಆಸೆ ನಾಶವಾಗಲೆಂದು ಇಚ್ಛಿಸಬೇಕು. ಆಸೆಯೇ ಎಲ್ಲಾ ದುಃಖದ ಮೂಲ. ಇದೇ ನಮ್ಮ ಜನನ ಮರಣಗಳಿಗೆ ಕಾರಣ. ಇದೇ ನಮ್ಮ ಮುಕ್ತಿಗೆ ಆತಂಕ.

* * * *

ಒಬ್ಬ ಆಚಾರಶೀಲ ಗೃಹಿಣೀ ಭಕ್ತೆ ಶ್ರೀಮಾತೆಗೆ, "ತಾಯಿ, ನಿಮ್ಮ ಹತ್ತಿರ ಇರುವ ತರುಣ ವಿಧವೆಯರು ನಮ್ಮ ಕಡೆ ತಿನ್ನದ ಆಹಾರ ವನ್ನು ತಿನ್ನುವುದನ್ನು ನೋಡಿ ಆಶ್ಚರ್ಯವಾಯಿತು. ಸಮಾಜ ಇದನ್ನು ನಿಂದಿಸುವುದು" ಎಂದಳು.

ಶ್ರೀಮಾತೆ:– ಇವೆಲ್ಲ ಸಾಮಾಜಿಕ ವಿಷಯುಗಳು. ಒಂದೊಂದು ದೇಶದಲ್ಲಿ ಒಂದೊಂದು ವಿಧ ಆಚಾರ. ನಮ್ಮ ಕಡೆ ತರುಣ ವಿಧವೆಯರಿಗೆ, ಊಟ, ಉಡಿಗೆ ತೊಡಿಗೆಯಲ್ಲಿ ಸ್ವಲ್ಪ ಸ್ವಾತಂತ್ರ್ಯಕೊಟ್ಟಿರುವರು. ಅವರು ಸ್ವಾಭಾವಿಕವಾಗಿ ಇದನ್ನು ಆಶಿಸುವರು. ಬಹಿರಂಗವಾಗಿ ರುಚಿ ಊಟ ಕೊಡಲು ಅವಕಾಶಕೊಡದಿದ್ದರೆ, ಗೋಪ್ಯವಾಗಿ ತಿನ್ನುವರು. ಅದರ ಬದಲು ಅವರಿಗೆ ಹಾಗೆ ಮಾಡಲು ಸ್ವಲ್ಪ ಸ್ವಾತಂತ್ರ್ಯಕೊಟ್ಟು, ಕ್ರಮೇಣ ಹಾಗೆ ಮಾಡುವುದು ಸೂಕ್ತವಲ್ಲವೆಂದು ಹೇಳಿದರೆ, ತಾವೇ ಅದನ್ನು ಬಿಟ್ಟುಬಿಡುವರು. ಕೆಲಸಕ್ಕೆ ಬಾರದ ಇಂತಹ ವಿಷಯುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಇದರಿಂದ ನೀನು ಗುರುದೇವರನ್ನು ಮರೆಯುವೆ. ಜನ ಏನಾದರೂ ಹೇಳಿಕೊಳ್ಳಲಿ. ಗುರುದೇವರನ್ನು ನೀನು ಮನದಲ್ಲಿಟ್ಟು ನಿನಗೆ ಸೂಕ್ತತೋರಿದುದನ್ನು ಮಾಡು. "ಜನ ಗಳನ್ನು ಕ್ರಿಮಿಗಳೆಂದು ಭಾವಿಸು" ಎನ್ನುತ್ತಿದ್ದರು ಶ್ರೀಗುರುದೇವರು. ಅದು ಎಲ್ಲರಿಗೂ ಅನ್ವಯಿಸುವುದಿಲ್ಲ. ಚಾಡಿಕೋರರು ಮುಂತಾದವರಿಗೆ ಮಾತ್ರ ಇದು ಅನ್ವಯಿಸುವುದು.

* * * *

ಕೊನೆಯ ದಿನಗಳಲ್ಲಿ ಶ್ರೀಮಾತೆಯವರು ಜಯರಾಮವಟಿಯಲ್ಲಿದ್ದಾಗ ಬ್ರಾಹ್ಮಣ ಅಡಿಗೆಯವಳು ರಾತ್ರಿ ಒಂಭತ್ತು ಘಂಟೆ ಸಮಯದಲ್ಲಿ ಬಂದು, "ನಾನು ನಾಯಿ ಮುಟ್ಟಿದೆ. ಸ್ನಾನಮಾಡಬೇಕು" ಎಂದಳು.

ಶ್ರೀಮಾತೆ:– ರಾತ್ರಿ ಹೊತ್ತಾಗಿದೆ. ಈಗ ಸ್ನಾನ ಮಾಡಬೇಡ. ನಿನ್ನ ಕೈಕಾಲು ತೊಳೆದುಕೊಂಡು ಬಟ್ಟೆ ಬದಲಾಯಿಸಿದರೆ ಸಾಕು.

ಅಡಿಗೆಯವಳು:– ಇಲ್ಲ, ಅದಾಗುವುದಿಲ್ಲ.

ಶ್ರೀಮಾತೆ:– ಹಾಗಾದರೆ ಸ್ವಲ್ಪ ಗಂಗಾ ನೀರನ್ನು ದೇಹದ ಮೇಲೆ ಚಿಮುಕಿಸಿಕೊ.

ಇದರಿಂದ ಆಕೆಗೆ ತೃಪ್ತಿಯಾಗಲಿಲ್ಲ. "ಹಾಗಾದರೆ ನನ್ನನ್ನು ಮುಟ್ಟು" ಎಂದರು ಶ್ರೀಮಾತೆ.

* * * *

ಶ್ರೀಮಾತೆ ಒಮ್ಮೆ ಹೀಗೆ ಹೇಳಿದರು: "ನೀನು ಒಂದು ಕಡೆ ಯಿಂದ ಇನ್ನೊಂದು ಕಡೆ ಹೋದರೆ ನಿನ್ನ ಸುತ್ತಮುತ್ತಲಿರುವುದನ್ನೆಲ್ಲಾ ಚೆನ್ನಾಗಿ ಗಮನದಲ್ಲಿಡು. ಅಲ್ಲಿ ನಡೆಯುವುದನ್ನೆಲ್ಲಾ ಗ್ರಹಿಸು. ಆದರೆ ಬಾಯಿಬಿಡಬೇಡ" ಎಂದರು.

* * * *

ಒಂದು ದಿನ ಶ್ರೀಮಾತೆ ಶಿಷ್ಯನಿಗೆ ಹೀಗೆಂದರು: "ಮಗು, ನಿನಗೆ ಅಪಾಯ ಬರುವುದಿಲ್ಲವೆಂಬುದು ಸತ್ಯವಲ್ಲ. ತೊಂದರೆ ಬರಬಹುದು. ಆದರೆ ಬಹಳ ಕಾಲ ಇರುವುದಿಲ್ಲ. ಸೇತುವೆ ಕೆಳಗೆ ನೀರಿನಂತೆ ಹರಿದು ಹೋಗುವುದು" ಎಂದರು.

* * * *

ಒಂದು ದಿನ ಜಯರಾಮವಟಿಯಲ್ಲಿ ಯಾರೋ ರಾಧು ತಾಯಿ ಯನ್ನು ನಿಂದಿಸಿದರು. ಅದನ್ನು ಕೇಳಿ, "ಮಾತಿನಿಂದಲೂ ಒಬ್ಬರನ್ನು ನೋಯಿಸಕೂಡದು. ಅನಾವಶ್ಯಕವಾಗಿ ಕಹಿಯಾದ ಸತ್ಯವನ್ನು ಹೇಳ ಕೂಡದು. ಇಂತಹ ಅಪ್ರಬದ್ಧ ಮಾತನ್ನು ಆಡುತ್ತಿದ್ದರೆ ಒಬ್ಬನ ಸ್ವಭಾ ವವೂ ಹಾಗೆಯೇ ಆಗುವುದು. ಮಾತಿನ ಮೇಲೆ ನಿಗ್ರಹ ವಿಲ್ಲದಿದ್ದರೆ ಮಾಧುರ್ಯ ಕಳೆದುಕೊಳ್ಳುವನು. ಶ್ರೀರಾಮಕೃಷ್ಣರು 'ಕುಂಟನನ್ನು ಅವನು ಹೇಗೆ ಕುಂಟನಾದ ಎಂದು ಕೇಳಕೂಡದು' ಎನ್ನುತ್ತಿದ್ದರು."

* * * *

ಒಂದು ದಿನ ಶ್ರೀಮಾತೆ ಮೈಗೆ ಎಣ್ಣೆ ಸವರಿಕೊಳ್ಳುತ್ತಿದ್ದಾಗ ಯಾರೋ ಅಂಗಳದಲ್ಲಿ ಕಸಗುಡಿಸುತ್ತಿದ್ದರು. ಕೆಲಸವಾದ ಮೇಲೆ ಪರಕೆ ಯನ್ನು ಮೂಲೆಗೆ ಎಸೆದರು. ಇದನ್ನು ನೋಡಿ ಶ್ರೀಮಾತೆ, "ಏನು, ಕೆಲಸವಾದ ಮೇಲೆ ಸ್ವಲ್ಪವೂ ಗಮನವಿಲ್ಲದೆ ಪರಕೆ ಎಸೆಯುವೆಯಲ್ಲ! ಮೆಲ್ಲಗೆ ಮತ್ತೊಂದು ಸ್ಥಳದಲ್ಲಿ ಇಡುವುದಕ್ಕೂ ಎಸೆದಷ್ಟೇ ಕಾಲತೆಗೆದು ಕೊಳ್ಳುವುದು. ಎಂತಹ ಕೆಲಸಕ್ಕೆ ಬಾರದ ವಸ್ತುವನ್ನಾದರೂ ನಿಕೃಷ್ಟ

ವಾಗಿ ನೋಡಕೂಡದು. ನೀನು ಒಂದು ವಸ್ತುವನ್ನು ಗೌರವಿಸಿದರೆ, ಅದು ನಿನ್ನನ್ನು ಗೌರವಿಸುವುದು. ನಿನಗೆ ಪುನಃ ಪರಕೆ ಬೇಡವೆ? ಅದೂ ಅಲ್ಲದೆ ಅದು ಸಂಸಾರದ ಒಂದು ಭಾಗ. ಆ ದೃಷ್ಟಿಯಿಂದಲಾದರೂ ಅದನ್ನು ಗೌರವದಿಂದ ಕಾಣಬೇಕು. ಎಂತಹ ಸಣ್ಣ ಕೆಲಸವನ್ನಾದರೂ ಗೌರವದಿಂದ ಮಾಡಬೇಕು" ಎಂದರು.

* * * *

ಒಂದು ದಿನ ರಾಧೆಯ ಮುದ್ದು ಬೆಕ್ಕು 'ಮಿನಿ' ಅಂಗಳದಲ್ಲಿ ಮಲಗಿತ್ತು. ಒಬ್ಬ ಗೃಹಿಣೀ ಭಕ್ತೆ ಅದನ್ನು ತನ್ನ ಕಾಲಿನಿಂದ ಸವರುತ್ತಿದ್ದಳು. ಕ್ರಮೇಣ ತನ್ನ ಕಾಲನ್ನು ಅದರ ತಲೆಯ ಮೇಲೆ ಇಟ್ಟಳು. ಇದನ್ನು ನೋಡಿ ಶ್ರೀಮಾತೆ, "ಏನು ಮಾಡುತ್ತಿರುವೆ? ತಲೆ ಗುರುಸ್ಥಾನ. ಕಾಲಿನಿಂದ ತಲೆ ಮುಟ್ಟಬಾರದು. ಬೆಕ್ಕಿಗೆ ನಮಸ್ಕರಿಸು" ಎಂದರು. ಭಕ್ತಳು, "ನನಗೆ ಇದು ಗೊತ್ತೇ ಇರಲಿಲ್ಲ. ಈ ದಿನ ಒಂದು ಪಾಠ ಕಲಿತೆ" ಎಂದಳು.

—:o:—

ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚ್‌ನಲ್ಲಿ ಮುದ್ರಿಸಲ್ಪಟ್ಟಿತು.

## ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು
### ಮೈಸೂರು

| | | | |
|---|---|---|---|
| ಶ್ರೀರಾಮಕೃಷ್ಣ ಉಪದೇಶಾಮೃತ | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) | ೩ | ೮ | ೦ |
| ಪತ್ರಮಾಲೆ | ೩ | ೦ | ೦ |
| ಶ್ರೀ ಶಾರದಾದೇವಿ | ೨ | ೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ | ೨ | ೮ | ೦ |
| ಶ್ರೀರಾಮಕೃಷ್ಣ | ೦ | ೧೨ | ೦ |
| ರಾಜಯೋಗ | ೨ | ೧೦ | ೦ |
| ಕರ್ಮಯೋಗ | ೧ | ೮ | ೦ |
| ಭಕ್ತಿಯೋಗ | ೧ | ೦ | ೦ |
| ತ್ರಿವೇಣೀ (ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶಾರದಾದೇವಿ ಸಂಕ್ಷಿಪ್ತ ಜೀವನ) | ೧ | ೦ | ೦ |
| ಪರಮಾರ್ಥ ಪ್ರಸಂಗ | ೨ | ೦ | ೦ |
| ಶ್ರೀ ಗುರುದೇವರ ವಚನ | ೧ | ೦ | ೦ |
| ಬ್ರಹ್ಮಾನಂದ ವಚನ ಸುಧೆ | ೧ | ೪ | ೦ |
| ಶ್ರೀರಾಮಕೃಷ್ಣ ಉಪನಿಷತ್ | ೧ | ೪ | ೦ |
| ಪರಿವ್ರಾಜಕ | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ | ೧ | ೪ | ೦ |
| ವಿದ್ಯಾಭ್ಯಾಸ | ೦ | ೧೦ | ೦ |
| ಹಿಂದೂ ಧರ್ಮಸಾರ | ೦ | ೧೦ | ೦ |
| ವರ್ತಮಾನ ಭಾರತ | ೦ | ೧೦ | ೦ |
| ವಿವೇಕವಾಣಿ | ೦ | ೧೦ | ೦ |
| ನನ್ನ ಗುರುದೇವ | ೦ | ೮ | ೦ |
| ಚಿಕಾಗೋ ಉಪನ್ಯಾಸ | ೦ | ೭ | ೦ |
| ಆರತಿ | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ | ೦ | ೪ | ೦ |
| ಈಶ್ವರಾನುರಾಗ | ೦ | ೪ | ೦ |

| | | | | |
|---|---|---|---|---|
| ನೊಂದ ಜೀವಕ್ಕೆ ಭರವಸೆ | .. | ೦ | ೪ | ೦ |
| ಭಾರತ ಮಹಿಳೆ | .. | ೦ | ೪ | ೦ |
| ಕರ್ಮರಹಸ್ಯ | .. | ೦ | ೪ | ೦ |
| ಸಾಧನ | .. | ೦ | ೪ | ೦ |
| ಮುಮುಕ್ಷು ಲಕ್ಷಣ | .. | ೦ | ೪ | ೦ |
| ಶ್ರೀ ರಾಮಕೃಷ್ಣ ಲೀಲಾಪ್ರಸಂಗ (ಗುರುಭಾವ) | .. | ೧ | ೮ | ೦ |
| ನಾಗಮಹಾಶಯ | .. | ೦ | ೧೨ | ೦ |
| ದಿವ್ಯವಾಣಿ | .. | ೧ | ೦ | ೦ |
| ಶ್ರೀ ರಾಮಕೃಷ್ಣ ವಚನಾಮೃತ ಭಾಗ ೧ | .. | ೧ | ೦ | ೦ |
| ,, ಭಾಗ ೨ | .. | ೧ | ೦ | ೦ |
| ಅಮರನಾಥ ಯಾತ್ರೆ | .. | ೧ | ೦ | ೦ |
| Drig Drishya Viveka | .. | 2 | 0 | 0 |
| Mandukya Upanishad with Goudapada karika | .. | 8 | 0 | 0 |

ಶ್ರೀ ಶಾರದಾದೇವಿ ಬೆಲೆ: ೨-೦-೦

ಶ್ರೀಮಾತೆಯ ಬದುಕು ದೂರದ ವೀಣಾ ಧ್ವನಿಯಂತೆ ಸುಮಧುರ, ಸುಪ್ರಶಾಂತ. ಕಿವಿಗೊಟ್ಟು ಆಲಿಸಿದಲ್ಲದೆ ಕೇಳುವುದೂ ಅಸಂಭವ. ಮನಮುಟ್ಟ ಕೇಳಿದಲ್ಲದೆ ಇದರ ಇಂಪು ಅನುಭವಕ್ಕೆ ಬರುವುದಿಲ್ಲ. ಹೆದ್ದಾರಿಗೆ ದೂರದಲ್ಲಿರುವ ಎಲೆಮರೆಯ ಹೂವಿನ ನರುಗಂಪಿನಂತೆ ಅವಸರದ ಪಯಣಿಕರಿಗೆ ಅದು ಅವೇದ್ಯ. ಅದು ದೈನಂದಿನ ಸಂಸಾರಿಕ ಜೀವನದ ಸಕಲ ಲಕ್ಷಣಗಳಿಂದ ಸಮನ್ವಿತವಾಗಿದೆ. ವೈಭವ ಪೂರ್ಣವಾದರೂ ವಿನಯದೀನ, ಸಾಹಸಪೂರ್ಣವಾದರೂ ನೀರಸ ಸಾಮಾನ್ಯ ಶ್ರದ್ಧಾ ಮಹಿಮೆಯಿಂದ ಧೀರ ವಾದರೂ ಕೌಟುಂಬಿಕ ಕಷ್ಟಕ್ಲೇಶಗಳಿಂದ ದುಃಖಪೂರ್ಣ; ಶತ ಶತ ಅಪಮಾನ ತಾಡಿತವಾದರೂ ಸರ್ವದಾ ಕ್ಷಮಾಶೀಲ; ಆದಿಶಕ್ತಿಯ ಸರ್ವಶಕ್ತ್ರವಾದ ಬೆಂಬಲವಿದ್ದರೂ ಅಬಲರಂತೆ ವ್ಯವಹರಿಸುವ ಸಹಿಷ್ಣು.

(ಕುವೆಂಪು ಅವರ ಮುನ್ನುಡಿಯಲ್ಲಿ)

ತ್ರಿವೇಣೀ ಬೆಲೆ: ೧-೦-೦

"ತ್ರಿವೇಣೀ" ಶ್ರೀರಾಮಕೃಷ್ಣ, ಸ್ವಾಮಿವಿವೇಕಾನಂದ ಶ್ರೀಶಾರದಾದೇವಿ ಇವರ ಜೀವನ ಸಂಗಮ. ಸಾಕ್ಷಾತ್ಕಾರದ ಜಟಾಜೂಟದಿಂದ ಧುಮುಕಿ ಭವದ ಅಘಮೋಚನೆಗಾಗಿ ಗಂಗೆಯಂತೆ ಪ್ರವಹಿಸುವುದೇ ಶ್ರೀ ರಾಮಕೃಷ್ಣರ ಜೀವನ. ಕ್ಷಾತ್ರತೇಜಸ್ಸಿನಿಂದಲೂ ಓಜಸ್ಸಿನಿಂದಲೂ ಶಕ್ತಿಪೂರ್ಣವಾಗಿ ಭೋರ್ಗರೆದು ಹರಿಯುವ ಜೀವನ ಯಮುನೆ ಈ ಗಂಗೆಗೆ ಸೇರುವುದು. ಸಾತ್ತ್ವಿಕ ಪ್ರಧಾನವಾಗಿ ಕಂಡರೂ ಕಾಣದಂತೆ, ಪರಿಶುದ್ಧಾತ್ಮರೂ ಕ್ಷಮಾಶೀಲರೂ ಆದ ಮಹಾ ತಪಸ್ವಿನಿ ಈ ಶಾರದಾದೇವಿಯವರ ಧ್ಯಾನಮಯ ಮೌನಜೀವನ ಧಾರೆಯಾದ ಸರಸ್ವತಿ ಇಲ್ಲಿ ಸಂಗಮವಾಗಿದೆ.

ಭಾರತ ಮಹಿಳೆ ಬೆಲೆ: ೦-೮-೦

ಸ್ವಾಮಿ ವಿವೇಕಾನಂದರು ಭಾರತೀಯ ನಾರಿಯರ ಆದರ್ಶದ ಸಾರವನ್ನು ತಮ್ಮದೇ ಆದ ಅನುಕರಣೀಯ ಶೈಲಿಯಲ್ಲಿ ಮನಮುಟ್ಟುವಂತೆ ಆಂಗ್ಲ ಭಾಷೆಯಲ್ಲಿ ಮಾಡಿದ ಉಪನ್ಯಾಸದ ಭಾಷಾಂತರ.

ಶ್ರೀ ಮಾತೆಯವರ ಬದುಕೇ ಸರಳ. ಎಂತಹ ಜಟಿಲ ಪ್ರಶ್ನೆಗೂ ಅವರು ಸರಳ ರೀತಿ ಉತ್ತರ ಕೊಡುವರು. ಇಲ್ಲಿ ಬರುವ ಹಲವು ಪ್ರಶ್ನೆಗಳು ನಾವೆ ಅವರಿಗೆ ಹಾಕಿದಂತೆ ಇದೆ. ಅವರ ಉತ್ತರದಲ್ಲಿ ಯಾವ ಅನುಮಾನವೂ ಇಲ್ಲ. ಅದರಲ್ಲಿ ಅವರ ಅನುಭವದ ಶಕ್ತಿ ಇದೆ. ಸ್ಪಷ್ಟತೆ ಇದೆ. ಶ್ರೀಮಾತೆ ಈ ಸಂಭಾಷಣೆ ದೇಗುಲದಲ್ಲಿ ಜೀವಿಸುತ್ತಿರುವರು. ನಮ್ಮಂತಹ ಹಲವು ಮಕ್ಕಳ ತಾಯಿ ಅವರು. ಪಾಪಿ, ಪಟಿಂಗ, ನೀಚ, ಮೂಢ, ಯಾರೂ ತಾಯೊಲುಮೆಗೆ ಬಾಹಿರರಲ್ಲ. "ಪಾಪಿಗಳಲ್ಲವೆ, ಪಾಪವನ್ನು ಕಳೆದುಕೊಳ್ಳಲು ಬರುವವರು ಗಂಗೆಗೆ? ಗಂಗೆಯೆ, 'ನಾನು ಮಡಿ ಮುಟ್ಟಬೇಡಿ' ಎನ್ನುವಳೆ?" ಎನ್ನುತ್ತಿದ್ದರು. ಎಲ್ಲರನ್ನೂ ಸಹಿಸಿ, ಸಮಾಧಾನ ಮಾಡಿ ಭಗವಂತನ ಸೇವೆಗೆ ಯೋಗ್ಯರನ್ನಾಗಿ ಮಾಡುವ ಮಹಾ ಶಕ್ತಿ, ತಪಸ್ಸು, ಪ್ರೀತಿಯ ಅನುಭವವಾಗವುದು ಓದುಗರಿಗೆ ಈ ಸಂಭಾಷಣೆಯಲ್ಲಿ.

# ಶ್ರೀ ಶಾರದಾದೇವಿ ಸಂಭಾಷಣೆ

---

ಜೀವನದ ಎಲ್ಲಾ ಕಾರ್ಯಕ್ಷೇತ್ರದಲ್ಲಿಯೂ ತಾಯಿ ಪಾತ್ರ ಧರಿಸಿರುವ ಜೀವಿಯ ಹಣೆಯ ಬರಹವೆ ಇದು. ಸಾಧಾರಣ ಮನೆಯಲ್ಲಿ ತಾಯಿ ಯಾದರೂ ಒಂದೆ, ಶ್ರೀಮನ್ನಾರಾಯಣನ ಸತಿಯಾದ ಲಕ್ಷ್ಮಿಯಾದರೂ ಒಂದೆ. ಒಂದು ಸಣ್ಣ ತಾಯಿಯ ಪಾತ್ರ, ಮತ್ತೊಂದು ಜಗಜ್ಜನನಿಯ ಪಾತ್ರ; ಒಂದು ಸಣ್ಣ ಸಂಸಾರ, ಮತ್ತೊಂದು ವಿಶ್ವಸಂಸಾರ. ಮಕ್ಕಳು ಆರೋಗ್ಯವಾಗಿ ಉಂಡು ನಲಿಯುತ್ತಿರುವಾಗ ತಂದೆ ಮಕ್ಕಳನ್ನು ಮುದ್ದಿಸಲು ಸ್ವಲ್ಪಕಾಲ ಎತ್ತಿಕೊಳ್ಳುವನು. ಅವು ರೋಗರುಜಿನಗಳಿಗೆ ತುತ್ತಾಗಿ ತಂಟೆಮಾಡಿ ಅಳುತ್ತಿರುವಾಗ ಸಮಾಧಾನಮಾಡಿ ದಿನವೆಲ್ಲ ದುಡಿದು ಬೆಳೆಸುವ ಜವಾಬ್ದಾರಿ ತಾಯಿಯದು. ಹಾಗೆಯೇ ಶ್ರೀ ಶಾರದಾದೇವಿಯರಿಗೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸಿಕ್ಕಿದ ಮುಕ್ಕಾಲು ಪಾಲು ಭಕ್ತಗಣವಲ್ಲಿ ಇನ್ನೂ ದೈವೋನ್ಮಾದ ತೀವ್ರವಲ್ಲದವರು, ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆ ಇದ್ದವರೇ ಹೆಚ್ಚು. ಇಂತಹ ಜನ ಕೊಡುವ ಕೋಟಲೆ ಸಹಿಸಿ ಪ್ರಾಪಂಚಿಕರ ಮಾತು ಕೇಳಿ ಕೇಳಿ ಹೃದಯ ದಹಿಸುತ್ತಿದ್ದರೂ, ಅವರೆಲ್ಲ ದೇವರೆಡೆಗೆ ತೆರಳಲಿ ಎಂದು ಸದಾ ಆಶೀರ್ವದಿಸಿ, ಮನಸ್ಸನ್ನು ಅನವರತ ಭಗವಂತನಡಿದಾವರೆಯಲ್ಲಿ ಮುಡುಪಾಗಿಡಬೇಕಾದರೆ ಇದೊಂದು ಅಸಾಧಾರಣ ತಪಸ್ಸು. ಶರಾಘಾತದಿಂದ ಜರ್ಝರಿತನಾಗಿ ದೇಹ ನೋವಿನಿಂದ ನರಳುತ್ತಿದ್ದರೂ ಸದಾ ಕೃಷ್ಣಚಿತ್ತನಾದ ಭೀಷ್ಮನ ನೆನಪನ್ನು ತರುವುದು ಇವರ ಜೀವನ. ಕೋಟಲೆಯಿಂದ ದೂರವಿರುವುದು ಸುಲಭ. ಹಾಗೆ ಹೋಗುವುದಕ್ಕೆ ಸಾಧ್ಯವಾದರೂ, ಹೋಗದೆ ತಾವೇ ಭವಭಾರವನ್ನು ಹೊತ್ತುಕೊಂಡು ನಮ್ಮೆಡೆಗೆ ಇಳಿದು ಬಂದು ನಮ್ಮನ್ನು ಉದ್ಧರಿಸುವುದಕ್ಕೆ ತವಕ ಪಡುವುದೊಂದು ಅಪೂರ್ವ ಚಿತ್ರ!